ಪ್ರಕಟನೆ
ಶ್ರೀ ಶಿವರಾತ್ರೀಶ್ವರ ಧಾರ್ಮಿಕ ದತ್ತಿ
ಸ್ವರವಚನ ಸಾಹಿತ್ಯ ಮಾಲೆ

# ಸ್ವರವಚನ ಸಂಪುಟ : ನಾಲ್ಕು

ಸಂಪಾದಕರು
ವೈ.ಸಿ. ಭಾನುಮತಿ

ಜಗದ್ಗುರು ಶ್ರೀ ಶಿವರಾತ್ರೀಶ್ವರ ಗ್ರಂಥಮಾಲೆ
ಮೈಸೂರು

# ಶುಭಹಾರೈಕೆ

ವೀರಶೈವ ಧಾರ್ಮಿಕ ಪೀಠಗಳ, ವಿಶ್ವವಿದ್ಯಾಲಯಗಳ ಮತ್ತು ವಿದ್ವಾಂಸರುಗಳ ಒಂದು ಶತಮಾನದ ದುಡಿಮೆಯಿಂದಾಗಿ 'ವಚನಸಾಹಿತ್ಯ'ದ ಸಂಶೋಧನೆ–ಪ್ರಕಟನೆ ಒಂದು ಹಂತಕ್ಕೆ ಬಂದು ನಿಂತಿದೆ ಎನ್ನಬಹುದು. ಇದೀಗ ಇಷ್ಟೇ ವಿಪುಲವಾಗಿರುವ ಇದಕ್ಕಿಂತ ಹೆಚ್ಚು ಜನಪ್ರಿಯವಾಗಿರುವ 'ಸ್ವರವಚನಸಾಹಿತ್ಯ'ದ ಸಂಶೋಧನೆ–ಪ್ರಕಟನೆ ವ್ಯಾಪಕವಾಗಿ, ವ್ಯವಸ್ಥಿತವಾಗಿ ನಡೆಯಬೇಕಾಗಿರುವುದು ಅಗತ್ಯವಾಗಿದೆ. ಡಾ. ಫ.ಗು. ಹಳಕಟ್ಟಿಯವರು ಮೊದಲುಮಾಡಿ ಅನೇಕ ಜನ ವಿದ್ವಾಂಸರು ಈ ಸಾಹಿತ್ಯವನ್ನು ಆಗಾಗ ಪ್ರಕಟಿಸುತ್ತ ಬಂದರೂ ಅದು ಬೆಳಕುಕಂಡುದು ಕಡಿಮೆ. ಹೀಗಾಗಿ ಪ್ರಾಚೀನ ಹಸ್ತಪ್ರತಿಗಳಲ್ಲಿ, ಜನರ ಬಾಯಿಯಲ್ಲಿ ಬದುಕಿಬಂದ ಈ ಪ್ರಕಾರ ವನ್ನು ಒಮ್ಮೆ ಇಡಿಯಾಗಿ ಪ್ರಕಟಿಸಬೇಕಾಗಿದೆ. ಹಾಗೆ ಪ್ರಕಟವಾದರೆ ನಮ್ಮ ಹಾಡುಗಬ್ಬ ಪರಂಪರೆಗೆ ಇರುವ ಪ್ರಾಚೀನತೆಯನ್ನೂ ನಿರಂತರತೆಯನ್ನೂ ಎತ್ತಿ ತೋರಿಸಿದಂತಾಗು ತ್ತದೆ. ಜೊತೆಗೆ ವೀರಶೈವಕ್ಕೆ ತನ್ನದೇ ಆದ ಹಾಡುಗಬ್ಬ ಪರಂಪರೆಯೊಂದು ಇರುವುದನ್ನು ಸ್ಪಷ್ಟಪಡಿಸಿದಂತಾಗುತ್ತದೆ. ಈ ಘನವಾದ ಉದ್ದೇಶವನ್ನು ಕಣ್ಣು ಮುಂದಿಟ್ಟುಕೊಂಡು ಪ್ರಸ್ತುತ ಯೋಜನೆಯನ್ನು ಶ್ರೀ ಶಿವರಾತ್ರೀಶ್ವರ ಧಾರ್ಮಿಕ ದತ್ತಿಯಿಂದ ಕೈಗೆತ್ತಿಕೊಂಡಿದೆ. ಈಗಾಗಲೇ ಡಾ. ಎಲ್. ಬಸವರಾಜು ಅವರು ಸಂಪಾ ದಿಸಿದ 'ಶಿವದಾಸ ಗೀತಾಂಜಲಿ'ಯನ್ನು ಜೆ. ಎಸ್. ಎಸ್. ಗ್ರಂಥಮಾಲೆಯಿಂದ ಪ್ರಕಟಿ ಸುವ ಮೂಲಕ ಈ ಸಾಹಿತ್ಯದ ಮಹತ್ವವನ್ನು ಪ್ರಥಮಬಾರಿಗೆ ಬೆಳಕಿಗೆ ತಂದುದಲ್ಲದೆ ಅದರ ಮುಂದುವರಿಕೆಯೆಂಬಂತೆ ಈ ಯೋಜನೆಯನ್ನು ಹಮ್ಮಿಕೊಂಡಿದೆ.

ಇಂಥ ಒಂದು ವ್ಯಾಪಕ ಯೋಜನೆಯ ಅನುಷ್ಠಾನಕ್ಕೆ ವಿದ್ವಾಂಸರ ನೆರವು ಅಗತ್ಯ. ಕರ್ನಾಟಕದ ಬೇರೆ ಬೇರೆ ಭಾಗಗಳ ವಿದ್ವಾಂಸರು ಈ ಕಾರ್ಯದಲ್ಲಿ ಸಹಕರಿಸಲು ಮುಂದೆ ಬಂದಿರುವುದು ಒಂದು ಶುಭಯೋಗ. ಇವರೆಲ್ಲರ ನೆರವಿನಿಂದ ಸ್ವರವಚನ ಸಾಹಿತ್ಯವನ್ನು ಮೊದಲು ಬಿಡಿಯಾದ ಸಂಪುಟಗಳ ರೂಪದಲ್ಲಿ ಪ್ರಕಟಿಸುವುದು ಎಂದು ಯೋಜಿಸಲಾಗಿದೆ. ಈ ಯೋಜನೆಯು ಫಲಪ್ರದವಾಗುವ ರೀತಿಯಲ್ಲಿ ಎಲ್ಲ ಸ್ವರ ವಚನಗಳು ಹಸ್ತಪ್ರತಿಗಳಿಂದ, ಜನಪದರ ಕಂಠಸ್ಥಲಗಳಿಂದ, ಸ್ಮೃತಿಪಟಲಗಳಿಂದ ಸೆರೆ ಬಿಡಿಸಿಕೊಂಡು ಬೆಳಕಿಗೆ ಬಂದ ಬಳಿಕ ಶ್ರೀ ಶಿವರಾತ್ರೀಶ್ವರ ಧಾರ್ಮಿಕದತ್ತಿಯು ಪ್ರಕಟ ಸಿದ ಹಾಗೂ ಅನ್ಯರು ಪ್ರಕಟಿಸಿದ ಎಲ್ಲ ಸಂಪತ್ತನ್ನು ಕ್ರೋಢೀಕರಿಸಿ, ವ್ಯವಸ್ಥಿತವಾಗಿ ವರ್ಗೀಕರಿಸಿ ಅದನ್ನು 'ಸಮಗ್ರ ಸ್ವರವಚನಸಾಹಿತ್ಯ ಪ್ರಕಟನ ಯೋಜನೆ' ಹೆಸರಿ ನಿಂದ ಸಂಪುಟ ಶ್ರೇಣಿಯಲ್ಲಿ ಹೊರತರಲು ಸಂಕಲ್ಪಿಸಲಾಗಿದೆ.

ಈ ಸಂಕಲ್ಪವು ಈಡೇರುವಂತಾಗಲೆಂದು ಆಶಿಸುತ್ತ, ಇದರಲ್ಲಿ ನೆರವಾದ ಎಲ್ಲ ರಿಗೂ ಸಕಲ ಶ್ರೇಯಸ್ಸನ್ನು ಹಾರೈಸುತ್ತೇವೆ.

**ಶ್ರೀ ಶಿವರಾತ್ರಿ ದೇಶಿಕೇಂದ್ರ ಸ್ವಾಮಿಗಳು**

ಮಾಸ ಶಿವರಾತ್ರಿ ಆಗಸ್ಟ್ ೨೪, ೧೯೯೫

# ಪ್ರಕಾಶಕರ ನುಡಿ

ಸುತ್ತೂರು ಜಗದ್ಗುರು ಶ್ರೀ ಶಿವರಾತ್ರೀಶ್ವರ ವೀರಸಿಂಹಾಸನ ಮಠ–ನಮ್ಮ ನಾಡಿನ ಒಂದು ಪ್ರಸಿದ್ಧ ಧಾರ್ಮಿಕಪೀಠ. ಧರ್ಮವನ್ನು ಶರಣಸಿದ್ಧಾಂತದ ವ್ಯಾಪಕ ಅರ್ಥದಲ್ಲಿ ಪರಿಭಾವಿಸಿದ ಈ ಪೀಠವು 'ದಾಸೋಹ' ಪದವನ್ನು ಕಾಲಕ್ಕೆ ತಕ್ಕಂತೆ ಪ್ರಸ್ತುತಗೊಳಿಸುತ್ತ ಬಂದಿದೆ. ಈ ಪ್ರಯೋಗದ ಒಂದು ಅಂಗ 'ಸಾಹಿತ್ಯದಾಸೋಹ'. ಅದರ ಫಲವೇ ಜಗದ್ಗುರು ಶ್ರೀ ಶಿವರಾತ್ರೀಶ್ವರ ಗ್ರಂಥಮಾಲೆ. ಈ ಗ್ರಂಥಮಾಲೆ ಯಲ್ಲಿ 'ಶಿವದಾಸ ಗೀತಾಂಜಲಿ'ಯನ್ನು ಪ್ರಕಾಶನಗೊಳಿಸುವ ಮೂಲಕ ಶರಣರ 'ಸ್ವರ ವಚನಸಾಹಿತ್ಯ' ಪ್ರಕಟನೆಯು ಇತಿಹಾಸದಲ್ಲಿ ಶ್ರೀಮಠವು, ಡಾ. ಫ. ಗು. ಹಳಕಟ್ಟಿ ಯವರ ಬಳಿಕ ಇನ್ನೊಂದು ಹೊಸಘಟ್ಟವನ್ನೇ ತೆರೆಯಿತು. ಧರ್ಮದಾಸೋಹದ ಜೊತೆಗೆ ಈ ಸಾಹಿತ್ಯ ದಾಸೋಹದ ಕಾರ್ಯವೂ ಕೂಡ ನಿರಂತರವಾಗಿ ಮುಂದುವರಿಯ ಬೇಕೆಂಬ ಸದುದ್ದೇಶದಿಂದ ಪರಮಪೂಜ್ಯ ಜಗದ್ಗುರು ಡಾ. ಶ್ರೀ ಶಿವರಾತ್ರಿರಾಜೇಂದ್ರ ಮಹಾಸ್ವಾಮಿಗಳವರು 'ಶ್ರೀ ಶಿವರಾತ್ರೀಶ್ವರ ಧಾರ್ಮಿಕ ದತ್ತಿ'ಯನ್ನು ಸಂಸ್ಥಾಪಿಸಿ ದರು. ಈ ದತ್ತಿಯ ಆಶ್ರಯದಲ್ಲಿ ಸಾಹಿತ್ಯದಾಸೋಹದ ಅಂಗವಾಗಿ ಈಗಾಗಲೇ ಹಲ ವಾರು ವಿಚಾರ ಸಂಕಿರಣಗಳನ್ನೂ, ಸಮ್ಮೇಳನಗಳನ್ನೂ ನೆರವೇರಿಸುತ್ತ ಬಂದಿರುತ್ತದೆ. ಉತ್ತಮೋತ್ತಮ ಗ್ರಂಥಗಳನ್ನು ಪ್ರಕಟಿಸಲಾಗುತ್ತಿದೆ. ಈ ಗ್ರಂಥಮಾಲೆಯಿಂದ ಆರಂಭಿಸಿದ ಸ್ವರವಚನಸಾಹಿತ್ಯ ಪ್ರಕಟನೆಯು ಮುಂದುವರಿಕೆಯೆಂಬಂತೆ ''ಮುಪ್ಪಿನ ಷಡಕ್ಷರಿಗಳ ಕೈವಲ್ಯಪದ ಸಂಪುಟವನ್ನು ಪ್ರಕಟಿಸಿದೆ. ಈಗ ಈ ಪ್ರಯತ್ನಕ್ಕೆ ಪೂರ್ಣ ಸ್ವರೂಪವನ್ನು ಕೊಡುವ ಉದ್ದೇಶದಿಂದ ಬೃಹತ್‌ಪ್ರಮಾಣದ 'ಸಮಗ್ರ ಸ್ವರವಚನ ಸಾಹಿತ್ಯ ಪ್ರಕಟನ ಯೋಜನೆ'ಯನ್ನು ಕೈಗೆತ್ತಿಕೊಂಡಿದೆ.

ವೀರಶೈವ ಸಾಹಿತ್ಯದ ಮಹತ್ವದ ಪ್ರಕಾರವಾದ ವಚನಸಾಹಿತ್ಯ ಈವರೆಗೆ ಬಹು ಮಟ್ಟಿಗೆ ಪೂರ್ಣಪ್ರಮಾಣದಲ್ಲಿ ಪ್ರಕಟವಾಗಿದೆ. ವಚನಗಳ ಸಾಹಿತ್ಯಿಕ, ಸಾಮಾಜಿಕ, ಸೈದ್ಧಾಂತಿಕ ಪ್ರಭಾವಗಳಿಗೆ ಮಾರುಹೋದ ವಿದ್ವಾಂಸರು, ಶರಣರ ಇನ್ನೊಂದು ಮಹತ್ವದ ಪ್ರಕಾರವಾದ' ಸ್ವರವಚನಸಾಹಿತ್ಯ'ದ ಪ್ರಕಟನೆಯ ಕಡೆಗೆ ಅಷ್ಟಾಗಿ ಗಮನ ಹರಿಸಲಿಲ್ಲ. ಈ ಕೊರತೆಯನ್ನು ತುಂಬಿಕೊಡುವ ಮಹೋದ್ದೇಶದಿಂದ ಪ್ರಸ್ತುತ ಯೋಜನೆಯನ್ನು ಹಮ್ಮಿಕೊಳ್ಳಲಾಗಿದೆ.

ತಮ್ಮ ಅನುಭಾವದ ವಾಚನಪಾತಳಿಗಾಗಿ 'ವಚನ'ಗಳನ್ನು ಬರೆದ ಶರಣರು, ಶ್ರವಣಪಾತಳಿಗಾಗಿ 'ಸ್ವರವಚನ'ಗಳನ್ನು ಬರೆದರು. ಹನ್ನೆರಡನೆಯ ಶತಮಾನದಿಂದ ಇಪ್ಪತ್ತನೆಯ ಶತಮಾನದವರೆಗೆ ನೂರಾರು ಜನ ಶಿವಶರಣರು, ಶಿವಕವಿಗಳು ಸೃಷ್ಟಿ

ಸಿದ ಈ ಸಾಹಿತ್ಯ ಲಿಖಿತ ಮತ್ತು ಮೌಖಿಕ ಪರಂಪರೆಯಲ್ಲಿ ಸಾಗಿಬಂದಿದೆ. ಈ ಸಾಹಿತ್ಯವನ್ನು ಸಮಗ್ರವಾಗಿ ಪ್ರಕಟಿಸಲಿರುವ ಪ್ರಸ್ತುತ ಯೋಜನೆಯಲ್ಲಿ ನಾವು ಎರಡು ಹಂತಗಳನ್ನು ಕಲ್ಪಿಸಿಕೊಂಡಿದ್ದೇವೆ.

ಅಪ್ರಕಟಿತ ರೂಪದಲ್ಲಿರುವ ಲಿಖಿತ ಮತ್ತು ಮೌಖಿಕ ಪರಂಪರೆಯ ಎಲ್ಲ ಸ್ವರವಚನಗಳನ್ನು ಪ್ರಕಟಿಸುವ ಉದ್ದೇಶ ನಮ್ಮ ಕಣ್ಣಮುಂದಿದೆ. ಇಲ್ಲಿ ಪ್ರಾಚೀನ ಸ್ವರವಚನ 'ಕೃತಿ'ಗಳನ್ನು ಪರಿಷ್ಕರಿಸಿ ಪ್ರಕಟಿಸುವುದು ; ಹಸ್ತಪ್ರತಿಗಳಲ್ಲಿ ಬಿಡಿಬಿಡಿಯಾಗಿ ಸಿಗುವ ಸ್ವರವಚನಗಳನ್ನು ಸಂಗ್ರಹಿಸಿ ಸಂಪುಟರೂಪದಲ್ಲಿ ಪ್ರಕಟಿಸುವುದು ; ಬೇರೆ ಬೇರೆ ಪ್ರದೇಶಗಳಲ್ಲಿ ಮೌಖಿಕ ಪರಂಪರೆಯಲ್ಲಿ ಸಿಗುವ ಸ್ವರವಚನಗಳನ್ನು ಧ್ವನಿಮುದ್ರಣ ಮಾಡಿಕೊಂಡು ಸಂಪುಟರೂಪದಲ್ಲಿ ಪ್ರಕಟಿಸುವುದು—ಇದು ಮೊದಲ ಹಂತದ ಪ್ರಕಟನ ಕಾರ್ಯ.

ಹೀಗೆ ಎಲ್ಲ ಮೂಲಗಳಿಂದ ಸಂಗ್ರಹಿಸಿ ನಾವು ಪ್ರಕಟಿಸಿದ ಮತ್ತು ಈಗಾಗಲೇ ಅನ್ಯಸಂಸ್ಥೆಗಳು ಪ್ರಕಟಿಸಿದ ಎಲ್ಲ ಸ್ವರವಚನಗಳ ರಾಶಿಯನ್ನು ಒಂದು ಶಿಸ್ತಿಗೆ ಅಳವಡಿಸಿ ಹದಿನೈದು ಸಂಪುಟಗಳಲ್ಲಿ ಏಕಕಾಲಕ್ಕೆ ಪ್ರಕಟಿಸುವುದು ಎರಡನೆಯ ಹಂತದ ಕಾರ್ಯವಾಗಿದೆ. ಈ ಹಂತದ ಒಟ್ಟು ಯೋಜನೆ ಹೀಗಿದೆ :

ಮೊದಲನೆಯದು ಬಸವೇಶ್ವರರು ಮೊದಲಾದ ಹನ್ನೆರಡನೆಯ ಶತಮಾನದ ಶರಣರ ಬಿಡಿ ಸ್ವರವಚನಸಂಪುಟ. ಎರಡನೆಯದು ನಿಜಗುಣಶಿವಯೋಗಿ, ಸಪ್ತಕಾವ್ಯದ ಗುರುಬಸವ, ಸರ್ಪಭೂಷಣ ಶಿವಯೋಗಿ, ಮುಪ್ಪಿನ ಷಡಕ್ಷರಿ, ಬಾಲಲೀಲಾ ಮಹಾಂತಶಿವಯೋಗಿ, ಮೈಲಾರ ಬಸವಲಿಂಗಶರಣರು ಇತ್ಯಾದಿ ಪ್ರಸಿದ್ಧ ಸ್ವರವಚನಕಾರರ ಸಂಪುಟ. ಮೂರು, ನಾಲ್ಕು ಮತ್ತು ಐದು ಗುರುಬಸವಾರ್ಯ. ಕರಸ್ಥಲದ ನಾಗಿದೇವ, ಮೊಗ್ಗೆಯ ಮಾಯಿದೇವ, ಕೆಸ್ತೂರದೇವ, ಕವಿಲಿಂಗ, ವರತೆಯ ಸೋಮಣ್ಣ ಸೋದೆ ಸದಾಶಿವರಾಯ ದೊಡ್ಡಷಡಕ್ಷರಿಸ್ವಾಮಿ, ಜಿಗುನಿಮರುಳದೇವ, ಬೆಂಗಳೂರು ಮುದ್ವೀರಸ್ವಾಮಿ, ಕಾರುಗಹಳ್ಳಿ ಶಾಂತಯ್ಯ, ಶಂಕರದೇವ, ನಿಷ್ಕಲರು, ಮರಿಶಾಂತ ಬಸವ, ಸೋಮೆಕಟ್ಟೆ ಕರಿಬಸವೇಶ್ವರ, ಗುರುಗುಂಡಬಸವ–ಇತ್ಯಾದಿ ಅಪ್ರಸಿದ್ಧ ಸ್ವರವಚನಕಾರರ ಸಂಪುಟಗಳು. ಆರು, ಏಳು, ಎಂಟು, ಒಂಬತ್ತು ಮತ್ತು ಹತ್ತು ಹಸ್ತಪ್ರತಿಗಳಲ್ಲಿ ಸಿಗುವ ಬಿಡಿಸ್ವರವಚನ ಸಂಪುಟಗಳು. ಹನ್ನೊಂದು, ಹನ್ನೆರಡು, ಹದಿಮೂರು, ಹದಿನಾಲ್ಕು ಮತ್ತು ಹದಿನೈದು ಬೇರೆ ಬೇರೆ ಪ್ರದೇಶಗಳಲ್ಲಿ ಮೌಖಿಕ ಪರಂಪರೆಯಲ್ಲಿ ಸಿಗುವ ಕಡಕೋಳ ಮಡಿವಾಳಪ್ಪ, ಕುಡಲೂರು ಬಸವಲಿಂಗಶರಣರು, ನೀಲಕೇರಿ ಸ್ವಾಮಿಗಳು, ರಾಂಪುರದ ಬಕ್ಕಪ್ಪ ಮೊದಲಾದವರ ಸ್ವರವಚನ ಸಂಪುಟಗಳು.

ಈ ಯೋಜನೆ ಶ್ರೀಮಠದ ಸಾಹಿತ್ಯಿಕ ಸಾಧನಗಳಲ್ಲಿ ಒಂದು ಮೈಲುಗಲ್ಲು. ಇದು ಪೂರ್ಣಗೊಂಡರೆ ನಮ್ಮ ಅವಜ್ಞೆಯಲ್ಲಿ ಮುಳುಗಿ ಹೋಗಿರುವ ಹೊಸ ಸಾಹಿತ್ಯ ಪ್ರಕಾರವೊಂದು ಸಮಗ್ರ ರೂಪದಲ್ಲಿ ಬೆಳಕಿಗೆ ಬರುತ್ತದೆ. ಹಾಗೆ ನೋಡಿದರೆ ಬಹು

ಸಂಖ್ಯೆಜನರ ಮೇಲೆ ಮೋಡಿ ಹಾಕಿದ ಅವರ ವ್ಯಕ್ತಿತ್ವವನ್ನು ತೀಡುತ್ತ ಬಂದ ಸಾಹಿತ್ಯ ಸಮುದಾಯದಲ್ಲಿಯೇ ಹಾಡುಗಬ್ಬಪ್ರಕಾರ ಗಣ್ಯವಾದುದು. ಕನ್ನಡ ಸಾಹಿತ್ಯದ ಮೊದಲ ಘಟ್ಟದ ರಚನೆಗಳಾಗಿರುವ ಈ ದೇಶೀಯ 'ಹಾಡುಗಬ್ಬ'ಗಳನ್ನು ಓದು ಗಬ್ಬವಾದ ಚಂಪೂ ಮೊದಲಾದುವು ಮೂಲೆಗೆ ತಳ್ಳಿದವು. ಮುಂದೆ ಹನ್ನೆರಡನೆಯ ಶತಮಾನದಲ್ಲಿ ದೇಶೀ ನೆಲೆಗಳಿಂದ ಬಂದ ಶರಣರು ದೇಶೀ ಪರಂಪರೆಯನ್ನು ಮತ್ತೆ ಸ್ಥಾಪಿಸುವ ಮೂಲಕ, ಮೂಲೆಗುಂಪಾಗಿದ್ದ ಹಾಡುಗಬ್ಬ ಪರಂಪರೆಯನ್ನು ಹರಿ ಗಡಿದು, ಅದಕ್ಕೆ ಲಿಖಿತ ಸಾಹಿತ್ಯದಲ್ಲಿ ನ್ಯಾಯವಾದ ಸ್ಥಾನವನ್ನು ಒದಗಿಸಿಕೊಟ್ಟರು. ಇದರಿಂದಾಗಿ ಜೇಡರದಾಸಿಮಯ್ಯ, ಬಸವಣ್ಣ, ಮಹಾದೇವಿಯಕ್ಕ ಮೊದಲಾದ ಶರಣರು ರಚಿಸಿದ ಹಾಡುಗಬ್ಬಪ್ರಕಾರ 'ಸ್ವರವಚನ'ವೆಂಬ ಹೆಸರಿನಲ್ಲಿ ಪ್ರಸಿದ್ಧಿಪಡೆಯಿತು. ಬಳಿಕ ನಿಜಗುಣಶಿವಯೋಗಿಗಳಲ್ಲದೆ ವಿಜಯನಗರದ ಪ್ರೌಢದೇವರಾಯನ ಕಾಲದಲ್ಲಿ ಸಪ್ತಕಾವ್ಯದ ಗುರುಬಸವ, ಮೊಗ್ಗೆಯ ಮಾಯಿದೇವ, ಕರಸ್ಥಲದ ನಾಗಿದೇವ ಮೊದ ಲಾದ ವೀರಶೈವ ಅನುಭಾವಿಗಳು 'ಸ್ವರವಚನ'ಪ್ರಕಾರದಲ್ಲಿ ಕೃತಿಮಾಡಿದರು. ಪ್ರೌಢದೇವರಾಯನ ತರುವಾಯ ನೂರುವರ್ಷ ಗತಿಸುವಲ್ಲಿ ಪಟ್ಟಕ್ಕೆ ಬಂದ ಕೃಷ್ಣ ದೇವರಾಯನ ಪರಿಸರದ ಪುರಂದರದಾಸ, ಕನಕದಾಸ ಮೊದಲಾದವರೆಲ್ಲ ಈ ಹಾಡು ಗಬ್ಬ ಪ್ರಕಾರವನ್ನು ಹರಿಸರ್ವೋತ್ತಮನೆಲೆಯಲ್ಲಿ ದುಡಿಸಿ, 'ಕೀರ್ತನೆ' ಹೆಸರಿನಲ್ಲಿ ಪ್ರಸಿದ್ಧಿಪಡಿಸಿದರು. ಈ ದಾಸಸಂಪ್ರದಾಯದ ಎರಡನೆಯ ಘಟ್ಟದಲ್ಲಿ ಪ್ರಸನ್ನ ವೆಂಕಟದಾಸ, ವಿಜಯದಾಸ, ಮಹಿಪತಿದಾಸ ಮೊದಲಾದವರು ಹುಟ್ಟಿ 'ಕೀರ್ತನೆ' ಪ್ರಕಾರವನ್ನು ವಿಪುಲ ಪ್ರಮಾಣದಲ್ಲಿ ಬೆಳೆಸಿದರು. ರತ್ನಾಕರವರ್ಣಿ ಮೊದಲಾದ ಜೈನ ಕವಿಗಳು 'ಹಾಡು'ಗಳನ್ನು ಬರೆದರು. ಜೈನರ ಹಾಡು, ದಾಸರ ಕೀರ್ತನೆಯ ಜೊತೆ ಜೊತೆಗೇ ಕಸ್ತೂರದೇವ, ಜಿಗುಮಸಿಮರುಳದೇವ, ಸರ್ಪಭೂಷಣಶಿವಯೋಗಿ. ಮುಪ್ಪಿನಷಡಕ್ಷರಿ, ಮೈಲಾರ ಬಸವಲಿಂಗ ಶರಣರು, ಕಡಕೋಳ ಮಡಿವಾಳಪ್ಪ, ಕೂಡಲೂರು ಬಸವಲಿಂಗಶರಣರು ಮೊದಲಾದ ವೀರಶೈವ ಅನುಭಾವಿಗಳು 'ಸ್ವರವಚನ' ಪರಂಪರೆಯನ್ನು ಮುಂದುವರಿಸಿದರು. ಈ ಎಲ್ಲ ರಚನೆಗಳನ್ನು ಒಂದೂ ಬಿಡದಂತೆ ಸಂಗ್ರಹಿಸಿ ಪ್ರಕಟಿಸಿದರೆ 'ಕೀರ್ತನ ಸಾಹಿತ್ಯ'ದ ಮಗ್ಗುಲಲ್ಲಿ 'ಸ್ವರವಚನಸಾಹಿತ್ಯ'ವೆಂಬ ಇನ್ನೊಂದು ಪ್ರಕಾರ ಎದ್ದು ಕಾಣುತ್ತದೆ. 'ಹರಿಸರ್ವೋತ್ತಮ' ಹಾಡುಗಬ್ಬ ಸಂಪತ್ತಿನ ಜೊತೆ 'ಶಿವಸರ್ವೋತ್ತಮ' ಹಾಡುಗಬ್ಬ ಸಂಪತ್ತೂ ತೆರೆದುಕೊಳ್ಳುತ್ತದೆ.

ಪ್ರಾಚೀನಕಾಲದಿಂದಲೂ ಕರ್ನಾಟಕದಲ್ಲಿ ಓದುಗಬ್ಬ ಮತ್ತು ಹಾಡುಗಬ್ಬ ಎಂಬ ಎರಡು ಸಾಹಿತ್ಯ ಪ್ರಕಾರಗಳು ಬೆಳೆದು ಬಂದಿವೆ. ಇವುಗಳಲ್ಲಿ ಒಂದು ವಾಚನಪಾತಳಿ ಯದು, ಸಾಹಿತ್ಯಗುಣ ಪ್ರಧಾನವಾದುದು. ಇನ್ನೊಂದು ಶ್ರವಣಪಾತಳಿಯದು, ಸಂಗೀತಗುಣ ಪ್ರಧಾನವಾದುದು. ಆದರೆ ಇಂಗ್ಲೀಷರ ಸಂಪರ್ಕದಿಂದಾಗಿ ಸಾಕ್ಷರತೆ ಬೆಳೆದು; ನಮ್ಮಲ್ಲಿ ಓದುಗಬ್ಬದೊಂದಿಗೆ ಹಾಡುಗಬ್ಬವನ್ನೂ ವಾಚನಪಾತಳಿಯಲ್ಲಿಟ್ಟು

ಅಭ್ಯಾಸ ಮಾಡುವ ತಪ್ಪುಕ್ರಮ ವರ್ಧಿಸುತ್ತ ನಡೆಯಿತು. ಆಗ ಈ ಸ್ವರವಚನಗಳನ್ನು ಧ್ವನಿಮಾಧ್ಯಮದಲ್ಲಿ ಕೇಳಿ ಸಂಗೀತದ ನೆಲೆಯಲ್ಲಿ ವಿಮರ್ಶಿಸದೆ, ಅಕ್ಷರಮಾಧ್ಯಮದಲ್ಲಿ ಓದಿ ಸಾಹಿತ್ಯದ ನೆಲೆಯಲ್ಲಿ ವಿಮರ್ಶಿಸುವ ತಪ್ಪು ಪದ್ಧತಿ ನಮ್ಮಲ್ಲಿ ಬೆಳೆಯಿತು. ಇದರಿಂದಾಗಿ ಅವು ಸಾಹಿತ್ಯಿಕಗುಣವಿದೂರರಚನೆಗಳೆಂಬ ಟೀಕೆಗೆ ಗುರಿಯಾದವು. ನಿಜಸ್ಥಿತಿಯೆಂದರೆ ಈ ಸಾಹಿತ್ಯವನ್ನು ಕಿವಿಯಿಂದಲೇ ಕೇಳಿ ವಿಮರ್ಶಿಸುವ ಹೊಸ ವಿಮರ್ಶಾ ಮಾನದಂಡಗಳು ಇಂದು ಬೆಳೆದುಬರಬೇಕಾಗಿದೆ.

ಎರಡನೆಯದಾಗಿ ನಾವು ಮಾಡಬೇಕಾಗಿರುವ ಇನ್ನೊಂದು ಕಾರ್ಯವೆಂದರೆ, ಈ ಸಾಹಿತ್ಯದ ಪ್ರಸಾರ. ಧ್ವನಿಮಾಧ್ಯಮದ ಸಾಹಿತ್ಯವಾಗಿರುವ ಇದನ್ನು ಸಂಗೀತದ ಮೂಲಕ ಪ್ರಕಟಿಸುವ ವ್ಯವಸ್ಥೆ ಮಾಡುವುದು ಅವಶ್ಯವಿದೆ. ಅಂದರೆ ಸಂಗೀತ ಕಲಾವಿದರಿಂದ ಪ್ರಚುರಪಡಿಸುವ, ಧ್ವನಿಸುರುಳಿಗಳನ್ನು ಸಿದ್ಧಪಡಿಸುವ ಮೊದಲಾದ ಚಟುವಟಿಕೆಗಳು ಬೆಳೆದು ಬರಬೇಕಾಗಿದೆ.

ಹೀಗೆ ಸಮಗ್ರವಾಗಿ ಪ್ರಕಟಿಸುವುದು, ಹೊಸಬಗೆಯ ಮಾನದಂಡದಿಂದ ವಿಮರ್ಶಿಸುವುದು, ಸಂಗೀತ ಮಾಧ್ಯಮದಲ್ಲಿ ಪ್ರಸಾರಗೊಳಿಸುವುದು—ಈ ಮೂರೂ ಹಂತಗಳಲ್ಲಿ ಕೆಲಸ ನಡೆದರೆ ಮಾತ್ರ 'ಸ್ವರವಚನ'ಗಳಿಗೆ ಸರಿಯಾದ ನ್ಯಾಯ ಒದಗುತ್ತದೆ. ಈ ಬಗೆಯ ನ್ಯಾಯವನ್ನು ಒದಗಿಸಿಕೊಡುವ ಮೊದಲನೆಯ ಹಂತವಾಗಿ 'ಸಮಗ್ರ ಸ್ವರವಚನ ಸಾಹಿತ್ಯ ಪ್ರಕಟನೆ ಯೋಜನೆ''ಯನ್ನು ಶ್ರೀಮಠ ಕೈಗೊಂಡಿದೆ.

ಈ ಸ್ವರವಚನ ಸಾಹಿತ್ಯ ಪ್ರಕಟನ ಯೋಜನೆ''ಗೆ ಪ್ರೋತ್ಸಾಹವನ್ನು ನೀಡಿ, ಸ್ವರವಚನ ಸಾಹಿತ್ಯ ಸಂಪುಟಗಳು ಜಗದ್ಗುರು ಶ್ರೀ ಶಿವರಾತ್ರೀಶ್ವರ ಗ್ರಂಥಮಾಲೆಯಿಂದ ಪ್ರಕಾಶಗೊಳ್ಳಲು ಆಶೀರ್ವದಿಸಿದ ಪರಮಪೂಜ್ಯ ಜಗದ್ಗುರು ಶ್ರೀ ಶಿವರಾತ್ರಿ ದೇಶಿಕೇಂದ್ರ ಮಹಾಸ್ವಾಮಿಗಳವರಿಗೆ ಪ್ರಣಾಮಗಳನ್ನು ಸಲ್ಲಿಸುತ್ತೇವೆ.

ತತ್ತ್ವಕ್ಕೆ ತತ್ತ್ವ, ಸಾಹಿತ್ಯಕ್ಕೆ ಸಾಹಿತ್ಯವಾಗಿರುವ 'ಸ್ವರಚವನಸಾಹಿತ್ಯ' ಏಕಕಾಲಕ್ಕೆ ಆತ್ಮಕಲ್ಯಾಣವನ್ನೂ, ಸಮಾಜಕಲ್ಯಾಣವನ್ನೂ ಪ್ರತಿಪಾದಿಸುವ ಮಹತ್ವವನ್ನು ಗಳಿಸಿದೆ. ಈ ಮೌಲಿಕ ಸಾಹಿತ್ಯವನ್ನು ಜನತೆಗೆ ಒದಗಿಸುವುದು ಈ ಯೋಜನೆಯ ಮುಖ್ಯ ಉದ್ದೇಶವಾಗಿದೆ. ಇಂತಹದೊಂದು ಅತ್ಯಮೂಲ್ಯವಾದ ಯೋಜನೆಯನ್ನು ರೂಪಿಸಿ ಮಾರ್ಗದರ್ಶನ ಮಾಡಿದವರು ನಮ್ಮ ನಾಡಿನ ಹೆಸರಾಂತ ಹಿರಿಯ ಸಂಶೋಧಕರೂ, ಪ್ರಾಧ್ಯಾಪಕರೂ ಆದ ಡಾ. ಎಂ. ಎಂ. ಕಲಬುರ್ಗಿಯವರು. ಪ್ರಾರಂಭದಲ್ಲಿ ಸುಪ್ರಸಿದ್ಧ ಸಾಹಿತಿಗಳಾದ ಡಾ. ಎಚ್. ತಿಪ್ಪೇರುದ್ರಸ್ವಾಮಿಯವರ ನಿರ್ದೇಶನದಲ್ಲಿ ಈ ಯೋಜನೆಯನ್ನು ಕಾರ್ಯರೂಪಕ್ಕೆ ತರಲು ಯೋಜಿಸಲಾಗಿತ್ತು. ಆದರೆ ಈಗ ಡಾ. ಎಂ. ಎಂ. ಕಲಬುರ್ಗಿಯವರ ನಿರ್ದೇಶನದಲ್ಲಿ ಈ ಸಂಪುಟಗಳು ಹೊರಬರುತ್ತಿವೆ.

ಮೈಸೂರು ವಿಶ್ವವಿದ್ಯಾನಿಲಯ ಕುವೆಂಪು ಕನ್ನಡ ಅಧ್ಯಯನ ಸಂಸ್ಥೆಯ ನಿರ್ದೇಶಕರು ಸಂಸ್ಥೆಯಲ್ಲಿನ ಹಸ್ತಪ್ರತಿಗಳನ್ನು ಬಳಸಿಕೊಳ್ಳಲು ಅವಕಾಶವನ್ನಿತ್ತು

ಸಹಕರಿಸಿದ್ದಾರೆ. ಈ ಯೋಜನೆಯ ಅಂಗವಾಗಿ 'ಸ್ವರವಚನಸಂಪುಟ–ನಾಲ್ಕು,' ಇದನ್ನು ಮೈಸೂರು ವಿಶ್ವವಿದ್ಯಾನಿಲಯದ ಕುವೆಂಪು ಕನ್ನಡ ಅಧ್ಯಯನ ಸಂಸ್ಥೆಯ ಸಂಪಾದನೆ ವಿಭಾಗದಲ್ಲಿ ಸಂಶೋಧನ ಸಹಾಯಕರಾಗಿರುವ ಶ್ರೀಮತಿ ವೈ.ಸಿ. ಭಾನುಮತಿಯವರು ಸಂಪಾದಿಸಿ ಸಿದ್ಧಪಡಿಸಿ ಕೊಟ್ಟಿದ್ದಾರೆ. ಮೈಸೂರು ಶ್ರೀ ರಾಜೇಂದ್ರ ಪ್ರಿಂಟರ್ಸ್ ಶ್ರೀ ಡಿ. ಎನ್. ಲೋಕಪ್ಪನವರು ಅಂದವಾಗಿ ಮುದ್ರಿಸಿಕೊಟ್ಟಿದ್ದಾರೆ. ಈ ಕಾರ್ಯದಲ್ಲಿ ನೆರವಾದ ಎಲ್ಲರಿಗೂ ಧನ್ಯವಾದಗಳು.

ಈ ಕೃತಿಯನ್ನು ಸಹೃದಯರು ಸ್ವಾಗತಿಸುವರೆಂದು ನಂಬಿದ್ದೇವೆ.

ಪ್ರಕಾಶಕರು

# ಪರಿವಿಡಿ

# ಪ್ರಸ್ತಾವನೆ

ವೀರಶೈವಸಾಹಿತ್ಯದ ಬಹುಮುಖ್ಯ ಪ್ರಕಾರಗಳಲ್ಲಿ ಸ್ವರವಚನವೂ ಒಂದು. ರಾಗತಾಳಗಳು ಮೇಳೈಸಿರುವ ವೀರಶೈವ ಹಾಡುಗಳನ್ನು ಸಾಹಿತ್ಯದ ಪರಿಭಾಷೆಯಲ್ಲಿ ಸ್ವರವಚನಗಳು ಎಂದು ಗುರುತಿಸುವುದು ರೂಢಿ. ವಚನ ಮಂಜಿನ ಹನಿಯಂತೆ ಘನೀಕೃತವಾಗಿದ್ದರೆ ಸ್ವರವಚನ ನೀರಿನ ಹನಿಯಂತೆ ಪ್ರವಹಿಸುವಂಥದ್ದು. ವಚನವು ಹಾಡು ಎಂಬ ಅರ್ಥದಲ್ಲಿಯೂ ಬಳಕೆಯಲ್ಲಿದೆ. ಈ ಮಾತಿಗೆ ಆಧಾರವಾಗಿ ಕರಿಬಸವೇಶ್ವರ ವಚನ ನೀಲಗ್ರೀವರ ವಚನ ಗುರುಬಸವಾರ್ಯರ ವಚನ ಎಂಬ ಶೀರ್ಷಿಕೆಯುಳ್ಳ ಕೃತಿಗಳು ವಚನಗಳಾಗಿರದೆ ಹಾಡುಗಳ ಸಂಕಲನಗಳಾಗಿರುವುದನ್ನು ಉದಾಹರಿಸಬಹುದು. ವಚನದ ಸಂಗೀತ ರೂಪವೆ ಸ್ವರವಚನವೆನಿಸಿದೆ. ಎಲ್. ಬಸವರಾಜು ಅವರು ಹರಿದಾಸರ ಕೀರ್ತನೆಗಳ ಪ್ರಸಿದ್ಧಿಯ ಹಿನ್ನೆಲೆಯಲ್ಲಿ ಸ್ವರವಚನಗಳಿಗೆ ಶಿವದಾಸ ಗೀತಾಂಜಲಿ ಎಂಬ ನಾಮಧೇಯ ನೀಡಿ ಅದಕ್ಕೊಂದು ಸೈದ್ಧಾಂತಿಕ ಚೌಕಟ್ಟು ಒದಗಿಸಿದರು. ತರುವಾಯದಲ್ಲಿ ಸಂಶೋಧಕರು ವಿದ್ವಾಂಸರು ಈ ನಿಟ್ಟಿನಲ್ಲಿ ಕೆಲಸ ಮಾಡಿ ತಕ್ಕಮಟ್ಟಿನ ಸ್ವರವಚನ ಸಾಹಿತ್ಯವನ್ನು ಹೊರತಂದಿದ್ದಾರೆ. ಏಕಕರ್ತೃಕ ಸಂಪುಟಗಳು, ಬಹುಕರ್ತೃಕ ಸಂಪುಟಗಳು ಪ್ರಕಟವಾಗಿವೆ. ಆದರೂ ಬೆಳಕುಕಾಣಬೇಕಾಗಿರುವ ಹಾಡುಗಳ ಸಂಖ್ಯೆ ಅಧಿಕವಾಗಿದೆ.

ಪ್ರಸ್ತುತ ಸ್ವರವಚನ ಸಂಪುಟ : ನಾಲ್ಕು ಒಂದು ಸಮ್ಮಿಶ್ರಸಂಪುಟ. ಇದರಲ್ಲಿ ಸುಮಾರು ೭೦ ಮಂದಿ ಸ್ವರವಚನಕಾರರ ೨೪೪ ಹಾಡುಗಳಿವೆ. ಈ ಹಾಡುಗಳ ಕರ್ತೃಗಳು ವಿವಿಧ ಕಾಲ ದೇಶಗಳ ಹಿನ್ನೆಲೆಯಿಂದ ಬಂದಂಥವರು. ಅಲ್ಲಮಪ್ರಭುವಿನ ಗುಹೇಶ್ವರ ಅಂಕಿತದ ಹಾಡಿನಿಂದ ಹಿಡಿದು ಗುರುಸಿದ್ಧ ಅಂಕಿತದ ಹಾಡಿನ ವರೆಗೆ ಅಂದರೆ ಹನ್ನೆರಡನೆಯ ಶತಮಾನದಿಂದ ಸುಮಾರು ಹತ್ತೊಂಬತ್ತನೆಯ ಶತಮಾನದ ವರೆಗಿನ ವಿವಿಧ ಕಾಲ ಘಟ್ಟದ ಕವಿಗಳು ಇಲ್ಲಿ ಎಡೆಪಡೆದಿದ್ದಾರೆ. ಇವರಲ್ಲಿ ಕೆಲವರ ಅಂಕಿತ ಸಂದಿಗ್ಧ. ಕೆಲವು ಅಂಕಿತಗಳ ಕರ್ತೃವಿಚಾರ ಕಾಲವಿಚಾರಗಳು ಅಜ್ಞಾತ. ಭಕ್ತಿ, ಸಾಧಕನ ಒಳತೋಟಿ, ಅನುಭಾವ, ಶಿವಯೋಗಗಳೆ ಈ ಸಂಪುಟದ ವಸ್ತು. ಶಿವಪಾರಮ್ಯ, ಇದರ ಜೀವಾಳ. ಈ ಶಿವಪಾರಮ್ಯದ ಮುಖ್ಯಧಾರೆಯ, ನಡುವೆಯೆ ಚಾರಿತ್ರಿಕ, ಜಾನಪದ ಮೊದಲಾದ ಅಂಶಗಳ ಸಣ್ಣಪುಟ್ಟ ತೊರೆಗಳು ಕಂಡುಬಂದಿದ್ದು ಸಂಪುಟದ ಸತ್ವವನ್ನು ಹೆಚ್ಚಿಸಿವೆ.

ಈ ಸಂಪುಟದ ಆರಂಭದ ಗುರುಸಂಗಮೇಶ, ಗುರುಸಂಗ, ಗುರುಸಂಗಮೇಶ್ವರ ಅಂಕಿತಗಳು ಹಾಗಲವಾಡಿ ಮುದ್ದುವೀರಸ್ವಾಮಿಗಳಿಗೆ ಸಂಬಂಧಿಸಿವೆ. ಇವರ ಕಾಲ ಸು.

ಕ್ರಿ.ಶ. ೧೭೫೦. ಈ ಸ್ವಾಮಿಗಳು ಮುದಿಯಪ್ಪನಾಯಕನ ಆಸ್ಥಾನಗುರುಗಳಾಗಿ ಹಾಗಲವಾಡಿಯಲ್ಲಿದ್ದರೆಂದು ತಿಳಿದುಬರುತ್ತದೆ. ಇವರು ಶಿವತತ್ತ್ವಸುಜ್ಞಾನ ಪ್ರದೀಪಿಕೆ ಎಂಬ ಕಾವ್ಯವನ್ನೂ ರಚಿಸಿದ್ದಾರೆ. ಸಾಧನೆಯ ಪಥದಲ್ಲಿರುವ ಜೀವಿಯು ತನ್ನ ಜಡತೆಯನ್ನು ನೀಗಿಕೊಂಡು ಜ್ಞಾನಿಯಾಗುವ ಸನ್ನಾಹದಲ್ಲಿ ಗುರುವಿನ ಮಾರ್ಗದರ್ಶನ ಅಗತ್ಯ. ಅಂಥ ಗುರುಕರುಣೆಗೆ ಪಾತ್ರನಾದಾಗ ಜ್ಞಾನಮಾರ್ಗವನ್ನು ತೋರಿದ ಗುರುವಿಗೆ ಕೃತಜ್ಞತೆ ಸೂಚಿಸುವ ಕಳಕಳಿ ಅನೇಕ ಸ್ವರವಚನಗಳ ದನಿಯಾಗಿದೆ. ಅಂತೆಯೆ ಗುರುಸಂಗಮೇಶ ಅಂಕಿತದ ೧೦ನೆಯ ಹಾಡಿನ

ಶರಣು ಶರಣು ಶರಣಯ್ಯ ನಿಮ್ಮ
ಚರಣಕಮಲಕೆ ದಮ್ಮಯ್ಯ
ಕರುಣಸಾಗರ ಚೆನ್ನಬಸವೇಶ ನೀನೆನ್ನ
ಪರಿಭವಗಳನು ತೊಲಗಿಸಿ ರಕ್ಷಿಪುದು

ಎಂಬ ಭಾಗದಲ್ಲಿ ಗುರುಪುರದ ಮಲ್ಲಯ್ಯನ ಹಾಡಿನಲ್ಲಿ ಬರುವ

ಗುರುವೆ ಶರಣು ಎನ್ನ ಗುರುವೆ ಶರಣು ಎನ್ನ
ಪರಿಭವವ ಕಳೆದ ಶಿಕ್ಷಾಗುರುವೆ ಶರಣು

ಎಂಬುದರ ಸಾದೃಶ್ಯವನ್ನು ನೋಡಬಹುದು, ಶಿಕ್ಷಾಗುರುಸ್ಥಲವನ್ನು ನಿರ್ದೇಶಿಸುವ ಈ ತೆರನ ಹಾಡುಗಳು ಸ್ವರವಚನಗಳ ಉದ್ಯಾನದಲ್ಲಿ ಅಡಿಗಡಿಗೆ ಗೋಚರಿಸುತ್ತವೆ. "ಗುರುವಿನ ಗುಲಾಮನಾಗುವ ತನಕ ದೊರೆಯದಣ್ಣ ಮುಕುತಿ" ಎಂಬ ಪುರಂದರರ ಆಶಯ ಕೂಡ ಇದಕ್ಕಿಂತ ಭಿನ್ನವಾದುದೇನೂ ಅಲ್ಲ. ದಿವ್ಯಲಿಂಗಾನುಸಂಧಾನವನ್ನು ಉಪದೇಶಿಸಿದ ಗುರುವನ್ನು ಗುರುಸಂಗಮೇಶ ಅಂಕಿತದ ಸ್ವರವಚನಗಳಲ್ಲಿ ಗಾಢವಾಗಿ ಸ್ಮರಿಸಲಾಗಿದೆ. ಮನಸ್ಸನ್ನು ಕೇಂದ್ರೀಕರಿಸುವುದು, ಏಕಾಗ್ರಗೊಳಿಸುವುದು ಕಠಿಣಕರ. ಹೆಣ್ಣು, ಚಂದ್ರೋದಯ, ಕೋಗಿಲೆಯ ಇನಿದನಿ ಇವೇ ಮುಂತಾದ ಸಂಗತಿಗಳು ಭಕ್ತನ ಮನವನ್ನು ಕಲುಷಿತಗೊಳಿಸುವ ಅಂಶಗಳು. ಅಂಥವನ್ನು ಮೀರಿ ನಿಂತ, ಕೈವಲ್ಯವೇ ಪರಮಧ್ಯೇಯವಾಗಿರುವ ಜೀವದ ಚಡಪಡಿಕೆಯು ಇಲ್ಲಿನ ಹಾಡುಗಳಲ್ಲಿ ವ್ಯಕ್ತವಾಗಿದೆ.

ಕಟ್ಟಿಗೆಹಳ್ಳಿ ಸಿದ್ಧಲಿಂಗಸ್ವಾಮಿಗಳ ಅಂಕಿತ 'ಕಟ್ಟಿಗೆ ಸಂಗ'. ಇವರು ತೋಂಟದ ಸಿದ್ಧಲಿಂಗಯತಿಗಳ ಪರಂಪರೆಯಲ್ಲಿ ಬಂದ ೭ನೆಯ ಪಟ್ಟಾಧ್ಯಕ್ಷರು. ಕಾಲ ಕ್ರಿ.ಶ. ೧೬೨೦. ಇವರ ಶಿಷ್ಯ ಮುರಿಗಾಶಾಂತವೀರದೇಶಿಕನು 'ಕಟ್ಟಿಗೆಹಳ್ಳಿ ತಾರಾವಳಿ'ಯನ್ನು ರಚಿಸಿದ್ದಾನೆ. ಇಮ್ಮಡಿ ಗುರುಸಿದ್ಧ ಕೂಡ ಇವರ ಮೇಲೆ ಒಂದು ಹಾಡು ಬರೆದಿದ್ದಾನೆ. ಸಂಪಾದನೆಯ ಸಾರಾಮೃತ, ಏಕೋತ್ತರ ಶತಸ್ಥಲಸಾರ, ಮಡಿವಾಳ ಮಾಚಿದೇವರ ಯಕ್ಷಗಾನ ಎಂಬ ಕೃತಿಗಳ ಕರ್ತರೂ ಆಗಿರುವ ಕಟ್ಟಿಗೆಹಳ್ಳಿ ಸಿದ್ಧಲಿಂಗಸ್ವಾಮಿಯವರ

ಹಾಡುಗಳ ಪೈಕಿ ಒಂದು ಹಾಡು (೩೦) ಮಾತ್ರ ಪ್ರಸ್ತುತ ಸಂಪುಟದಲ್ಲಿ ಸೇರಿದೆ. ಇದು ಚಂದಮಾಮ ಹಾಡಿನ ಮಟ್ಟಿನಲ್ಲಿದ್ದರೂ ಗಹನವಾದ ವಿಷಯವನ್ನೊಳಗೊಂಡಿದೆ. "ತುದಿ ಕೀಳು ಬುಡ ಮೇಲು ಪದುಳದಿಂದಾದ ಮರ ಚಂದಮಾಮ" ಎಂಬಲ್ಲಿ ಭಗವದ್ಗೀತೆಯ ಛಾಯೆಯನ್ನು ಗುರುತಿಸಬಹುದು. ಇದೇ ಭಾವ ಗುರುಸಂಗಮೇಶ ಅಂಕಿತದ ೧೭ ನೆಯ ಹಾಡಿನಲ್ಲಿಯೂ ಕಂಡುಬರುತ್ತದೆ.

ವಿಜಯನಗರದ ಪ್ರೌಢದೇವರಾಯನ ಆಸ್ಥಾನದಲ್ಲಿದ್ದ ಕರಸ್ಥಲವೀರಣ್ಣೊಡೆಯನ ಅಂಕಿತ ನಿಜಗುರುಶಾಂತ, ಕಾಲ ಕ್ರಿ.ಶ. ೧೪೩೦. ಈತ ಕೆಲವು ಕಂದಗಳನ್ನೂ ಹಾಡುಗಳನ್ನೂ ಬರೆದಿದ್ದಾನೆ. ಕಾಮ ಕ್ರೋಧ ಮದ ಮತ್ಸರ ಮತ್ತು ಮಾನಿನಿಯರ ಮೋಹಜಾಲದಲ್ಲಿ ಮುಳುಗಿದವರಿಗೆ ಲಿಂಗದ ಮಹಿಮೆಯನ್ನು ಅರಿತುಕೊಳ್ಳುವುದು ಅಸಾಧ್ಯವೆಂದು ನಿರೂಪಿಸುವ ಈತನ ಹಾಡಿನಲ್ಲಿ (೩೮) ಪುತ್ರ ಮಿತ್ರ ಕಳತ್ರ ಎಂಬ ಮೋಹವನ್ನು ತ್ಯಜಿಸಿ, ಲಿಂಗದಲ್ಲಿ ಮನಸ್ಸು ನೆಲೆಗೊಳಿಸಿದಾಗ ಮಾತ್ರ ಲಿಂಗಾನುಭಾವಿಯೆನಿಸಿಕೊಳ್ಳುವ ವಿಚಾರವನ್ನು ತಿಳಿಸಲಾಗಿದೆ.

ಕರಸ್ಥಲವೀರಣ್ಣೊಡೆಯನ ಶಿಷ್ಯ ಕರಸ್ಥಲದನಾಗಿದೇವ. ಈತನ ಅಂಕಿತ ಗುರು. ಶಾಂತ. ನೂರೊಂದು ಜನ ವಿರಕ್ತರಲ್ಲಿ ನಾಗಿದೇವನೂ ಒಬ್ಬನು. ಮಡಿವಾಳಯ್ಯನ ತಾರಾವಳಿ, ಕರಸ್ಥಲದ ನಾಗಿದೇವನ ತ್ರಿವಿಧಿ, ಅಕ್ಷರಚೌಪದ, ಏಕವಿಂಶತಿದೀಕ್ಷಾವಿಧಾನ ಇವೇ ಮೊದಲಾದ ಈತನ ಕೃತಿಗಳು ಪ್ರಸಿದ್ಧ. ಶಿವಯೋಗವನ್ನು ಪ್ರತಿಪಾದಿಸುವ ಈತನ ಹಾಡುಗಳು ಡಾಂಭಿಕತೆಯನ್ನು ಪ್ರಬಲವಾಗಿ ಖಂಡಿಸಿವೆ. ಪರಧನ ಪರಹಿಂಸೆ ಪರಸತಿ ಇವುಗಳಿಗೆ ಪಕ್ಕಾಗಿಯೂ ತೋರಿಕೆಗೆ ಗುರುಲಿಂಗ ಜಂಗಮರೆನ್ನಿಸಿಕೊಳ್ಳುವ ಸೋಗಲಾಡಿಗಳನ್ನು ನರಗುರಿ ಎಂದು ಕರೆಯಲಾಗಿದೆ (೩೯). ಅಷ್ಟಾವರಣ ಪಂಚಾಚಾರಗಳ ಮಹತ್ವವನ್ನು ತಿಳಿಯದ ಭ್ರಷ್ಟರು ಲಿಂಗಧಾರಣೆ ಮಾಡಿಕೊಂಡು ಜಂಗಮ ವೇಷ ಹಾಕಿದ ಮಾತ್ರಕ್ಕೆ ಅವರು ಲಿಂಗವಾಗುವುದಿಲ್ಲ, ಜಂಗಮವಾಗುವುದಿಲ್ಲ ಎಂದು ವೇಷಧಾರಿಗಳನ್ನು ಬಯಲು ಮಾಡಿದ್ದಾನೆ ಕರಸ್ಥಲ ನಾಗಲಿಂಗ.

ನಿಜಗುರುಸಿದ್ಧಶಾಂತ ಎಂಬುದು ಜಿಗುನಿ ಮರುಳದೇವರ ಅಂಕಿತ. ಈತ ಜಿಗುನಿ ಮರುಳಾರ್ಯ, ಜಿಗುನಿ ಮರುಳೇಶ ಎಂಬ ಹೆಸರುಗಳಿಂದಲೂ ಪರಿಚಿತ. ಈತ ಏಳುನೂರು ಮಂದಿ ವಿರಕ್ತರ ಗುಂಪಿಗೆ ಸೇರಿದವನು. ವೀರಶೈವ ಅಧ್ಯಾತ್ಮದ ಬಹು ಮುಖ್ಯ ಮಜಲು ಲಿಂಗಾಂಗ ಸಮರಸ, ಇದನ್ನು ಜಿಗುನಿ ಮರುಳದೇವರು ಮನಮುಟ್ಟುವಂತೆ ನಿವೇದಿಸಿದ್ದಾರೆ (೪೨).

ಗುರುಶಾಂತ ಅಂಕಿತವು ಕರಸ್ಥಲ ನಾಗಲಿಂಗದೇವನಿಗಷ್ಟೆ ಸೀಮಿತವಾಗಿರದೆ ಇನ್ನೂ ಕೆಲವರಿಗೆ ಸಂಬಂಧಿಸಿರಬೇಕು. ಈ ಮಾತಿಗೆ ನಿದರ್ಶನವಾಗಿ ಇಪ್ಪತ್ತೈದು

ಲೀಲಾ ಚಾರಿತ್ರದ ಕೋಲ ಪದಗಳು ಎಂಬ ಸುದೀರ್ಘ ಹಾಡಿನ ಕಡೆಯ ಸಾಲುಗಳು ನಿಲ್ಲುತ್ತವೆ—

ಕರಣಿಕ ಕಲ್ಲಯ್ಯನ ವರಪುತ್ರ ಬಸವಾಂಕ
ನೊರೆದನೀ ಕೋಲಪದಗಳ ಕೋಲೆ
ಒರೆದನೀ ಕೋಲಪದಗಳ ಕೇಳಲು
ಗುರುಶಾಂತಲಿಂಗನೊಲಿದೀವ ಕೋಲೆ

ಎಂಬ ಮಾತುಗಳಿಂದ ಕರಣಿಕ ಕಲ್ಲಯ್ಯನ ಪುತ್ರ ಬಸವಾಂಕನಿಗೂ ಗುರುಶಾಂತ ಅಥವಾ ಗುರುಶಾಂತಲಿಂಗ ಎಂಬ ಅಂಕಿತವಿರುವುದು ಸ್ಪಷ್ಟವಾಗಿದೆ. ಕ್ರಿ.ಶ. ೧೫೩೩ ರಲ್ಲಿದ್ದ ಕಾರುಗಹಳ್ಳಿ ಶಾಂತಯ್ಯನಿಗೆ ಗುರುಶಾಂತಲಿಂಗ ಎಂಬ ಅಂಕಿತವಿರುವುದಾಗಿ ತಿಳಿದುಬರುತ್ತವೆ. ಅಂತೆಯೆ ೪೧ನೆಯ ಹಾಡಿನ ಶಾಂತೇಶ, ೪೩ನೆಯ ಹಾಡಿನ ಶಾಂತ, ೪೫ನೆಯ ಹಾಡಿನ ಗುರುಶಿವಸಿದ್ಧಶಾಂತ ಅಂಕಿತಗಳು ಸಂದಿಗ್ಧವಾಗಿಯೆ ಉಳಿದಿವೆ. ಕ್ರಿ.ಶ. ೧೭೦೦ರಲ್ಲಿ ತುಮಕೂರಿನಲ್ಲಿದ್ದ ಕೆಸ್ತೂರದೇವನಿಗೆ ಗುರುಸಿದ್ಧಲಿಂಗ ಎಂಬ ಅಂಕಿತವಿದೆ. ಪ್ರಸ್ತುತ ಸಂಪುಟದ ೫೩ನೆಯ ಹಾಡು ಈತನದೆ ಎಂಬ ಬಗ್ಗೆ ಖಚಿತವಾಗಿ ಹೇಳುವಂತಿಲ್ಲ.

ತೋಂಟದ ಸಿದ್ಧೇಶ್ವರನನ್ನು ಸ್ತುತಿಸುವ ಸ್ವರವಚನ (೪೯) ಭಕ್ತನ ಆತ್ಮ ನಿವೇದನೆಯಾಗಿ ಕಂಡುಬರುತ್ತದೆ. ಈ ಹಾಡಿನ ಕರ್ತೃ ಅಜ್ಞಾತವಾಗಿಯೆ ಉಳಿದಿದ್ದಾನೆ. ತೋಂಟದ ಸಿದ್ಧೇಶ್ವರನನ್ನು ಕುರಿತ ಮತ್ತೊಂದು ಹಾಡು (೫೦) ಲಿಂಗಾಂಗ ಸಮರಸವನ್ನು ವರ್ಣಿಸುತ್ತದೆ. ಇದರಲ್ಲಿ ಲಿಂಗ ತಾರಕ ಬ್ರಹ್ಮಸೂತ್ರ ರೇಚಕ ಪೂರಕ ಮಹಾಲಿಂಗ ಇವೇ ಮೊದಲಾದ ಯೋಗಪರಿಭಾಷೆಯನ್ನು ಸ್ತ್ರೀಯರ ವೇಷಭೂಷಣಗಳೊಂದಿಗೆ ಸಮೀಕರಿಸಿರುವುದು ವಿಶೇಷ. ಹೀಗೆ ಒಂದೊಂದು ಆಭರಣಕ್ಕೆ ಒಂದೊಂದು ತತ್ತ್ವವನ್ನು ಅನ್ವಯಿಸಿ ಹೇಳುವ ಸ್ವರವಚನಕಾರರ ಪರಿ ಪುರಂದರದಾಸರಲ್ಲಿಯೂ ಕಂಡುಬರುತ್ತದೆ. "ಮುತ್ತೈದೆಯಾಗಿರಬೇಕು ಮುದದಿ .." ಎಂದು ಆರಂಭಗೊಳ್ಳುವ ಕೀರ್ತನೆಯಲ್ಲಿ "ಗುರು ಮಧ್ವಶಾಸ್ತ್ರವನೋದುವುದೆ ಮಾಂಗಲ್ಯ ವರ ವೈರಾಗ್ಯವೆಂಬ ಒಪ್ಪುವ ಮೂಗತಿ...." ಎಂದು ದಾಸರು ಮುತ್ತೈದೆಯ ಆಭರಣದಲ್ಲಿ ಹರಿತತ್ತ್ವವನ್ನು ಅಳವಡಿಸಿದ್ದಾರೆ.

ಚನ್ನಕಾಶಿ ಶಾಂತವೀರ ಅಂಕಿತದ ಏಕೈಕ ಸ್ವರವಚನದಲ್ಲಿ (೫೪) ಸಂಸಾರದಿಂದ ಮುಕ್ತವಾಗುವ ಮಾರ್ಗವನ್ನು ಹೇಳಿದೆ. ಸೂಗೂರ ಮತ್ತು ಗುರುಲಿಂಗಸಂಗ ಅಂಕಿತದ ಬಹಳಷ್ಟು ಹಾಡುಗಳು ಬೆಡಗಿನ ರೂಪದಲ್ಲಿವೆ. ಕಲ್ಮಷಗಳನ್ನು ಸುಟ್ಟು, ವಿನಯದ ವಿಭೂತಿ ಇಟ್ಟು, ಪಂಚಾಕ್ಷರಿ ಮಂತ್ರವನ್ನು ಜಪಿಸಿ, ಪ್ರಣವದ ಹೂವುಗಳನ್ನು ಇಟ್ಟು, ಜ್ಞಾನದೀವಿಗೆ ಹಚ್ಚಿ, ತಾಮಸಗಳನ್ನು ನಾಶಪಡಿಸಿ, ಲಿಂಗಪೂಜೆ ಮಾಡಬೇಕೆಂಬ

ಸೂಗೂರ ಅಂಕಿತದ ಸ್ವರವಚನದಲ್ಲಿ ನೈಜಪೂಜೆ ಯಾವುದೆಂಬುದನ್ನು ಮನವರಿಕೆ ಮಾಡಿಕೊಡಲಾಗಿದೆ (೫೬). ಗುರುಕೃಪೆಯಿಂದ ವಿಷಯೇಂದ್ರಿಯಗಳು ನಾಶವಾದ ಬಗೆಗೆ ಶಿಷ್ಯನ ಧನ್ಯತಾಭಾವ ಸುವ್ಯಕ್ತವಾಗಿದೆ.

ಕ್ರಿ.ಶ.ಸು. ೧೬೦೦ರಲ್ಲಿದ್ದ ಕಂಬಾಳದ ಶಾಂತಮಲ್ಲೇಶನ ಅಂಕಿತ ಶಾಂತ ಕಂಬಾಳೇಶ. ಈತ ಗಣವಚನರತ್ನಾವಳಿ ಎಂಬ ಸಂಕಲನಗ್ರಂಥವನ್ನು ಸಿದ್ಧಪಡಿಸಿದ್ದಾನೆ. ಇದರಲ್ಲಿ ತನ್ನನ್ನು ಷಟ್‌ಸ್ಥಲಾಚಾರ್ಯವರ್ಯ ಎಂದು ಕರೆದುಕೊಂಡಿದ್ದಾನೆ. ಪ್ರಸ್ತುತ ಸಂಪುಟದಲ್ಲಿ ಈತನ ೫ ಹಾಡುಗಳಿವೆ. ಈ ಹಾಡುಗಳಿಗೆ ಗಣವಚನರತ್ನಾವಳಿಯ ಹಾಡುಗಳಿಗೆ ಕೊಟ್ಟಿರುವಂತೆ ಸೂತ್ರಗಳಿಲ್ಲ. ಈ ಕಾರಣದಿಂದ ಶಾಂತ ಕಂಬಾಳೇಶನ ಅಂಕಿತದ ಬಗ್ಗೆ ಅನುಮಾನ ಮೂಡುತ್ತದೆ. ಇಲ್ಲಿನ ಕೆಲವು ಸ್ವರವಚನಗಳ ಮೇಲೆ ವಚನಗಳ ಪ್ರಭಾವವನ್ನೂ ಗುರುತಿಸಬಹುದು. ಬಸವಣ್ಣನವರ "ಎನ್ನ ಕಾಲೇ ಕಂಭ ದೇಹವೇ ದೇಗುಲ...." ಎಂಬ ವಚನದ ಪ್ರೇರಣೆ ೬೩ನೆಯ ಹಾಡಿನಲ್ಲಿ ಕಂಡುಬರುತ್ತದೆ.

ತನ್ನ ದೇಹದ ದೇಗುಲದಿ ಲಿಂಗವನು ನಿಲಿಸಿ
ಉನ್ನತದ ಶಿರವೆಂಬ ಕಳಸವಿರಿಸಿ
ಮುನ್ನ ಮನವೆನಿಪ ವಾರಿಯೊಳು ಮಜ್ಜನಕೆರದು
ಇನ್ನು ನಾಲಿಗೆಯೆಂಬ ಘಂಟೆಯಿಂದ

ಎಂಬ ಸಾಲುಗಳಲ್ಲಿ ದೇಹದ ಒಂದೊಂದು ಅಂಗವನ್ನೂ ಕಳಸ ಘಂಟೆ ಬೀಸಣಿಗೆ ನಂದಿ ಧ್ವಜ ಇವೇ ಮೊದಲಾದ ಪೂಜಾಪರಿಕರಗಳಿಗೆ ಸಂಕೇತವಾಗಿಟ್ಟುಕೊಂಡು ದೇಹವೇ ದೇಗುಲವಾಗಿರುವಾಗ ಬೇರೆ ದೇವಾಲಯವನ್ನು ನಿರ್ಮಿಸುವ ಅಗತ್ಯವಿಲ್ಲವೆಂಬುದನ್ನು ಧ್ವನಿಸಲಾಗಿದೆ. ಇದು ವೀರಶೈವರ 'ಜಂಗಮಕ್ಕಳಿವಿಲ್ಲ' ಎಂಬ ಕಲ್ಪನೆಗೆ ಅನುಗುಣವಾಗಿದೆ. ಅಧ್ಯಾತ್ಮದ ಅಭಿವ್ಯಕ್ತಿಯ ನಡುವೆಯೂ ಇಲ್ಲಿ ಪ್ರತಿಪಾದಿತವಾಗಿರುವ ಸುಜನರನ್ನು ಕಾಡಬೇಡ, ಮೂರ್ಖರೊಡನೆ ಸೇರಬೇಡ, ಲೋಭಿಯನ್ನು ಬೇಡಬೇಡ, ಪರ ಧನವನ್ನು ನೋಡಬೇಡ (೬೩) ಎಂಬ ಮೌಲ್ಯಗಳು ಸಾರ್ವಕಾಲಿಕ ಮನ್ನಣೆ ಪಡೆಯುವಂತಿವೆ. ಈ ಬಗೆಯ ಆಣಿಮುತ್ತುಗಳು ಸುಭಾಷಿತಗಳಲ್ಲಿ ಹೆಚ್ಚಾಗಿ ಕಂಡುಬರುತ್ತವೆ. ಗಂಗೆಯಲ್ಲಿ ಮಿಂದರೆ ಮುಕ್ತಿಯುಂಟೆಂಬ ಸಾಂಪ್ರದಾಯಿಕ ನಂಬಿಕೆಯನ್ನು ಅಲ್ಲಗಳೆಯುವ ಶಾಂತ ಕಂಬಾಳೇಶನು ಬಾಹ್ಯಶುಚಿಗಿಂತ ಅಂತರಂಗದ ಶುಚಿಯ ಮಹತ್ವವನ್ನು ಎತ್ತಿಹಿಡಿದಿದ್ದಾನೆ (೬೫). ಗಂಗೆಯಿಂದ ಮುಕ್ತಿ ದೊರೆಯುತ್ತದೆ ಎನ್ನಬಹುದಾದರೆ ಮೀನು ಆಮೆ ಕಪ್ಪೆ ಮೊದಲಾದ ಜಲಚರಗಳಿಗೇಕೆ ಕೈಲಾಸ ಲಭ್ಯವಾಗಿಲ್ಲವೆಂದು ಪ್ರಶ್ನಿಸುತ್ತಾನೆ. ವೈದಿಕ ವಿರೋಧಿಯಾದ ಈ ಬಗೆಯ ವಾದವನ್ನು ಜೈನಕವಿ ಸೋಮ

ದೇವ ಸಹ ತನ್ನ ಯಶಸ್ತಿಲಕ ಚಂಪುವಿನಲ್ಲಿ ಮುಂದಿಟ್ಟಿದ್ದಾನೆ. ಕನ್ನಡದಲ್ಲಿ ಆಯುತ ವರ್ಮನ ರತ್ನಕರಂಡಕ ಶ್ರಾವಕಾಚಾರದಲ್ಲಿ ಕೂಡ ಇಂಥ ಚರ್ಚೆ ಕೇಳಿಬರುತ್ತದೆ.

ಹುಚ್ಚನಂಜೇಶ ಅಂಕಿತದ ಸ್ವರವಚನಗಳಿರುವ ಹಸ್ತಪ್ರತಿಯ (ಕೆಎಶಿ೬೮)ಆರಂಭ ದಲ್ಲಿ ಕಿನ್ನರಿದೇವರು ನಿರೂಪಿಸಿದ ವಚನ ಎಂಬ ಬರಹವಿದೆ. ಈ ಆಧಾರದಿಂದ ಇದು ಕಿನ್ನರಿದೇವನ ಅಂಕಿತವೆಂದು ಊಹಿಸುವ ಸಾಧ್ಯತೆಯಿದೆ. ಈತನ ಹಾಡಿನಲ್ಲಿ ಲಿಂಗದಲ್ಲಿ ಐಕ್ಯವಾಗುವ ಪದವಿಯನ್ನಲ್ಲದೆ ಬೇರಾವ ಪದವಿಯನ್ನೂ ಬಯಸದ ಭಕ್ತನ ಅಂತರಂಗದ ತುಡಿತವಿದೆ. ಅರಸುತನ, ಆನೆ, ಇಂದ್ರನ ವೈಭೋಗ, ಅಷ್ಟಸಿದ್ಧಿ, ಅಷ್ಟದಿಕ್ಪಾಲಕರ ಅಧಿ ಕಾರ, ಮುನಿಜೀವನ, ಹರಿಬ್ರಹ್ಮರ ಪದವಿ ಇವೇ ಮುಂತಾದ ಸುಖಗಳೆಲ್ಲ ಗುರುವಿನಲ್ಲಿ ಒಂದಾಗುವ ಶಾಶ್ವತಸುಖದ ಮುಂದೆ ತುಚ್ಛವಾಗಿ ತೋರುವುದನ್ನು ಹೇಳಿದೆ (೬೭).

ಲೌಕಿಕಚಿಂತೆಯನ್ನು ನಾಶಪಡಿಸಿ ನಿಶ್ಚಿಂತೆಯಲ್ಲಿ ಬಾಳುತ್ತಿರುವ ಮಹಂತರ ದರ್ಶನಕ್ಕಾಗಿ ಕಾತರಿಸುವ ಪರಿಯನ್ನು ನಿರ್ವಯಲಲಿಂಗ ಅಂಕಿತದ ಹಾಡುಗಳಲ್ಲಿ ಕಾಣ ಬಹುದು (೭೧). ಶಿವಭಕ್ತಿ ಮಾಡುವುದು, ಯಮನ ಬಾಧೆಯನ್ನು ಗೆಲ್ಲುವುದು, ಎಲ್ಲರ ಮನ್ನಣೆ ಗಳಿಸುವುದು, ವಿರಕ್ತನಾಗುವುದು, ಅನ್ನದಾನ ಮಾಡುವುದು, ಆತ್ಮ ಪೂರಕವಾಗಿ ನಡೆದುಕೊಳ್ಳುವುದು, ಹೆಂಗಳೆಯರ ಮಾತಿಗೆ ಸೋಲದಿರುವುದು, ಶರಣರ ಸೇವೆಗೈಯುವುದು, ನುಡಿದಂತೆ ನಡೆಯುವುದು, ಬಡವರನ್ನು ರಕ್ಷಿಸುವುದು, ತ್ಯಾಗ ಶೀಲರಾಗಿ ಬಾಳುವುದು ಕಠಿಣಕರವಾದುದು. ಸುಜ್ಞಾನಿಗಳಿಗೆ ಮಾತ್ರ ಸಾಧ್ಯವಾಗು ವಂಥದ್ದು. ಇಂಥವರ ಸಂಗ ಶಿವಪದವಿಗೆ ದಾರಿಮಾಡಿಕೊಡುತ್ತದೆ (೭೫). ಗುರುಕೃಪೆಗೆ ಪಾತ್ರನಾದ ಸಾಧಕನ ಅಪೂರ್ವ ಆನಂದವನ್ನು ಇಲ್ಲಿನ ಹಾಡು ಸಾದರಪಡಿಸಿದೆ.

ಗಂಗೇಶ ಅಂಕಿತದ ಸ್ವರವಚನದ ಕರ್ತೃ ಅನಾಮಧೇಯನಾಗಿಯೆ ಉಳಿದಿದ್ದಾನೆ. ಈ ಅಂಕಿತದ ಸುಮಾರು ೪೫ ಸ್ವರವಚನಗಳನ್ನು ಪ್ರಕಟಿಸಿರುವ ಜಿ.ಎ.ಶಿವಲಿಂಗಯ್ಯ ನವರು "ಕಕುದ್ಗಿರಿ ಎಂಬ ಮಾತಿನಿಂದ ಶಿವಗಂಗೆಯ ಬೆಟ್ಟದ ಪ್ರಭುವಾದ ಗಂಗಾಧ ರೇಶ್ವರನ ಅಂಕಿತವೇ ಗಂಗೇಶ ಎಂಬುದು ಇಲ್ಲಿ ಖಚಿತ. ಕವಿಯ ಕಾಲ ಸುಮಾರು ೧೬ನೇ ಶತಮಾನವಿರಬಹುದು" ಎಂದು ಊಹಿಸಿದ್ದಾರೆ. ಈ ಸಂಪುಟದಲ್ಲಿ ಗಂಗೇಶ ಅಂಕಿತದ ಒಂದೇ ಒಂದು ಸ್ವರವಚನವಿದ್ದು ಅದರಲ್ಲಿ ಲಿಂಗದ ಜೊತೆಗೆ ಒಂದಾಗುವ ಪ್ರಕ್ರಿಯೆಯಾದ ಏಕಮುಖಕ್ಕೂ ಅನೇಕಮುಖಕ್ಕೂ ಇರುವ ವ್ಯತ್ಯಾಸವನ್ನು ನಿರೂಪಿಸಿದೆ.

ಸಿದ್ಧಲಿಂಗ ಅಂಕಿತವು ಯಾರದೆಂಬುದು ಸ್ಪಷ್ಟವಿಲ್ಲ. ಮರುಳದೇವರಿಗೆ ಈ ಅಂಕಿತ ವಿರುವುದಾಗಿ ತಿಳಿದುಬರುತ್ತದೆ. ಪ್ರಸ್ತುತ ಸಂಪುಟದಲ್ಲಿ ಸಿದ್ಧಲಿಂಗ ಅಂಕಿತದ ಆರು ಹಾಡುಗಳಿವೆ. ಇವುಗಳ ಮೇಲೆ ದಾಸರ ಕೀರ್ತನೆಯ ಪ್ರಭಾವವನ್ನು ನಿಚ್ಚಳವಾಗಿ ಗುರುತಿಸಬಹುದು. ಆದುದರಿಂದ ಈ ಹಾಡುಗಳ ರಚನಾ ಕಾಲ ಸು. ೧೬೦೦ ಎಂದು

ಊಹಿಸಬಹುದು. "ಗೋವಿಂದಾ ಎನ್ನಿ ಬಲ್ಲವರೆಲ್ಲರು ಗೋಕುಲಪತಿ ಬಸವಣ್ಣನೆಂದು" (೭೮) ಎಂಬ ಹಾಡಿನಲ್ಲಿ ಬಸವನನ್ನು ಗೋವಿಂದ ಎಂದು ಕರೆದು ಆ ಮೂಲಕ ಗೋವಿನ ಮಹಿಮೆಯನ್ನು ಬಣ್ಣಿಸಲಾಗಿದೆ. ಅಂತೆಯೆ ಕನಕದಾಸರ ಸುಪ್ರಸಿದ್ಧ ಕೀರ್ತನೆ—

ತಲ್ಲಣಿಸದಿರು ಕಂಡ್ಯ ತಾಳು ಮನವೆ
ಎಲ್ಲರನು ಸಲಹುವನು ಶ್ರೀನಿವಾಸ ॥ಪಲ್ಲ

ಬೆಟ್ಟದಾ ತುದಿಯಲ್ಲಿ ಹುಟ್ಟಿದ ವೃಕ್ಷಕ್ಕೆ
ಕಟ್ಟೆಯನು ಕಟ್ಟಿ ನೀರೆರೆದವರು ಯಾರೊ
ಹುಟ್ಟಿಸಿದ ದೇವ ತಾ ಹೊಣೆಗಾರನಾಗಿರಲು
ಗಟ್ಯಾಗಿ ರಕ್ಷಿಪನು ಇದಕೆ ಸಂಶಯವಿಲ್ಲ ೧

ನವಿಲಿಗೆ ಚಿತ್ರ ಬರೆದವರು ಯಾರು
ಪವಳದ ಲತೆಗೆ ಕೆಂಪಿಟ್ಟವರು ಯಾರು
ಸವಿಮಾತಿನರಗಿಳಿಗೆ ಹಸುರು ಬರೆದವರು ಯಾರು
ಇವೆಲ್ಲ ಮಾಡಿದ ದೇವ ಸಾಕಲಾರದೆ ಬಿಡುವನೆ ೨

ಕಲ್ಲಿನಲಿ ಹುಟ್ಟಿ ತಾ ಕೂಗುವ ಕಪ್ಪೆಗೆ
ಅಲ್ಲೆ ಆಹಾರವ ತಂದೀಯುವರಾರು
ಬಲ್ಲಿದನು ನೆಲೆಯಾದಿಕೇಶವರಾಯ
ಎಲ್ಲರನು ಸಲಹುವನು ಇದಕೆ ಸಂಶಯವಿಲ್ಲ ೩

ಎಂಬುದು ಪ್ರಸ್ತುತ ಸಂಪುಟದಲ್ಲಿ ಶಿವಗೀತೆಯಾಗಿ ಮಾರ್ಪಟ್ಟಿದ್ದು ಅದು ಹೀಗಿದೆ—

ತಲ್ಲಣಿಸದಿರು ಹಾಗೆ ತಾಳು ಮನವೆ ಶಿವ
ನೆಲ್ಲಿರ್ದಡೆ ರಕ್ಷಿಸುವ ನೀನಿದಕೆ ಸಂದೇಹ ಬೇಡ ॥ಪಲ್ಲ

ಬೆಟ್ಟದಾ ತುದಿಯ ಮೇಲೆ ಬೆಳೆದಿರ್ದ ವೃಕ್ಷಗಳಿಗೆ
ಕಟ್ಟೆಕಟ್ಟಿ ನೀರನೆರೆದು ಕಾಯುವವರ್ಯಾರೊ
ಹುಟ್ಟಿಸಿದ ಶಿವ ತಾನು ಹೊಣೆಗಾರನಾಗಿ ಹೋಗಿ
ಕೊಟ್ಟು ಸಲಹುವನಿನ್ನಿದಕೆ ಸಂದೇಹ ಬೇಡ ೧

ಅಡವಿಯೊಳಗೆ ತಿರುಗಾಡುವ ಮೃಗವಕ್ಕಿಗೆ
ಅಡಿಗಡಿಗೆ ಆಹಾರವನಿತ್ತವರ್ಯಾರೊ
ಪಡೆದ ಜನನಿಯಂತೆ ಪ್ರಾಪ್ತಿಯೆಂಬುದು ತ
ನ್ನೆಡೆಗೆ ತಂದುಣಿಸುವದಿದಕೆ ಸಂಶಯಬೇಡ ೨

ಕಲ್ಲೊಳು ಜನಿಸಿ ಪ್ರೈಗಾಣದಿಹ ದರ್ದ್ದುರಗೆ
ಇಲ್ಲದಂದಿಗೆ ತುತ್ತನಿತ್ತವರ್‍ಯಾರೊ
ಬಲ್ಲಿದ ಗದುಗಿನ ತ್ರಿಯಂಬಕನಿರ್ವಾಗ ತಾನು ತಾ
ನಲ್ಲಿ ರಕ್ಷಿಪನಿದಕೆ ಸಂದೇಹವೇಕೆ ೩

ಹೀಗೆ ವೀರಶೈವಸಾಹಿತ್ಯಕ್ಕೂ ದಾಸಸಾಹಿತ್ಯಕ್ಕೂ ಕೊಳುಕೊಡುಗೆಗಳು ನಡೆದಿವೆ. ಚನ್ನವೀರೇಶ ಮತ್ತು ಅಕ್ಕನ ಶ್ರೀಗಿರಿ ಮಲ್ಲಿಕಾರ್ಜುನ ಅಂಕಿತದ ಹಾಡುಗಳಲ್ಲಿ ಲಿಂಗದ ಬಗೆಗಿನ ಮಧುರಭಾವ ವ್ಯಕ್ತಪಟ್ಟಿದೆ. ಮೈಲಾರಬಸವಲಿಂಗಶರಣನಿಗೆ ಚನ್ನವೀರ ಎಂಬ ಅಂಕಿತವಿದೆ. ಆದರೆ ಇಲ್ಲಿ ಉಕ್ತನಾದ ಚನ್ನವೀರೇಶ ಭಿನ್ನನಾಗಿರುವ ಸಾಧ್ಯತೆಯಿದೆ. ಶ್ರೀಗಿರಿಮಲ್ಲಿಕಾರ್ಜುನ ಅಂಕಿತದ ೮೫ನೆಯ ಹಾಡಿನಲ್ಲಿ ಸುಪ್ರಭಾತದ ಚಟುವಟಿಕೆಗಳನ್ನು ಸೆರೆಹಿಡಿಯಲಾಗಿದೆ. ಶಂಕರ, ಶಂಕರೇಶ್ವರ, ಗುರುಶಂಕರ ಅಂಕಿತದ ವಚನಗಳು ಶಂಕರೇಶನಿಂದ ರಚಿತವಿರಬೇಕೆಂದು ತೋರುತ್ತದೆ. ಈತನ ಕಾಲದ ಬಗೆಗೆ ವಿದ್ವಾಂಸರಲ್ಲಿ ಒಮ್ಮತವಿಲ್ಲ. ಕ್ರಿ.ಶ. ೧೪೩೦ ರಿಂದ ೧೬೦೦ರ ವರೆಗೆ ಈತನ ಕಾಲದ ಗಡವು. ಈತನ ಒಂದು ಹಾಡಿನಲ್ಲಿ (೮೭) ಶರಣರು ಸಾಯುಜ್ಯ ಪಡೆದ ಕಥೆಯನ್ನು ಒಂದೊಂದು ನುಡಿಯಲ್ಲಿ ಸಂಕ್ಷಿಪ್ತವಾಗಿ ಹೇಳಿದೆ. ಶಂಕರ ಅಂಕಿತದ ವಚನಗಳು ಕೂಡ ಪುರಂದರರ ಕೀರ್ತನೆಗಳ ಪ್ರಭಾವಕ್ಕೆ ಒಳಗಾಗಿವೆ (೯೦, ೯೧). ಈತ ಶಿವಶರಣರ ಮೇಲೆ ರಗಳೆ, ಶತಕ, ದಂಡಕ, ಕಂದ ಮೊದಲಾದ ಪ್ರಕಾರಗಳಲ್ಲಿ ಗ್ರಂಥಗಳನ್ನು ಬರೆದಿದ್ದಾನೆ.

ವಿಜಯನಗರದ ಸಾಳುವ ನರಸಿಂಹನ ಆಸ್ಥಾನಕವಿಯಾಗಿದ್ದ ಕವಿಲಿಂಗ (ಕ್ರಿ.ಶ. ೧೪೯೦)ನಿಗೆ ನಂಜುಂಡ, ಕಪಿನಿಪತಿನಂಜುಂಡ ಎಂಬ ಅಂಕಿತಗಳಿವೆ. ಪ್ರಸ್ತುತ ಸಂಪುಟದಲ್ಲಿ ಈತನ ಎರಡು ಹಾಡುಗಳಿವೆ. ನಂಜುಂಡ ಅಂಕಿತದಲ್ಲಿ (೯೭) ಒಂದು, ಮತ್ತೊಂದು ಕವಿಲಿಂಗ ಎಂಬ ನಾಮಧೇಯದಲ್ಲಿ. ಹಣೆಬರಹ ಅಥವಾ ವಿಧಿಲಿಖಿತದ ಬಗೆಗಿನ ನಂಬಿಕೆ ಮಾನವಕುಲದ ಎಲ್ಲ ಧರ್ಮಗಳಲ್ಲಿಯೂ ಕಂಡುಬರುತ್ತದೆ. ನಿತ್ಯಜೀವನದಲ್ಲಿ ಅಘಟಿತ ಘಟನೆಗಳು ಜರುಗಿದಾಗ ಮನುಷ್ಯ ಹತಾಶನಾಗುವುದು ಸಹಜ. ಹೀಗೆ ನಿರಾಶಗೊಂಡ ಸಂದರ್ಭದಲ್ಲಿ "ಏಕೆ ಚಿಂತಿಸುವೆ ಬರಿದೆ ಶಿವ ಬರೆದ ವಾಕು ತಪ್ಪದು ಪಣೆಯಲಿ ಮರುಳೆ" ಎಂಬ ಹಾಡಿನ ಮೂಲಕ ಸುಖದುಃಖಕ್ಕೆ ಅಂಜದೆ ಶಿವನನ್ನು ಅರ್ಚಿಸಬೇಕೆಂದು ಹೇಳಿದ್ದಾನೆ ಕವಿ. ತನ್ನ ಕಾಲದಲ್ಲಿ ಪ್ರಚಲಿತವಿದ್ದ ಕಾವ್ಯಗಳನ್ನೇ ವಸ್ತುವಾಗಿಟ್ಟುಕೊಂಡು ರಚಿಸಿರುವ ಕವಿಲಿಂಗನ ಹಾಡು ವಿಶಿಷ್ಟವಾಗಿದೆ. ಇದರಲ್ಲಿ ಹರಿಶ್ಚಂದ್ರ ಕಾವ್ಯ, ಲೀಲಾವತಿ, ಪ್ರಭುಲಿಂಗಲೀಲೆ, ಮೋಹನ ತರಂಗಿಣಿ, ಅಮರುಕ, ಧನಂಜಯ ನಿಘಂಟು, ಸಂಗಮಪುರಾಣ, ಜೈಮಿನಿಭಾರತ ಮೊದಲಾದ ಕಾವ್ಯಗಳ ಯಾದಿಯೆ ದೊರೆಯುತ್ತದೆ. ಕ್ರಿ.ಶ. ೧೪೯೦ರಲ್ಲಿದ್ದ ಕವಿಲಿಂಗನ ಹಾಡಿನಲ್ಲಿ, ಜೈಮಿನಿಯ ಉಲ್ಲೇಖವನ್ನು ನೋಡಿದಾಗ ಈತನ ಹೆಸರಿನಲ್ಲಿ ಬಂದ ಪ್ರಕ್ಷಿಪ್ತ ಹಾಡಾಗಿದೆಯೆ ಅಥವಾ

ಜೈಮಿನಿಯ ಕಾಲ ನಿರ್ದೇಶಿಸಲು ಇದು ಸಹಾಯಕವೆ ಅಥವಾ ಕವಿಲಿಂಗ ಎಂಬ ಹೆಸರಿನವರು ಇಬ್ಬರು ವ್ಯಕ್ತಿಗಳು ಇದ್ದಾರೆಯೆ ಎಂಬುದನ್ನು ಪರಿಶೀಲಿಸಬೇಕಾಗಿದೆ.

ಕರಿಬಸವೇಶ ಎಂಬ ಹೆಸರಿನವರು ವೀರಶೈವಸಾಹಿತ್ಯದಲ್ಲಿ ಅನೇಕರು ದೊರೆಯುತ್ತಾರೆ. ಕರಿಬಸವಾರ್ಯನೆಂಬಾತ ೧೨೮ ಹಾಡುಗಳನ್ನು ಬರೆದಿದ್ದಾನೆ. ಮುರಿಗಾ ಶಾಂತವೀರನಿಗೆ ಕರಿಬಸವ ಎಂಬ ಪರ್ಯಾಯನಾಮವಿದೆ. ಈ ಸಂಪುಟದ ಕರಿಬಸವೇಶ ಇದೇ ಪರಂಪರೆಗೆ ಸೇರಿರಬಹುದೆ ? ಈತನ ಹಾಡಿನಲ್ಲಿ ಶಿಷ್ಯನ ವ್ಯಕ್ತಿತ್ವವನ್ನು ರೂಪಿಸಿದ ಭಕ್ತಿಮಾರ್ಗದಲ್ಲಿ ತೊಡಗಿಸಿದ ಗುರುವಿನ ಬಗೆಗೆ ಮೆಚ್ಚುಗೆ ವ್ಯಕ್ತವಾಗಿದೆ (೯೮)

ಕೂಡಲಚೆನ್ನಸಂಗಮ ಅಂಕಿತವು ಚೆನ್ನಬಸವಣ್ಣನಿಗೆ ಸಂಬಂಧಿಸಿದುದಾಗಿದೆ. ಈ ಅಂಕಿತದ ಎರಡೂ ಹಾಡುಗಳು ವೀರಶೈವಯೋಗವನ್ನು ನಿರೂಪಿಸುತ್ತವೆ (೧೦೦, ೧೦೧), ಶಿಥಿಲ ಬಂಧದ ಈ ಹಾಡುಗಳನ್ನು ನೋಡಿದಾಗ ಇವು ಚೆನ್ನಬಸವಣ್ಣ ಕೃತವೆ, ಅಥವಾ ಆ ಅಂಕಿತದಲ್ಲಿ ಬರೆದ ಅನ್ಯರ ರಚನೆಯೆ ಎಂಬ ಅನುಮಾನ ಮೂಡುತ್ತದೆ. ಘನಲಿಂಗ ಅಂಕಿತದ ಹಾಡು (೧೦೨) ಅಂಗಲಿಂಗ ಸಂಯೋಗದ ಮಹತ್ವವನ್ನು ಅರುಹುತ್ತದೆ.

ರಾಚೋಟಿಸ್ವಾಮಿ ಅಂಕಿತ ಯಾರದೆಂಬ ಬಗ್ಗೆ ಸ್ಪಷ್ಟ ತಿಳಿವಳಿಕೆ ಇಲ್ಲ. ಏಳುನೂರು ಮಂದಿ ವಿರಕ್ತರಲ್ಲಿ ರಾಚೋಟಿದೇವ ಎಂಬ ಒಬ್ಬ ವ್ಯಕ್ತಿ ಕಂಡುಬರುತ್ತಾನೆ. ತಿಳವಳ್ಳಿ ಕಟ್ಟಿಗೆಹಳ್ಳಿ ರಾಚೋಟಿಸ್ವಾಮಿ ಎಂಬಾತನ ಉಲ್ಲೇಖವೂ ಸಿದ್ಧಲಿಂಗ ಪರಂಪರೆಯಲ್ಲಿ ದೊರೆಯುತ್ತದೆ. ಸಣ್ಣ ಬರಹದ ರಾಚೋಟಿಸ್ವಾಮಿ ಎಂಬುವವರು ಮುಮ್ಮಡಿಯವರ ಕಾಲದಲ್ಲಿ ಚಿತ್ರದುರ್ಗದ ೧೮ನೆಯ ಪಟ್ಟಾಧ್ಯಕ್ಷರಾಗಿದ್ದರು. ಇವರಲ್ಲಿ ಎರಡನೆ ವ್ಯಕ್ತಿಯೆ ರಾಚೋಟಿಸ್ವಾಮಿ ಅಂಕಿತ ಹೊಂದಿದವನಿರಬೇಕು. ಸಪ್ತವ್ಯಸನ, ಅಷ್ಟಮದ, ಅರಿಷಡ್ವರ್ಗವನ್ನು ತೊರೆದು ಭಕ್ತಿ ಜ್ಞಾನ ವೈರಾಗ್ಯಮಾರ್ಗವನ್ನು ವಿರಕ್ತಿಯಿಂದ ತಿಳಿದು, ರಾಚೋಟಿಸ್ವಾಮಿಯ ಸೇವಕನಾಗಬೇಕೆಂಬ ಆಶಯ ಈತನ ಹಾಡಿನಲ್ಲಿ ವ್ಯಕ್ತವಾಗಿದೆ (೧೦೩). ಅಮ್ಮವ್ವೆಯ ಬಗೆಗಿನ ಸ್ವರವಚನದಲ್ಲಿ ಆಕೆಯ ಜೀವಿತದ ಮಹತ್ವದ ಘಟನೆಯನ್ನು ಸಂಕ್ಷಿಪ್ತವಾಗಿ ಹೇಳಲಾಗಿದೆ.

ಪ್ರಾಣಿಗಳನ್ನು ರೂಪಕವಾಗಿ ಬಳಸುವ ತಂತ್ರ ಶರಣರ ವಚನಗಳಲ್ಲಿ ಹಾಗೂ ಹರಿದಾಸರ ಕೀರ್ತನೆಗಳಲ್ಲಿ ಕಂಡುಬರುತ್ತದೆ. ವಾದಿರಾಜರು ಕುದುರೆಯನ್ನು ಪ್ರತಿಮೆಯಾಗಿಟ್ಟುಕೊಂಡು ಬರೆದ "ಕುದುರೆ ಬಂದಿದೆ" ಎಂಬ ಕೀರ್ತನೆ ಹೆಸರುವಾಸಿಯಾಗಿದೆ. ಅಂತೆಯೆ ಸ್ವರವಚನಕಾರರೂ ಇಂಥ ತಂತ್ರವನ್ನು ಬಳಸಿಕೊಂಡಿದ್ದಾರೆ. ನಿರಂಜನ ಸಿದ್ಧ ಅಂಕಿತದ ಸ್ವರವಚನದಲ್ಲಿ (೧೦೮) ಕೋಗಿಲೆಯು ರೂಪಕವಾಗಿ ಬಂದಿದೆ. ಮನದ ಚಂಚಲತೆಯನ್ನು ಹೋಗಲಾಡಿಸಿ, ರಾಗದ್ವೇಷವನ್ನು ತೊಲಗಿಸಿ, ಶಿವಯೋಗದಿಂದ ಅನುಪಮಸುಖವನ್ನು ಪಡೆಯುವ ಮಾರ್ಗವನ್ನು ಇಲ್ಲಿ ವಿವರಿಸಿದೆ (೧೦೬)

ಸುಜ್ಞಾನಲಿಂಗ ಅಂಕಿತದ ಸ್ವರವಚನದಲ್ಲಿ ಶರೀರವನ್ನು ದುರ್ಗಕ್ಕೆ ಪ್ರತಿಮೆಯಾಗಿಟ್ಟುಕೊಂಡಿದೆ. ಇಲ್ಲಿ ಕೋಟೆ, ಆಳ್ವೇರಿ, ಕೊತ್ತಳ, ತೆನೆ, ಒಡ್ಡೋಲಗ, ಕೈಜೀತದವರು, ಆಳುಗಳು, ಮಾವತಿಗರು, ಕುದುರೆಸಾಲು, ಮಂತ್ರಿಗಳು, ಬೇಟೆಕಾರರು ಇವು ಸಾಂಕೇತಿಕವಾಗಿ ಬಂದಿದ್ದು ಮೇಲುನೋಟಕ್ಕೆ ಒಂದು ಪಾಳೆಯಪಟ್ಟಿನ ಚಿತ್ರ ಕಟ್ಟಿಕೊಡುತ್ತಲೆ ಅಂದಿನ ರಾಜಕೀಯ ಸ್ಥಿತಿಗತಿಗಳ ಬಗ್ಗೆ ಕ್ಷಕಿರಣ ಬೀರುವಂತೆ ಕಂಡುಬಂದರೂ ಆಂತರ್ಯದಲ್ಲಿ ಶರೀರದ ಅಶಾಶ್ವತೆಯನ್ನು ನಿರೂಪಿಸುತ್ತದೆ. (೧೯೯) ಇದೇ ಬಗೆಯ ಒಂದು ಚಿತ್ರ ಕೊಟ್ಟೂರು ಬಸವಲಿಂಗನ ಹಾಡಿನಲ್ಲಿಯೂ ಕಂಡುಬರುತ್ತದೆ. ಜಾತಿ ಎಂಬುದು ಹುಟ್ಟಿನಿಂದ ಬಂದದ್ದಲ್ಲ. ಅಲ್ಪಜಾತಿಯವರೆಂದರೆ ಗುರುಲಿಂಗಜಂಗಮವನ್ನು ಅರಿಯದವರು, ಡಾಂಭಿಕರು, ಅಸೂಯಾಪರರು, ನಿಂದಕರು ಇವರೇ ಮೊದಲಾದವರು. ಇಂಥವರ ಸಂಗ ಮಾಡಬಾರದೆಂಬುದು ಸುಜ್ಞಾನಲಿಂಗ ಅಂಕಿತದ ಹಾಡಿನ ನಿಲುವು.

ಪ್ರೌಢದೇವರಾಯನ ಕಾಲದಲ್ಲಿದ್ದ ಗುರುಬಸವ (ಸು. ೧೪೩೦) ಶಿವಯೋಗಾಂಗಭೂಷಣ, ಸದ್ಗುರು ರಹಸ್ಯ, ಕಲ್ಯಾಣೇಶ್ವರ, ಸ್ವರೂಪಾಮೃತ, ವೃಷಭಗೀತೆ, ಅವಧೂತಗೀತೆ, ಮನೋವಿಜಯ ಕಾವ್ಯ ಎಂಬ ಏಳುಕೃತಿಗಳನ್ನು ರಚಿಸಿ ಸಪ್ತಕಾವ್ಯದ ಗುರುಬಸವ ಎಂದೇ ಪ್ರಖ್ಯಾತನಾಗಿದ್ದಾನೆ. ಈತನ ಹಾಡು ಮುಂದೆ ಹೊಗಳಿ ಹಿಂದೆ ತೆಗಳುವ ಕನಿಷ್ಠ ವ್ಯಕ್ತಿತ್ವದ ಜನರನ್ನು ಕುರಿತಿದೆ. ತುರುಗೆರೆಯ ಸಿದ್ಧೇಶ್ವರ ಅಂಕಿತದ ಹಾಡಿನಲ್ಲಿ ಕೂಡ ಪರಮಾತ್ಮನ ಲೀಲೆಯನ್ನರಿಬೇಕೆಂಬ ಸೂಚನೆಯಿದೆ.

ಅಲ್ಲಮಪ್ರಭುವಿನ ಅಂಕಿತ ಗುಹೇಶ್ವರ. ಈತನ ಒಂದು ಹಾಡಿನಲ್ಲಿ (೧೧೭) ಶರಣಸ್ಥಲವನ್ನು ವಿವರಿಸಲಾಗಿದೆ. ಈ ಹಾಡನ್ನು ಅಲ್ಲಮಪ್ರಭುಗಳ ಸ್ವಂತ ರಚನೆ ಎನ್ನುವುದಕ್ಕಿಂತ ತರುವಾಯದ ಸಂಕಲನಕಾರರು ಈತನ ವಚನವನ್ನು ಹಾಡಾಗಿ ಪರಿವರ್ತಿಸಿದರೆನ್ನುವುದು ಸೂಕ್ತ. ಅಕ್ಕಮಹಾದೇವಿಯ ವಚನವನ್ನೂ ಹೀಗೆ ಹಾಡಾಗಿ ಮಾರ್ಪಡಿಸಿದ ನಿದರ್ಶನವಿದೆ. ಪ್ರಸ್ತುತ ಅಲ್ಲಮಪ್ರಭುವಿನ—

ನೀರಿಲ್ಲದ ನೆಳಲಿಲ್ಲದ ಬೇರಿಲ್ಲದ ಗಿಡ ಹುಟ್ಟಿತ್ತು
ತಲೆಯಿಲ್ಲದ ಮೃಗ ಬಂದು ಮೇಯಿತ್ತು ಗಿಡುವ
ಕಣ್ಣಿಲ್ಲದ ಕುರುಡನು ಕಂಡನಾ ಮೃಗವ
ಕೈಯಿಲ್ಲದ ವ್ಯಾಧನು ಎಚ್ಚನಾ ಮೃಗವ
ಕಿಚ್ಚಿಲ್ಲದ ನಾಡಿಗೊಯ್ದು ಸುಟ್ಟು ಬಾಣಸವಮಾಡಿ ಲಿಂಗಕರ್ಪಿತ
ವಾಯಿತ್ತು, ಗುಹೇಶ್ವರಾ

ಎಂಬ ವಚನವು ಈ ಸಂಪುಟದಲ್ಲಿ ಹಾಡಾಗಿ ಮೂಡಿಬಂದಿರುವುದು ಹೀಗಿದೆ—

ಬಯಲ ಬಾವಿಯ ನೀರಿಗೆ ಬಂದಳು ನಾರಿ
ತಾ ಜಾರಿಬಿದ್ದಳು ತನ್ನ ಕೊಡನುಳಿಯಿತ್ತು ನೋಡ

ನೀರಿಲ್ಲದೆ ನೆರಳಿಲ್ಲದೆ ಬೇರಿಲ್ಲದೆ ಸಸಿ ಹುಟ್ಟಿತ್ತು
ಹೂವಿಲ್ಲದೆ ಕಾಯಿಲ್ಲದೆ ಸಾಲಕೆ ಬಂದೆ ನೋಡ
ಕಣ್ಣಿಲ್ಲದೆ ಕಾಲಿಲ್ಲದೆ ಕಾಯ್ವರು ನಾಲ್ವರು
ಹೆಣ್ಣಿಗೆ ಮರುಳಾದವರು ಹದಿನೆಂಟುಲೋಕ

ಕುರುಡ ಕಂಡನು ಹಾವ
ಬರುವ ನಡುಯಿರುಳೊಳು ಮೂಗ ಕೇಳಿದ ಕಾನನ ಕಿವುಡನ
ಕಿವಿ ಕೇಳಿ ಇರುವೆ ಹಾರಿತು ಗಗನಕೆ
ಮರ ಮುರಿಯಿತು ಕೆಳಯಿಕೆ ಬೆಟ್ಟಕೆ ಬೇಗೆವರಿಯಿತು ಪೇಳ

ಕಂಚಿನ ಕಾರಣೆಯೊಳು ಕಿಂಚಿಸೆ ಕಾರಣೆಗೆಯಿದು
ರೇಚಿಗೆ ಬರುವವಳ ನೋಡಸ್ಮರ ಮುಂದೆ
ಹೇಳಲೆನಗಳವಲ್ಲ ಪೇಳುವ ಪುರುಷನೆ ಬಲ್ಲ
ಇದರ ಭೇದವ ನಿಂದ ಗೂಹೇಶ್ವರನೆ ಬಲ್ಲ (೧೧೭)

ಶಿವನ ಪಂಚವಿಂಶತಿಲೀಲೆಗಳು ಪಲವಾರು ಹಾಡುಗಳಿಗೆ ಗ್ರಾಸವನ್ನೊದಗಿಸಿವೆ. ಇಲ್ಲಿನ ಮಂಗಳಾರತಿ ಹಾಡಿನಲ್ಲಿ ಶಿವನ ಕೆಲವು ಲೀಲೆಗಳನ್ನು ಬಣ್ಣಿಸಲಾಗಿದೆ. ವೀರ ಶರಭ ಎಂಬುದು ಅಂಕಿತವೊ ಅಥವಾ ಶರಭಾವತಾರಿಯಾದ ವೀರಭದ್ರನೊ ಎಂಬುದು ಅಸ್ಪಷ್ಟ. ಕೆಲವು ಸ್ವರವಚನಕಾರರು ತಮ್ಮ ವಚನಗಳಲ್ಲಿ ಧಾರ್ಮಿಕ ಆಧ್ಯಾತ್ಮಿಕ ಅಭಿವ್ಯಕ್ತಿಯ ಜೊತೆಯಲ್ಲಿಯೆ ಕ್ವಚಿತ್ತಾಗಿಯಾದರೂ ವ್ಯಕ್ತಿಗಳ ನ್ಯೂನತೆಯುತ್ತ ಗಮನ ಸೆಳೆದು ನೈತಿಕವಹೌಲ್ಯವನ್ನು ಎತ್ತಿಹಿಡಿಯಲು ಯತ್ನಿಸಿದ್ದಾರೆ. ಶಾಂತಮಲ್ಲ ಅಂಕಿತದ ಹಾಡಿನಲ್ಲಿ ಅಯೋಗ್ಯರಿಗೆ ಉಪಕಾರ ಮಾಡಬಾರದೆಂಬುದನ್ನು ಹಲವು ದೃಷ್ಟಾಂತಗಳ ಮೂಲಕ ಸ್ಪಷ್ಟಪಡಿಸಿದೆ. ಪಾಂಡವರು ಕೌರವರಿಗೆ, ಬ್ರಾಹ್ಮಣರು ಗೌತಮಮುನಿಗೆ, ಕಾರ್ತವೀರ್ಯನು ಜಮದಗ್ನಿಗೆ, ಕೌಶಿಕನು ಹರಿಶ್ಚಂದ್ರನಿಗೆ, ವಿಷ್ಣು ಬಲಿಚಕ್ರವರ್ತಿಗೆ, ರಾವಣ ಸೀತೆಗೆ ಕೇಡುಂಟು ಮಾಡಿದುದನ್ನು ವಂಚಿಸಿದುದನ್ನು ವಿವರಿಸುತ್ತಲೆ ಓದುಗರ ಮನದಲ್ಲಿ ಪೂರ್ವದ ಹಲವು ಪೌರಾಣಿಕ ಘಟನೆಗಳನ್ನು ನೆನಪಿಸಲಾಗಿದೆ. ಮಾತಿನೊಳಗೊಂದು ಮನದೊಳಗೊಂದು ಎಣಿಸುವ ನೀತಿಬಾಹಿರರಿಂದ ದೂರವಿರಬೇಕೆಂಬ ಎಚ್ಚರಿಕೆಯ ನುಡಿಯೂ ಇದೆ. ಹೀಗೆ ಸ್ವರವಚನಕಾರರು ಸಮಾಜಕ್ಕೊಂದು ನೀತಿ ಸಂಹಿತೆ ರೂಪಿಸಿದಂತೆ ಕಂಡುಬರುತ್ತದೆ. ಚೆನ್ನಸೋಮೇಶ್ವರ ಅಂಕಿತದ ಹಾಡಿನಲ್ಲಿ ಲಿಂಗಕ್ಕೆ ಅರ್ಪಿಸುವ ಅಷ್ಟವಿಧಾರ್ಚನೆಯ ವಿವರಗಳಿವೆ (೧೨೪).

ಮೆಡ್ಲೇರಿ ಶಿವಲಿಂಗನ ಅಂಕಿತ ಇಷ್ಟಲಿಂಗ. ಈತ ಇದೇ ಅಂಕಿತದಲ್ಲಿ ಇಷ್ಟ ಲಿಂಗೇಶ್ವರ ಶತಕ, ವೀರಭದ್ರ ತಾರಾವಳಿ ಹಾಗೂ ಶಿವಾಮೃತಲೀಲೆ ಎಂಬ ಕೃತಿಗಳನ್ನು ರಚಿಸಿದ್ದಾನೆ. ಈ ಅಂಕಿತವನ್ನು ಬಳಸದೆಯೆ ಪ್ರಸ್ತುತ ಸಂಪುಟದ ೧೨೫, ೧೨೬, ೧೨೭ನೆಯ ಹಾಡುಗಳನ್ನು ಬರೆದಿರುವುದುಂಟು. ಈತನ ಹಾಡುಗಳು ಗುಣ ಮತ್ತು ಗಾತ್ರ ಎರಡೂ ದೃಷ್ಟಿಯಿಂದಲೂ ಈ ಸಂಪುಟದಲ್ಲಿ ಅಧಿಕ್ಯತೆ ಪಡೆದಿವೆ. ಇವುಗಳಲ್ಲಿ ಪ್ರಕಟಗೊಂಡ ಚಾರಿತ್ರಿಕ ಅಂಶಗಳ ಕಾರಣವಾಗಿ ಮಹತ್ವದ್ದೆನಿಸಿವೆ. ಮೆಡ್ಲೇರಿ ಶಿವಲಿಂಗನು ಹೆಸರೇ ಸೂಚಿಸುವಂತೆ ಮೆಡ್ಲೇರಿಯ ಹಿರಿಯ ಮಠಕ್ಕೆ ಸೇರಿದವನು. ಶಿವಾಮೃತಲೀಲೆಯಲ್ಲಿ ಬರುವ

ಸಾಧಾರಣ ಸಂವತ್ಸರ ಮಾಸದ
ಆದಿಶ್ರಾವಣ ಶುದ್ಧ ದಶಮಿಲಿ
ಭೇದಿಸಿಯೆ ಶಿವಾಮೃತಲೀಲೆಯ ಪೊಳೆಯು ನಾಟಿದುದು

ಎಂಬ ಪದ್ಯಭಾಗದಿಂದ ಕವಿಚರಿತೆಕಾರರು ಈತನ ಕಾಲವನ್ನು ಕ್ರಿ.ಶ. ೧೫೫೦ ಎಂದು ನಿರ್ಧರಿಸಿದ್ದರು. ಈತನ ಹಾಡುಗಳಿರುವ ಕನ್ನಡ ಅಧ್ಯಯನ ಸಂಸ್ಥೆಯ ಕೆ ೧೫೭೮ ಹಸ್ತ ಪ್ರತಿಯ ಆರಂಭದಲ್ಲಿ ದೊರೆಯುವ "ಈ ಸ್ವರವಚನ ಮೆಡ್ಲೇರಿ ಕಬ್ಬಿನ ಕಂತೆಯಿಗೆಯ ಹಿರೇಮಠದ ಶಿವಲಿಂಗ ದೇವರು ನಿರೂಪಿಸಿದ ಕುಮಾರ ಚೆನ್ನಬಸವೇಶ್ವರನ ಮೋಹ ದಿಂದ ಆದಂಥ ಶಿವಸ್ತುತಿಗಳ ಬರವುದಕ್ಕೆ ಶುಭಮಸ್ತು" ಎಂಬ ಭಾಗವನ್ನು ಕವಿಚರಿತೆ ಕಾರರು ನಮೂದಿಸಿರುವ ಕಾಲಕ್ಕೆ ಪೂರಕವಾಗಿ ಗ್ರಹಿಸಲಾಗಿತ್ತು. ಈ ಹಿನ್ನೆಲೆಯಲ್ಲಿ ಇಲ್ಲಿ ಉಕ್ತನಾದ ಕುಮಾರ ಚೆನ್ನಬಸವನನ್ನು ಪುರಾತನರ ಚರಿತೆಯ ಕರ್ತೃ ಕುಮಾರ ಚೆನ್ನಬಸವ ಎಂದು ತಿಳಿಯಲಾಗಿತ್ತು. ಈಗ ಶಿವಲಿಂಗನ ೨೧ನೆಯ ಹಾಡಿನಲ್ಲಿ ಬರುವ "ಮೆಡ್ಲೇರಿ ಮಠದ ಚೆನ್ನಬಸವಾಗಿ ಈಶ ನಡುನಿಡಿನಯನ ಪೂಜಿಸಲಾಗಿ" ಎಂಬ ಮಾತಿ ನಿಂದ ಇಲ್ಲಿ ಹೆಸರಿಸಿರುವ ಚೆನ್ನಬಸವನು ರಾಚೋಟಿ ವೀರನಿರಬೇಕೆಂಬ ಸೂಚನೆ ದೊರ ಯುತ್ತದೆ. ಈಗಾಗಲೆ ಹೇಳಿದಂತೆ ಶಿವಲಿಂಗನ ಹಾಡುಗಳಲ್ಲಿ ಕ್ರಿ.ಶ. ೧೭೨೦ರವರೆಗಿನ ಅನೇಕ ಐತಿಹಾಸಿಕ ಸಂಗತಿಗಳು ಲಭ್ಯವಾಗುವುದರಿಂದ ಈತನ ಕಾಲ ಕ್ರಿ.ಶ. ೧೭೨೦ರಿಂದ ಮುಂದಕ್ಕೆ ಅಗತ್ಯವಾಗಿ ಹೋಗಬೇಕಾಗುತ್ತದೆ. ಸದ್ಯದಲ್ಲಿ ಈತ ಸು. ೧೭೨೦ರಲ್ಲಿ ಜೀವಿಸಿದ್ದನೆಂದು ಇಟ್ಟುಕೊಳ್ಳಬಹುದು.

ಶಿವಲಿಂಗನು ತನ್ನ ಹಾಡುಗಳನ್ನು ಮುಗಳಿಪುರದ ಮಠದ ರುದ್ರನಿಗೆ ಹೇಳಿದಂತೆ ತೋರುತ್ತದೆ—

ಕ್ಷಿತಿಯೊಳಧಿಕ ಜಂಬೂದ್ವೀಪದೊಳಗೆ ಕೈಲಾಸದಿಂದ
ಪ್ರತಿಮ ಮೆಡ್ಲೇರಿ ಹಿರಿಯಮಠದ ಶಿವಲಿಂಗಾ
ಹುತನಯನ ಕರುಣದಿಂದ ಚರಿತ ಮುಗುಳಿ ಪುರದ
ಮಠದ ರುದ್ರಗೊರೆದು ಕರದಿಷ್ಟಲಿಂಗ ಪೇಳಿದನು (೧೫೦)

ಇಲ್ಲಿ ಉಲ್ಲೇಖಿಸಿರುವ ಮುಗಳಿಪುರವು ಚಿಕ್ಕಮಗಳೂರು ಇರಬಹುದೆ ? ಶಿವಲಿಂಗ ತನ್ನ ಜೀವಿತದ ಅವಧಿಯಲ್ಲಿ ಲೋಕಸಂಚಾರವನ್ನು ಚೆನ್ನಾಗಿಯೇ ಮಾಡಿದ್ದಾನೆ. ಕೊಡೆಯ ವೀರಭದ್ರ, ಹಂಸಭಾವಿಯ ಬಸವ, ಜಂಬೂರ ವೀರಭದ್ರ, ನಂದಿಪುರದ ಬಸವ, ಮುಗುಳವಳ್ಳಿ, ಕಲ್ಲೇಶ್ವರ, ಕಣಸೋಗೆಯ ಬಸವ, ಕೆಳದಿಯ ವೀರಭದ್ರ, ಇಕ್ಕೇರಿಯ ಅಘೋರೇಶ್ವರ, ರಾಚೋಟಿ ವೀರಭದ್ರ ಇವೇ ಮೊದಲಾದ ದೇವತೆಗಳನ್ನು ದರ್ಶಿಸಿರುವುದಲ್ಲದೆ ಇವುಗಳನ್ನು ಕುರಿತು ಒಂದೊಂದು ಹಾಡನ್ನು ರಚಿಸಿದ್ದಾನೆ. ಈತ ವೀರಭದ್ರ ಕ್ಷೇತ್ರಗಳಿಗೆ ಹೆಚ್ಚಾಗಿ ಭೇಟಿ ನೀಡಿರುವುದನ್ನು ಇಲ್ಲಿ ಗಮನಿಸಬಹುದು.

ಮುರಿಗಾ ಸಂಪ್ರದಾಯದ ಪೀಠಾಧಿಪತಿಗಳೂ ಕವಿಗಳೂ ಆಗಿದ್ದ ಮುರಿಗಾ ಶಾಂತವೀರ ಮತ್ತು ಇಮ್ಮಡಿ ಗುರುಸಿದ್ಧರ ಬಗೆಗೆ ಮೆಡ್ಲೇರಿ ಶಿವಲಿಂಗನು ಅಭಿಮಾನದ ಮಹಾಪೂರವನ್ನೆ ಹರಿಸಿದ್ದಾನೆ. ಚಿತ್ರದುರ್ಗದ ಬರಮಭೂಪನು ಮುರಿಗಿ ರುದ್ರ ಅಂದರೆ ಶಾಂತವೀರನಿಗೆ ಆದರಿಸಿದುದನ್ನೂ (೧೨೮) ಮತ್ತು ಅವನು ಅಂತ್ಯವಾದ ಘಟನೆಯನ್ನೂ (೧೩೪) ದಾಖಲಿಸಿದ್ದಾನೆ. ಶಾಂತವೀರನು ಕಾಲವಾದಾಗ "ಇನಿಯಳೆ ನೀನು ಹೋಗಿ ಕರೆತಾರೆಯೆನ್ನ ತನುಮನವನೆಲ್ಲ ಒಲಿದು ನಲಿದು ಪೇಳ್ವನ" ಎಂದು ಪರಿತಪಿಸುತ್ತಾನೆ. ಅಂತೆಯೆ "ಮೂಜಗಕಧಿಕನು ಮುರಿಗಿ ರಾಜನು ತಾನು ಮಾಯವಾಗಿಯೆ ಪೋದರ್ು" (೧೩೭) ಎಂಬ ಸನ್ನಿವೇಶದ ವಿಷಾದವನ್ನು ಹಂಚಿಕೊಳ್ಳುವ ಸಂದರ್ಭದಲ್ಲಿ ಶಾಂತವೀರ ಎಷ್ಟು ದೊಡ್ಡ ಸಮುದಾಯಕ್ಕೆ ಗುರುವಾಗಿ ಪೂಜನೀಯನಾಗಿದ್ದನೆಂಬುದನ್ನು ವರ್ಣಿಸಿದ್ದಾನೆ.

ಶಾಂತವೀರನ ಶಿಷ್ಯ ಇಮ್ಮಡಿ ಗುರುಸಿದ್ಧನನ್ನು ಕಾರಣಿಕಪುರುಷನೆಂಬಂತೆ ಹಾಡುಗಳಲ್ಲಿ ಚಿತ್ರಿಸಲಾಗಿದೆ. ಈತನನ್ನು ಹಿರಿಯ ಅಯ್ಯನೆಂದು ಕರೆದು ಶಿವನೊಡನೆ ಸಮೀಕರಿಸಲು ಯತ್ನಿಸಿರುವುದನ್ನೂ ಕಾಣಬಹುದಾಗಿದೆ (೧೩೪). ಈಶ್ವರನಿಗೆ ಸಂಬಂಧಿಸಿದ ಅರ್ಧನಾರೀಶ್ವರ ಕಲ್ಪನೆ, ತ್ರಿಪುರ ಸಂಹಾರ, ಸಮುದ್ರಮಥನ ಮೊದಲಾದ ಲೀಲೆಗಳನ್ನು ಶಿವನ ಅಂಶವೆಂದು ಭಾವಿಸುವ ಗುರುಸಿದ್ಧನಿಗೂ ಅನ್ವಯಿಸಲಾಗಿದೆ. ಹೀಗೆ ದೈವಾಂಶಸಂಭೂತನೆಂಬಂತೆ ಚಿತ್ರಿಸುವ ವೇಳೆಯಲ್ಲಿಯೆ ನಿರ್ವಾಣೇಂದ್ರನಿಗೆ ಗುರುಸಿದ್ಧನು ಮೋಕ್ಷಪದವಿಯನ್ನು ಕರುಣಿಸಿದನೆಂದು ಹೇಳಿ ಆ ಸಂದರ್ಭಕ್ಕೆ ಮರ್ತ್ಯದ ಸ್ಪರ್ಶವನ್ನು ಕೊಡಲು ಕವಿ ಮರೆತಿಲ್ಲ (೧೩೦). ಗುರುಸಿದ್ಧನ ಬದುಕಿನ ಐತಿಹಾಸಿಕ ಘಟನೆಗಳನ್ನು ಬಿಂಬಿಸುವ ಹಾಡಿನಲ್ಲಿ (೧೬೬) ಗುರುಸಿದ್ಧನಿಗೂ ಮದಕರಿ ನಾಯಕನಿಗೂ ಮನಸ್ತಾಪವಿದ್ದುದರ ಸೂಚನೆಯಿದೆ. ಈತನ ಭಕ್ತಿಯನ್ನು ಜರೆದು ಗುರುಸಿದ್ಧನು ಚಿತ್ರದುರ್ಗದಿಂದ ಸೋದೆಗೆ ತೆರಳಿದ್ದು, ಅಲ್ಲಿ ಬಸವಲಿಂಗರಾಜನ ಆಶ್ರಯದಲ್ಲಿ ನಿಲ್ಲದೆ ಬೀಳಿಗಿಗೆ ಹೋಗಿ ಮುಂದೆ ಸಾಗರಕ್ಕೆ ಪಯಣ ಬೆಳೆಸಿದ ಸಂಗತಿಗಳು ಹಾಡಿನಲ್ಲಿ ಎಡೆಪಡೆದಿವೆ. ಸಾಗರದಲ್ಲಿ ಸೋಮಶೇಖರ ನಾಯಕನ ಮಂತ್ರಿಯಾಗಿದ್ದ ನಿರ್ವಾಣೇಂದ್ರನಿಗೆ ಒಲಿದು ಅಲ್ಲಿ ಕೆಲವು ಕಾಲ ನೆಲಸಿದಂತೆ ತೋರುತ್ತದೆ—

ನಾಕುದಿಕ್ಕಿನ ಅರಸುಗಳು ಬಿನ್ನಹಕ್ಕೆ ಕಳುಹೆ
ಸಾಕು ಎಂಬುತ ಧಿಕ್ಕರಿಸಿ
ಬೇಕಾದ ಭಕ್ತ ನಿರ್ವಾಣೇಂದ್ರನ ಭಕ್ತಿಗೊಲಿದು
ಏಕವಾಗಿಯೆ ಬೆರೆದುದ ನೋಡೆಯಕ್ಕ

ತನಗೆ ಮೃತ್ಯು ಸಮೀಪಿಸಿದುದನು ಅರಿತ ಗುರುಸಿದ್ಧನು ಗಣರನ್ನು ನೋಡುತ್ತ "ಕಂದರ್ಪಗೊರಳನ ದಯವು ಸಂದಿತು" ಎಂದು ಹೇಳಿ ಆನಂದಪುರದಲ್ಲಿ ಪ್ರಾಣನೀಗಿದನು. ಗುರುಸಿದ್ಧನು ಜಗವ ಕೈಬಿಟ್ಟನೆಂಬುದನ್ನು ಕೇಳಿ ನಿರ್ವಾಣೇಂದ್ರನು ಗುರುದರ್ಶನಕ್ಕೆ ಹೋಗಿ ಕಂಬನಿ ಮಿಡಿಯುತ್ತಾನೆ. ಈಗಲೂ ಆನಂದಪುರದಲ್ಲಿ ಇಮ್ಮಡಿ ಗುರುಸಿದ್ಧನ ಸಮಾಧಿ ಇರುವುದು ಶಿವಲಿಂಗನ ಹಾಡಿನ ಯಥಾರ್ಥತೆಯನ್ನು ಸೂಚಿಸುತ್ತದೆ.

ಐತಿಹಾಸಿಕದೃಷ್ಟಿಯಿಂದ ಅಪೂರ್ವವೆನಿಸಿರುವ ಶಿವಲಿಂಗನ ಹಾಡಿನಲ್ಲಿ (೧೬೩) ಉಕ್ತನಾದ ಸೋದೆಯ ಬಸವಲಿಂಗರಾಜನು ಸೋದೆಯ ಸದಾಶಿವರಾಜನ ಮಗನಿರಬೇಕು. ಇಮ್ಮಡಿ ಗುರುಸಿದ್ಧನ ಶಿವರಹಸ್ಯದಲ್ಲಿ ಬರುವ "ಸುರುಚಿರ ಸ್ವಾದಾಪುರಾಧಿಪವರ ಸದಾಶಿವರಾಜ ತನುಭವನರಿಭಯಂಕರ ಬಸವಲಿಂಗನೃಪಾಲ" ಎಂಬ ಮಾತು ಈತನನ್ನೆ ಕುರಿತದ್ದಾಗಿದೆ. ಶಿವಲಿಂಗ ಸೂಚಿಸಿರುವ ಗುತ್ತಲ ಪ್ರಭು ಆದಿಲಿಂಗದೇಸಾಯಿ ಹನುಮ ಭೂಪ ಇವರುಗಳು ಕ್ರಿ.ಶ. ೧೭೯ರ ಅವಧಿಯಲ್ಲಿದ್ದ ಸ್ಥಳೀಯ ಪ್ರಭುಗಳು.

ಕೆಳದಿಯ ಅರಸರ ಆಶ್ರಯದಲ್ಲಿದ್ದ ಶಿವಲಿಂಗನು ಕೆಲವು ಕಾಲವಾದರೂ ಅವರಲ್ಲಿ ತಂಗಿದ್ದು ಅಲ್ಲಿನ ಆಗುಹೋಗುಗಳನ್ನು ಪರಾಂಬರಿಸಿರಬೇಕು. ಅಲ್ಲಿ ನೆಲಸಿದ್ದ ಕಾರಣದಿಂದಾಗಿಯೆ ಮುರಿಗಾಶಾಂತವೀರ, ಇಮ್ಮಡಿ ಗುರುಸಿದ್ಧ ಇವರ ಬಗೆಗೆ ಕೆಳದಿ ಅರಸರ ಬಗೆಗೆ ಹಾಡುಗಳನ್ನು ರಚಿಸಲು ಸಾಧ್ಯವಾಯಿತು. ಈತ ಬಿದನೂರಿನ ಕೆಲವು ಸಂಗತಿಯನ್ನು ಹಾಡುಗಳಲ್ಲಿ ದಾಖಲಿಸಿದ್ದಾನೆ (೧೬೫). "ಮೌನೀಂದ್ರ ಗರ್ಭಾಬ್ಧಿ ಚಂದ್ರಮ ನಿರ್ವಾಣೇಂದ್ರ" ಎಂಬ ಉಲ್ಲೇಖದಿಂದ ನಿರ್ವಾಣೇಂದ್ರನ ತಂದೆ ಯಾರೆಂಬುದು ವ್ಯಕ್ತವಾಗುತ್ತದೆ. ಈ ಹಾಡಿನಲ್ಲಿ ಉಲ್ಲೇಖಗೊಂಡಿರುವ ಮೌನೀಂದ್ರನು ವೀರಶೈವಾಚಾರ ಕೌಸ್ತುಭವನ್ನು ಬರೆದ ಮೌನಪ್ಪ ಪಂಡಿತನಿರಬೇಕು. ಕೆಳದಿಯ ಅರಸ ಸೋಮಶೇಖರ ನಾಯಕನ (ಕ್ರಿ.ಶ. ೧೭೧೫–೧೭೪೦) ಮಂತ್ರಿ ನಿರ್ವಾಣೇಂದ್ರನ ಬಗೆಗೆ ಶಿವಲಿಂಗನಿಗೆ ಅಪಾರ ಗೌರವ. "ಸೋಮಶೇಖರ ಸತಿ ಪಿತ ನಿರ್ವಾಣೇಂದ್ರನೆ ನೀನು" (೨೦೫) ಎಂಬ ಮಾತಿನಿಂದ ನಿರ್ವಾಣೇಂದ್ರನು ರಾಜನಿಗೆ ಮಾವನೂ ಆಗಿದ್ದ ಸಂಗತಿ ಶ್ರುತಪಡುತ್ತದೆ. ಈತ ಸ್ವತಃ ಒಬ್ಬ ವಿದ್ವಾಂಸನಾಗಿದ್ದು ನೀಲಕಂಠಶಿವಾಚಾರ್ಯರಿಂದ ರಚಿತವಾದ ಕ್ರಿಯಾಸಾರ ಗ್ರಂಥಕ್ಕೆ ವ್ಯಾಖ್ಯಾನವನ್ನೂ ನಿಜಗುಣರ ವಿವೇಕಚಿಂತಾಮಣಿಯನ್ನು ಸಂಸ್ಕೃತಕ್ಕೆ ಭಾಷಾಂತರಿಸಿದ್ದನೆಂದು ತಿಳಿದು ಬರುತ್ತದೆ. ಈತ ತರಳ ಬಸವಲಿಂಗಪ್ಪನಿಗೆ ಬುದ್ಧಿ ವಿವೇಕ ಕಲಿಸಿದ, ರಾಚಪ್ಪನ

ಮಗನನ್ನು ಸಲಹಿದ ವಿಚಾರಗಳು ಹಾಡಿನಲ್ಲಿ ಉಚಿತವರಿತು ಬಂದಿವೆ. ಕೆಳದಿಯ ಆದಿಬಸವ ನಾಯಕ, ಈತನ ಅರ್ಧಾಂಗಿ ಚೆನ್ನಮ್ಮಾಜಿ, ಪುತ್ರ ಸೋಮಶೇಖರನಾಯಕ ಹಾಗೂ ಈತನ ಪತ್ನಿ ನೀಲಲೋಚನೆ ಇವರ ಕೀರ್ತಿ ನಾಲ್ಕು ದಿಕ್ಕಿಗೂ ಹರಡಿದ್ದುದನ್ನು ೨೧೧ನೆಯ ಹಾಡಿನಲ್ಲಿ ಅರುಹಲಾಗಿದೆ. ಈ ನೀಲಲೋಚನೆಯ ನಿರ್ವಾಣೇಂದ್ರನ ಮಗಳಿರಬೇಕು. ಭಕ್ತಿ ಸಾಹಸ ಔದಾರ್ಯದ ಖನಿಯಾಗಿದ್ದ ನಿರ್ವಾಣೇಂದ್ರನ ವ್ಯಕ್ತಿತ್ವ ವನ್ನು ಕವಿ ಸೊಗಸಾಗಿ ಕಟ್ಟಿಕೊಟ್ಟಿದ್ದಾನೆ. ಹೀಗೆ ಶಿವಲಿಂಗನ ಹಾಡುಗಳು ಐತಿಹಾಸಿಕ ಆಕರಗಳಾಗಿ ನಿಲ್ಲುತ್ತವೆ.

ಶಿವಲಿಂಗನ ಧಾರ್ಮಿಕ ಹಾಡುಗಳಲ್ಲಿ ಪೂರ್ವಕಥೆಗಳನ್ನು ದೃಷ್ಟಾಂತವಾಗಿ ಬಳಸಿಕೊಂಡಿರುವುದು ಕಂಡುಬರುತ್ತದೆ. ವಿಧಿಯ ಬಗೆಗಿನ ನಂಬಿಕೆ ಜನಮನದಲ್ಲಿ ಆಳವಾಗಿ ಬೇರೂರಿರುವಂಥದ್ದು—

ಹರಿಣಾಪಿ ಹರೇಣಾಪಿ ಬ್ರಹ್ಮಣಾಪಿ ಸುರೈರಪಿ
ಲಲಾಟಲಿಖಿತೌ ರೇಖಾ ಪರಿಮಷ್ಟಂ ನಶಕ್ಯತೀ

ಹರಿಹರ ಬ್ರಹ್ಮಾದಿ ದೇವತೆಗಳಿಂದಲೂ ಹಣೆಯಲ್ಲಿ ಬರೆದ ಬರಹವನ್ನು ಅಳಿಸುವುದು ಅಶಕ್ಯ ಎಂಬ ಮಾತನ್ನು ಸುಭಾಷಿತಕಾರರೂ ಹೇಳಿದ್ದಾರೆ. "ಇನ್ನು ಚಿಂತಿಸಲೇಕೆ ಹರ ಬರೆದ ಬರಹವನ್ನು ಮೀರಲಳವೆ" (೧೪೩) ಎಂಬ ಶಿವಲಿಂಗನ ಹಾಡಿನಲ್ಲಿಯೂ ವಿಧಿಯ ಬಗೆಗಿನ ವಿಶ್ವಾಸ ಪ್ರಬಲವಾಗಿದೆ. ನಾಗಾರ್ಜುನ ಬಾಣಾಸುರ ಶೂದ್ರಕ ವಿಕ್ರಮಾಂಕ ಮೊದಲಾದ ಪರಾಕ್ರಮಿಗಳೂ ರೇಣುಕಾದೇವಿಯಂಥ ಸಾಧ್ವೀಮಣಿಗಳೂ ಹರಬರಹದ ಮುಂದೆ ತಲೆಬಾಗಬೇಕಾಯಿತೆಂಬುದನ್ನು ನಿದರ್ಶನಸಹಿತ ತಿಳಿಸಿರುವುದನ್ನು ನೋಡಿದಾಗ ಶಿವಲಿಂಗನು ಪ್ರಾಚೀನ ಕಾವ್ಯ ಪುರಾಣಗಳನ್ನು ಆಳವಾಗಿ ಅಭ್ಯಾಸ ಮಾಡಿದ್ದನೆಂಬುದು ವೇದ್ಯವಾಗುತ್ತದೆ. ಹರಿದಾಸರು ತಮ್ಮ ಕೀರ್ತನೆಗಳಲ್ಲಿ ಹರಿ ಸರ್ವೋತ್ತಮತ್ವ ಮತ್ತು ಮಧ್ವಾಚಾರ್ಯರ ಮಹಿಮೆಯನ್ನು ಪ್ರತಿಪಾದಿಸಿದರೆ ಸ್ವರ ವಚನಕಾರರಲ್ಲಿ ಹರಸರ್ವೋತ್ತಮತ್ವ ಮತ್ತು ಬಸವಾದಿ ಶರಣರ ಮಹಿಮಾವರ್ಣನೆಗಳು ಕಂಡುಬರುತ್ತವೆ. ಇಲ್ಲಿ ಹರಿ ತನ್ನ ಹದಿನಾರುಸಾವಿರ ಹೆಂಡತಿಯರೊಂದಿಗೆ ಬಂದು ಶಿವನ ಶ್ರೀಪಾದವನ್ನು ಒರೆಸುತ್ತಾನೆ (೧೬೦). 'ಶಂಭು ಒಬ್ಬನೆ ಅಧಿಕ' (೧೬೧) ಎಂಬ ಘೋಷಣೆಗಳು ಕೇಳಿಬರುತ್ತವೆ. ಬಸವಣ್ಣನವರ ಪವಾಡಗಳನ್ನು ಶಿವಲಿಂಗ ಮೊದಲಾದವರು ಕೊಂಡಾಡಿದ್ದಾರೆ. (೧೪೬). ಬಸವಪವಾಡದ ಸ್ವರವಚನಗಳೆ ಹುಟ್ಟಿಕೊಂಡಿವೆ (೨೪೨). ಶಿವಲಿಂಗನ ಕಾಲಕ್ಕಾಗಲೆ ವೀರಶೈವ ಮಠಗಳಲ್ಲಿ ಅನೇಕ ಗುಂಪುಗಳು ತಲೆದೋರಿದ್ದವು. ಇಂಥ ವಿಂಗಡಣೆಗಳಿಗೆ ಅವಕಾಶವೀಯಬಾರದೆಂದು ಶಿವಲಿಂಗನು—

ಅವರ ಬಗೆಯು ಇವರ ಬಗೆಯು ಎನ್ನಬೇಡಿರಿ ಈ
ಭುವನವ ಚರಿಸುವ ಪ್ರಭು ಒಬ್ಬನೆನ್ನಿರೊ

ಎಂದು ವಿಶಾಲ ಮನೋಭಾವ ವ್ಯಕ್ತಪಡಿಸಿದ್ದಾನೆ. ಶರಣಸತಿ ಲಿಂಗಪತಿ ಎಂಬಂತೆ ಹರಿದಾಸರೂ ಕೂಡ ತಮ್ಮನ್ನು ರಾಧೆಯಾಗಿಯೂ ಆರಾಧ್ಯದೈವವಾದ ಕೃಷ್ಣನನ್ನು ಇನಿಯನನ್ನಾಗಿಯೂ ಕಲ್ಪಿಸಿಕೊಂಡು ಹಾಡಿರುವುದುಂಟು. ಇದೇ ಭಾವ ಶಿವಲಿಂಗನ "ನೋಡನೆ ಇಷ್ಟಲಿಂಗೇಶ ನೋಡನೆ ಎನ್ನೊಡಗೂಡನೆ ಸವಿಮಾತಾಡನೆ" ಎಂಬ ಹಾಡಿನಲ್ಲಿ ಬಂದಿದೆ. ಸಮಾಜದ ಶುಚಿತ್ವ ನೈತಿಕತೆಯನ್ನು ಗಟ್ಟಿಗೊಳಿಸುವಂಥ ಅನೇಕ ಹಾಡುಗಳು ಶಿವಲಿಂಗನ ಬತ್ತಳಿಕೆಯಲ್ಲಿಯೂ ಇವೆ.

ಗುರುಸಿದ್ಧ ಎಂಬ ಅಂಕಿತ ಸರ್ಪಭೂಷಣ ಶಿವಯೋಗಿಗಳಿಗೆ ಅನ್ವಯವಾಗುತ್ತದೆ. ಪ್ರಸ್ತುತ ಸಂಪುಟದಲ್ಲಿ ಸೇರಿರುವ ಈ ಅಂಕಿತದ ಬಿಡಿಹಾಡಿನಲ್ಲಿ ಶಿವನನ್ನು "ನಿನ್ನ ನಾನೇನ ಬೇಡಲಿ ದೇವ ಕೊಡಲೆನಗೆ ನಿನ್ನೊಳೇನುಂಟು" ಎಂದು ಪ್ರಾರ್ಥಿಸುವ ಪರಿ ವಿಶಿಷ್ಟವಾಗಿದೆ. ಶಿವನಲ್ಲಿ ಅನ್ನ ಬೇಡೋಣವೆಂದರೆ ವಿಷ. ಬಟ್ಟೆ ಬೇಡೋಣವೆಂದರೆ ಗಜಚರ್ಮ. ಆಭರಣ ಬೇಡುವೆನೆಂದರೆ ಹಾವು ಎಂದು ಒಂದೊಂದಾಗಿ ಶಿವನ ವೇಷಭೂಷಣವನ್ನು ಬಿಡಿಸುತ್ತ ಕಡೆಗೆ ನಿನ್ನ ಭಕ್ತಿಯನ್ನು ಮಾತ್ರ ಕರುಣಿಸು ಎಂಬ ಬೇಡಿಕೆ ಮುಂದೊಡ್ಡುತ್ತಾನೆ ಭಕ್ತ. ಹೀಗೆ ಭಕ್ತಿಯ ಔನ್ನತ್ಯವನ್ನು ಮಾರ್ಮಿಕವಾಗಿ ಚಿತ್ರಿಸಿದೆ (೨೨೯). ಮತ್ತೊಂದು ಹಾಡಿನಲ್ಲಿ ಸಾಧಕನಿಗೆ ಕಾಡುವ ಲೌಕಿಕದ ಅನಂತಬಾಧೆಗಳನ್ನು ಹಾಗೂ ಶಿವಕಾರುಣ್ಯಕ್ಕಾಗಿ ತುಡಿಯುವ ಜೀವದ ಪ್ರಾರ್ಥನೆಯನ್ನು (೨೨೮) ಕಾಣಬಹುದು. ಇಲ್ಲಿ ಬದುಕನ್ನು ಸಂತೆಗೆ ಹೋಲಿಸಿದೆ. ಸಂತೆ ತೀರಿದ ಬಳಿಕ ಬಯಲು ಮಾತ್ರ ಉಳಿಯುವಂತೆ ಸತ್ತಾಗ ಸತಿ ಸುತರಾಗಲಿ ಕೂಡಿಟ್ಟ ಹಣವಾಗಲಿ ಜೊತೆಯಲ್ಲಿ ಬರುವುದಿಲ್ಲ. ಬದುಕು ಅಶಾಶ್ವತ ಎಂದು ಕೆಲವು ಹಾಡುಗಳಲ್ಲಿ ನಿರೂಪಿಸಲಾಗಿದೆ. "ಸಾಸಿವೆಯಷ್ಟು ಸುಖಕ್ಕೆ ಸಾಗರದಷ್ಟು ದುಃಖ ನೋಡಾ" ಎಂಬ ಬಸವಣ್ಣನವರ ವಚನದ ಛಾಯೆ ಇಲ್ಲಿ "ಬಿಂದು ಸುಖಕ್ಕಾಗಿನಿತು ದುಃಖ ನೋಡಾ" ಎಂದು ಪಡಿಮೂಡಿದೆ. ಹೆಣ್ಣು ಮಾಯೆಯಲ್ಲ ಎಂದು ವಚನಕಾರರು ಪ್ರತಿಪಾದಿಸಿದ್ದರೂ ಈ ಬಗೆಗೆ ಸ್ವರವಚನಕಾರರ ದೃಷ್ಟಿ ಸಾಂಪ್ರದಾಯಿಕವಾದುದು. ಗುರುಸಿದ್ಧ ಅಂಕಿತದ ಹಾಡಿನಲ್ಲಿ ಹೆಣ್ಣನ್ನು ರಾಕ್ಷಸಿ ಎಂದು ಕರೆದು ಸ್ತ್ರೀಗರ್ಹಣೆಯನ್ನು ಅತಿಯಾಗಿಯೆ ಮಾಡಲಾಗಿದೆ (೨೩೩). ಇದು ಆ ಕಾಲದ ಸಮಾಜ ಹೆಣ್ಣನ್ನು ಪರಿಭಾವಿಸುತ್ತಿದ್ದ ರೀತಿಯ ಕುರುಹು.

ಶರಣ ಸ್ತುತಿ ಸ್ವರವಚನಕಾರರಿಗೆ ಪ್ರಿಯವಾದುದು. ತಮ್ಮ ಭಕ್ತಿ ನಿಷ್ಠೆ ಸಾಧನೆಯ ಮೂಲಕ ಎತ್ತರಕ್ಕೆ ಏರಿದ ಶರಣರ ಜೀವನ ಯಾವತ್ತೂ ಸ್ಫೂರ್ತಿದಾಯಕ. ಇಂಥ ಶರಣರನ್ನು ಅಡಿಗಡಿಗೆ ಸ್ಮೃತಿಪಟಲದ ಮೇಲೆ ತಂದುಕೊಳ್ಳುತ್ತ ಓದುಗರ ಭಾವಕೋಶದಲ್ಲಿ ಅವರ ಸ್ಮರಣೆಯನ್ನು ಶಾಶ್ವತಗೊಳಿಸುವ ಉದ್ದೇಶದಿಂದ ತಮ್ಮ

ಹಾಡುಗಳಲ್ಲಿ ಶರಣರ ಕಥೆಯನ್ನು ಸಂಕ್ಷಿಪ್ತವಾಗಿ ನಿರೂಪಿಸಿದ್ದಾರೆ. ಇದಕ್ಕೆ ಒಳ್ಳೆಯ ಉದಾಹರಣೆ ಈ ಸಂಪುಟದ ೨೪೨ನೆಯ ಹಾಡು. ಚನ್ನಬಸವಣ್ಣನ ಜೋಗುಳ ಪದದ ಕರ್ತೃ ತುರುವೆಗುಡ್ಡದ ಶಿವಲಿಂಗ. ಇದರಲ್ಲಿ ೩೦ ನುಡಿಗಳಿವೆ. ವೀರಶೈವಯೋಗ ವನ್ನು ನಿರೂಪಿಸುವ ಆಕೌಗಳ ಹಾಡಿನ ಕರ್ತೃ ಅನಾಮಧೇಯ. ಮಂಗಳಾರತಿ ಹಾಡು ಗಳು ಬಹುಮಟ್ಟಿಗೆ ಸಿದ್ದಲಿಂಗನಿಗೆ ಸಂಬಂಧಿಸಿರುವುದು ಗಮನಿಸಬೇಕಾದ ಅಂಶ.

ಸಮಾಜದ ಅಶಿಕ್ಷಿತವರ್ಗದಿಂದ ಬಂದ ಸ್ವರವಚನಕಾರರು ಜನಸಾಮಾನ್ಯರನ್ನು ದೃಷ್ಟಿಯಲ್ಲಿಟ್ಟುಕೊಂಡು ಹಾಡುಗಳನ್ನು ರಚಿಸಿದರು. ಈ ಕಾರಣವಾಗಿ ಅವರ ಧಾರ್ಮಿಕ ಅಭಿವ್ಯಕ್ತಿಯ ಸಂದರ್ಭದಲ್ಲಿಯೂ ಸಮಕಾಲೀನ ಗ್ರಾಮೀಣ ಸಮಾಜದ ಅನುಭವಗಳು ಹಾಡುಗಳಲ್ಲಿ ನುಸುಳಿ ಬಂದಿರುವುದು ಆಶ್ಚರ್ಯವೇನೂ ಅಲ್ಲ. ಚಂದ ಮಾಮನ ಹಾಡು ತುಂಬಿ ಹಾಡುಗಳಲ್ಲಿ ಜನಪದ ಭಾಷೆಯನ್ನೂ ಆ ಗೀತೆಗಳ ಮಟ್ಟನ್ನೂ ಅನುಸರಿಸಿದ್ದರೆ ಇತರಡೆಗಳಲ್ಲಿ ಜನಪದರ ರೀತಿ ರಿವಾಜು ನಂಬಿಕೆ ಆಹಾರ ಇತ್ಯಾದಿ ಹಲವು ಹತ್ತು ಸಂಗತಿಗಳು ಉಚಿತವರಿತು ಮಿಂಚಿರುವುದನ್ನು ನಿದರ್ಶನಗಳ ಮೂಲಕ ನೋಡಬಹುದು.

ನರಿಯ ಕೂಗು ಅಶುಭ ಸೂಚಕ ಎಂಬ ನಂಬಿಕೆ ಇಂದಿಗೂ ಜನಪದರಲ್ಲಿದೆ. ಇದನ್ನು ಗುರುಶಾಂತ ಅಂಕಿತದ

ಒಳ್ಳು ಕೂಗಿದ ಫಲನು ಬಲ್ಲೆಯಾ ಎಲೆ ಅಕ್ಕ
ಒಳ್ಳಿತಲ್ಲವೆ ತಂಗಿ ಪುರದ ಜನರ್ಗಳಿಗೆ (೩೫)

ಎಂಬ ಹಾಡಿನಲ್ಲಿ ಅಧ್ಯಾತ್ಮದ ಅಭಿವ್ಯಕ್ತಿಗಾಗಿ ಬಳಸಿಕೊಳ್ಳಲಾಗಿದೆ. ಪಟ್ಟಣದ ನೈರುತ್ಯಭಾಗದಲ್ಲಿ ಕೂಗಿದರೆ ಯಾರಿಗೆ ಸಾವು ಸಂಭವಿಸುತ್ತದೆ. ವಾಯುವ್ಯದಲ್ಲಿ ಕೂಗಿದರೆ ಯಾರಿಗೆ ಮರಣ, ಈಶಾನ್ಯದಲ್ಲಿ ಕೂಗಿದರೆ ಯಾರು ಸಾಯುವರು ಎಂಬ ವಿವರಣೆಗಳು ಇಲ್ಲಿ ದೊರೆಯುತ್ತವೆ.

ತೋಂಟದ ಸಿದ್ಧೇಶ್ವರನನ್ನು ಕುರಿತ ಒಂದು ಹಾಡಿನಲ್ಲಿ (೫೦) ಸಮಕಾಲೀನ ಸ್ತ್ರೀಯರು ಧರಿಸುತ್ತಿದ್ದ ರಾಗಟೆ, ಚಾರಿ, ಮುತ್ತಿನಸರ, ಮುತ್ತಿನಬಟ್ಟು, ಬುಗುಡಿ, ಕೊಪ್ಪು, ಓಲೆ, ರಘುಮುಕಿ, ಮೂಗುತಿ, ಮಂಗಳಸೂತ್ರ, ಕಟ್ಟಾಣೆಗುಂಡು, ಮೋಹನ ಮಾಲೆ, ಮುತ್ತಿನಪಾವಡ, ಚೀತಾಕ, ಏಕಾವಳಿಸರ, ಗೋಧಿಮಣಿ, ಸರಿಗೆ, ತೋಳ ಭಾಪುರಿ, ಉಂಗುರ, ವಡ್ಯಾಣ, ಗೆಜ್ಜೆ, ಕಾಲಂದಿಗೆ, ಮಿಂಟಿಗೆ ಮೊದಲಾದ ಆಭರಣಗಳ ಒಂದು ಪಟ್ಟಿಯೇ ಸಿಕ್ಕುತ್ತದೆ.

ಐಹಿಕಭೋಗಗಳ ನಿಸ್ಸಾರತೆಯನ್ನು ನಿರೂಪಿಸುವಾಗ (೪೮) ಕರಸ್ಥಲದ ನಾಗಲಿಂಗನು ಮರಣ ಸಂಬಂಧಿಸಂಪ್ರದಾಯದತ್ತ ಬೆಳಕುಚೆಲ್ಲಿದ್ದಾನೆ—

ಬೆಳ್ಳಿ ಬಂಗಾರವನು ಬಾಯಿಗಳಿಗೆ ಅಕ್ಕಿಯು
ನಿಕ್ಕಿ ಕುಳಿಯೊಳಗಿರಿಸಿ ತಾವೆಲ್ಲರುಂ ಕೂಡಿ
ಒಳ್ಳೆಯವನು ಗುಣರೂಪುಬುದ್ಧಿವಂತನುಯೆಂದು ಹೊಳ್ಳುನುಡಿಗಳ
ನುಡಿವರೊ

ಎಳ್ಳು ಅಕ್ಷತೆ ಹಲವು ಭಕ್ಷ್ಯ ಭೋಜ್ಯಂಗಳನು
ಹಳ್ಳದೊತ್ತಿಗೆ ತಂದು ಕೂಳ ಮುಂದೆಯು ಹಾಕಿ
ಕೊಳ್ಳೆಂದು ಕಾಗೆಗಳ ಕರಕರದು ತಂಡತಂಡದ ಡಳ್ಳುರಿಯೊಳೆ....ಬ

ಈ ಸಂಪ್ರದಾಯಗಳು ಇಂದಿಗೂ ಉಳಿದುಬಂದಿರುವುದನ್ನು ಗಮನಿಸಬಹುದು. ಹರಕೆಗೆಂದು ಕುರಿಬಲಿ ನೀಡುವ ಸಂಪ್ರದಾಯ (೮೭) ತೊಗಲುಬೊಂಬೆ ಆಟದಂಥ ಜನಪದ ಪ್ರದರ್ಶನಾತ್ಮಕ ಕಲೆಯ ಉಲ್ಲೇಖ (೯೨) ಸ್ವರವಚನದಲ್ಲಿ ಕಾಣಿಸಿಕೊಂಡಿದ್ದು ಸಮಕಾಲೀನ ಸಾಂಸ್ಕೃತಿಕ ಸಂಗತಿಗಳತ್ತ ಕ್ಷಕಿರಣ ಬೀರುತ್ತವೆ.

ಮಡ್ಲೇರಿ ಶಿವಲಿಂಗನು ಚಳಿಯನ್ನು ಕೇಂದ್ರವಾಗಿಟ್ಟುಕೊಂಡು ರಚಿಸಿದ ಹಾಡಿನಲ್ಲಿ (೨೧೦) ಸುಟ್ಟಜೋಳ, ಅಕ್ಕಿನುಚ್ಚಿನ ರೊಟ್ಟಿ, ಅಗಸೆಹಿಂಡಿ ತಿನಿಸುಗಳು ಚಳಿಗೆ ಆಪ್ಯಾಯಮಾನವಾಗಿರುವುದನ್ನು ಹೇಳಿದ್ದಾನೆ—

ಕರಲ ಕಟ್ಟಿರೆಯ ಕೆಂಜೋಳ ಬೀಗಿದ ಬೆಳೆ
ಹೊರವಾದ ಹತ್ತೆಂಟು ತೆನೆಯ ತಂದು
ತರೆಯುದ ಕೆಂಡಕೆ ಹದವಿಡಿ ಕಾಸಿಯೆ
ನೆರೆಯೆಂಟ ಮದ್ದು ನೀರಂ ಕುಡಿದಲ್ಲದೆ

ಅಕ್ಕಿನುಚ್ಚಿನ ರೊಟ್ಟಿ ಎರಡು ಸೇರಗಸೆಯಂ
ನಿಕ್ಕಿ ಹಿಂಡಿಯ ಘೃತವ ಗೂಡಿ
ಸಕ್ಕರಿಂದಲಿ ಮುರಿವತ್ತದರೊಳು ರುಭಿಡಿ
ಅಕ್ಕರಿಂದಲಿ ಎಡಬಿಡದೆ ಮೆದ್ದಲ್ಲದೆ

ಎಂಬಲ್ಲಿ ಉತ್ತರ ಕರ್ನಾಟಕದ ಆಹಾರಪದ್ಧತಿಯನ್ನು ಗುರುತಿಸಬಹುದು. ಚೆನ್ನಕವಿ ವಿರಚಿತ ತೋಂಟದ ಸಿದ್ಧಲಿಂಗಯತಿಯ ಸುವ್ವಿಹಾಡಿನಲ್ಲಿ ಹೆಂಗಳೆಯರು ಭತ್ತ ಕುಟ್ಟುವ ಚಿತ್ರ ತುಂಬ ಸಹಜವಾಗಿ ಮೂಡಿಬಂದಿದೆ (೨೨೭). ಚನ್ನಬಸವಣ್ಣನ ಜೋಗುಳ ಪದ (೨೪೫)ದಲ್ಲಿ ಚಿತ್ರಿತವಾಗಿರುವ ಪ್ರಸವ ಸನ್ನಿವೇಶದಲ್ಲಿ—

ಅಕ್ಕಯ್ಯ ಹಿಡಿ ಮೊರವ ಕುಡಗೋಲ ತನ್ನಿ
ಹೊಕ್ಕಳ ಹುರಿಯನ್ನು ಉಡಿಯೋರೆ ಬನ್ನಿ
ಗಕ್ಕನೆ ಕದರು ಬೇವಿನ ಸೊಪ್ಪು ತನ್ನಿ
ಚಿಕ್ಕ ಕಂದಯ್ಯನ ಮೈಯ ತೊಳೆಯೋಣ ಬನ್ನಿ

ಮಗುವನ್ನು ಹುಟ್ಟಿದ ಕೂಡಲೆ ಮೊರದಲ್ಲಿ ಮಲಗಿಸುವುದು, ಕುಡುಗೋಲಿನಿಂದ ಹೊಕ್ಕುಳಬಳ್ಳಿ ಕತ್ತರಿಸುವುದು, ಔಷಧಯುಕ್ತ ಗುಣವುಳ್ಳ ಬೇವಿನ ಸೊಪ್ಪಿನಿಂದ ಮೈ ತೊಳೆಯುವುದು ಇವೆಲ್ಲ ದೈನಂದಿನ ಬದುಕಿನಲ್ಲಿ ರೂಢಿಯಲ್ಲಿರುವಂಥವೆ ಆಗಿವೆ. ಹೀಗೆ ಸ್ವರವಚನಗಳನ್ನು ಜಾನಪದೀಯ ಅಧ್ಯಯನಕ್ಕೂ ಒಳಪಡಿಸಬಹುದಾಗಿದೆ. ಒಟ್ಟಿನಲ್ಲಿ ಈ ಸಂಪುಟದ ಸ್ವರವಚನಗಳು ವೈವಿಧ್ಯಮವಾಗಿವೆ. ತ್ರಿಪದಿ ಚೌಪದಿ ಷಟ್ಪದಿ ಅಕ್ಕರಿಕೆ ಏಳೆ ಮೊದಲಾದ ಹಲವು ವಿಧದ ಛಂದಸ್ಸು ಇಲ್ಲಿ ಬಳಕೆಯಾಗಿದೆ. ಗಣಪಲ್ಲಟ, ಛಂದೋಭಂಗ, ಅಂಶಗಳ ನ್ಯೂನತೆ ಅಲ್ಲಲ್ಲಿ ನಡೆದಿವೆ, ಪ್ರಾಸವನ್ನು ಉಳಿಸಿಕೊಂಡಿದ್ದರೂ ಕೆಲವೆಡೆ ಭಂಗವಾಗಿರುವುದೂ ಉಂಟು. ಹಾಡುಗಬ್ಬವಾಗಿರುವುದರಿಂದ ಛಂದಸ್ಸಿನಲ್ಲಿ ಶಿಥಿಲತೆಯನ್ನು ಗುರುತಿಸಬಹುದು.

ಸ್ವರವಚನಗಳ ಶೈಲಿ ಸರಳವಾಗಿದೆ. ಸುಲಭಗ್ರಾಹ್ಯವಾಗಿದೆ. ಉಪಮಾಲಂಕಾರ ರೂಪಕಾಲಂಕಾರಗಳು ತೀರ ವಿರಳವಾಗಿ ಗೋಚರಿಸುತ್ತವೆ. ಈ ಸಂಪುಟದ ಕೆಲವು ಸ್ವರ ವಚನಕಾರರು ಸಮರ್ಥವಾದ ಕಾವ್ಯಗಳನ್ನು ರಚಿಸಿದವರಾಗಿದ್ದು ಆ ಕ್ಷೇತ್ರದಲ್ಲಿ ಸಾಫಲ್ಯ ಪಡೆದಿದ್ದರೂ ಅವರ ಸ್ವರವಚನಗಳು ಕಾವ್ಯದ ಎದುರಿನಲ್ಲಿ ನೀರಸವಾಗಿ ಕಂಡುಬರುತ್ತವೆ. "ವಚನಗಳು ಆಯಾ ವಚನಕಾರನ ತೀವ್ರಸಂವೇದನೆ, ತುಡಿತ, ಆಲೋಚನಾ ಪ್ರಖರತೆ, ಅನನ್ಯ ವ್ಯಕ್ತಿತ್ವದ ಕುರುಹುಗಳು. ಆ ದೃಷ್ಟಿಯಿಂದ ನೋಡಿದಾಗ ಅವರ ಹೆಸರಿನ ಗೀತಗಳು ಸಾಹಿತ್ಯದ ದೃಷ್ಟಿಯಿಂದ ಮಂಕಾಗಿ ಕಾಣಿಸುತ್ತವೆ"* ಎಂಬ ಮಾತು ತಳ್ಳಿಹಾಕುವಂತಿಲ್ಲದಿದ್ದರೂ ಸ್ವರವಚನಗಳು ತಮ್ಮ ವಸ್ತುವಿನ್ಯಾಸದಿಂದ ಅನುಭಾವ ಸಾಹಿತ್ಯವನ್ನು ನಿಸ್ಸಂದೇಹವಾಗಿಯೂ ಸಮೃದ್ಧಗೊಳಿಸಿವೆ.

**ಗ್ರಂಥಸಂಪಾದನೆ :** ಪ್ರಸ್ತುತ ಸ್ವರವಚನ ಸಂಪುಟದ ಸಂಪಾದನೆಯ ಸಂದರ್ಭದಲ್ಲಿ ಕುವೆಂಪು ಕನ್ನಡ ಅಧ್ಯಯನ ಸಂಸ್ಥೆಯ ಹಸ್ತಪ್ರತಿ ಭಂಡಾರದ ಹಲವಾರು ಹಸ್ತಪ್ರತಿಗಳನ್ನು ಮೊದಲಿಗೆ ಪರಿಶೀಲಿಸಲಾಯಿತು. ಆ ಪೈಕಿ ಅಪ್ರಕಟಿತ ಸ್ವರವಚನಗಳಿರುವ ಹಸ್ತಪ್ರತಿಗಳನ್ನು ಆಯ್ದುಕೊಂಡು ಪರಿಷ್ಕರಣಕಾರ್ಯದಲ್ಲಿ ಬಳಸಿಕೊಳ್ಳಲಾಯಿತು. ಸಂಪಾದನೆಯಲ್ಲಿ ನೆರವು ಪಡೆದ ತಾಳೆಗರಿಪ್ರತಿಗಳು ಹೀಗಿವೆ–ಕೆ ೧೩೧೩, ಕೆ ೧೬೬೨, ಕೆ ೧೧೨೬. ಕೆ ೧೧೮೨, ಕೆ ೩೫೧, ಕೆ ೪೬೮, ಕೆ ೧೮೦, ಕೆ ೩೩೩, ಕೆ ೧೨೬೬, ಕೆ ೧೩೫೮, ಕೆ ೧೦೦೦. ಹಾಗೆಯೆ ಕಾಗದದ ಹಸ್ತಪ್ರತಿಗಳ ಸಂಖ್ಯೆ ಇಂತಿವೆ—ಕೆ ಬಿ ೫೨೩, ಕೆ ಬಿ ೬೫೧, ಕೆ ಎ ೫೬೮, ಕೆ ಎ ೪೬೫. ಈ ಹಸ್ತಪ್ರತಿಗಳು ಕೇವಲ ಸ್ವರವಚನಗಳಿಗೆ ಮಾತ್ರ ಸೀಮಿತವಾಗದೆ ತಮ್ಮ ಕಟ್ಟಿನಲ್ಲಿ ಇನ್ನೂ ಕೆಲವು ಕೃತಿಗಳನ್ನು ಹುದುಗಿಸಿಕೊಂಡಿವೆ. ಆದುದರಿಂದ ಸಂಪಾದನೆಯಲ್ಲಿ ಉಪಯೋಗಿಸಿಕೊಂಡ ಹಸ್ತಪ್ರತಿಗಳ ಉದ್ದಗಲಗಳ ವಿವರಣೆ ನೀಡಿಲ್ಲ. ತೈಲಲೇಪನವಿಲ್ಲದ ತಾಳೆಗರಿಪ್ರತಿಗಳಿಂದ ಪ್ರತಿಮಾಡುವ ಕಾರ್ಯ

---

* ಹೊಸತು ಹೊಸತು : ಡಾ. ಎಂ. ಚಿದಾನಂದಮೂರ್ತಿ ಪುಟ. 454

ತುಂಬ ದುಸ್ತರವಾದುದು. ಕೆಲವೆಡೆ ಪ್ರತಿ ಶಿಥಿಲವಾಗಿದ್ದು ಗ್ರಂಥ ಲುಪ್ತವಾಗಿರುವುದೂ ಉಂಟು. ಸಂಪುಟದ ಅರ್ಧಭಾಗದಷ್ಟು ಹಾಡುಗಳನ್ನು ಭೂತುಗನ್ನಡಿ ಇಟ್ಟುಕೊಂಡು ಪ್ರತಿಮಾಡಬೇಕಾಯಿತು. ಇಲ್ಲಿನ ಹಾಡುಗಳನ್ನು ಏಕೈಕ ಹಸ್ತಪ್ರತಿಯ ನೆರವಿನಿಂದ ಪರಿಷ್ಕರಿಸಲಾಗಿದೆ. ಆದುದರಿಂದ ಕೆಲವು ಪಾಠಸಮಸ್ಯೆಗಳು ಉಳಿದಿವೆ. ಕಾಲಗರ್ಭದಲ್ಲಿ ಅಡಗಿಹೋಗಿದ್ದ ಹಲವಾರು ಸ್ವರವಚನಕಾರರು, ಸ್ವರವಚನಗಳು ಈ ಸಂಪುಟದ ಮೂಲಕ ಬೆಳಕು ಕಾಣುತ್ತಿರುವುದೆ ಪ್ರಸ್ತುತ ಪರಿಷ್ಕರಣದ ಹೆಗ್ಗಳಿಕೆ.

ಪ್ರಾಚೀನಸಾಹಿತ್ಯ ಸಂಸ್ಕೃತಿಗಳ ಬಗೆಗೆ ಅಪಾರ ಕಾಳಜಿ ತೋರುತ್ತ ಅನೇಕ ಅಮೂಲ್ಯ ಕೃತಿಗಳನ್ನು ಪ್ರಕಟಿಸಿರುವ ಜಗದ್ಗುರು ಶ್ರೀ ಶ್ರೀ ಶ್ರೀ ಶಿವರಾತ್ರಿ ದೇಶಿಕೇಂದ್ರ ಸ್ವಾಮಿಗಳು ಈ ಗ್ರಂಥವನ್ನು ಸಂಪಾದಿಸಲು ಆದೇಶವಿತ್ತು ಜಗದ್ಗುರು ಶ್ರೀ ಶಿವರಾತ್ರೀಶ್ವರ ಗ್ರಂಥಮಾಲೆಯ ಮೂಲಕ ಪ್ರಕಟಿಸಿದ್ದಾರೆ. ಅದಕ್ಕಾಗಿ ಸುತ್ತೂರು ಮಠದ ಪೂಜ್ಯ ಶ್ರೀಗಳಿಗೆ ಅನಂತ ನಮನಗಳು. ಈ ಸ್ವರವಚನ ಸಾಹಿತ್ಯದ ಪ್ರಕಟಣೆಯ ಯೋಜನೆಯ ರೂವಾರಿಯಾದ ನಾಡಿನ ಪ್ರಸಿದ್ಧ ಸಂಶೋಧಕ ಡಾ. ಎಂ. ಎಂ. ಕಲಬುರ್ಗಿ ಅವರಿಗೆ, ಹಸ್ತಪ್ರತಿಗಳನ್ನು ಬಳಸಿಕೊಳ್ಳಲು ಅನುಮತಿ ನೀಡಿದ ಕುವೆಂಪು ಕನ್ನಡ ಅಧ್ಯಯನ ಸಂಸ್ಥೆಯ ನಿರ್ದೇಶಕರಿಗೆ ಮತ್ತು ಸಂಪಾದನ ವಿಭಾಗದ ಉಪನಿರ್ದೇಶಕರಾದ ಶ್ರೀ ಮೈಲಹಳ್ಳಿ ರೇವಣ್ಣ ಅವರಿಗೆ, ಕರಡು ತಿದ್ದಲು ನೆರವಾದ ಶ್ರೀಯುತ ಯು. ಎಸ್. ರಾಮಣ್ಣ ಅವರಿಗೆ, ಅಂದವಾಗಿ ಮುದ್ರಿಸಿದ ರಾಜೇಂದ್ರ ಪ್ರಿಂಟರ್ಸ್ ಮಾಲೀಕರಾದ ಶ್ರೀ ಲೋಕಪ್ಪ ಮತ್ತು ಸಿಬ್ಬಂದಿವರ್ಗದವರಿಗೆ ವಂದನೆಗಳು.

ಮೈಸೂರು — ವೈ. ಸಿ. ಭಾನುಮತಿ

ದಿನಾಂಕ : 2–10–95

# ಗುರುಸಂಗಮೇಶ ಅಂಕಿತದ ಸ್ವರವಚನಗಳು

೧

ರಾಗ : ಕಲ್ಯಾಣಿ

ಶರಣು ಶ್ರೀ ಗುರುವೆ ಕಾರುಣ್ಯಸಾಗರವೆ
ನಿಜ ನಿರ್ವಾಣದಿರವೆ ಪರವೆ
ಶರಣುಜನ ಸುರತರುವೆ ಸುಜ್ಞಾನವಂದಿರವೆ
ತ್ವರಿತದಿಂದೆನ್ನ ಪೊರೆದ ಗುರುವೆ ॥ ಪಲ್ಲ

ತನುಕರಣ ಭುವನ ಭೋಗಾದಿ ತತ್ವಾನೀಕಗಳ ಬಗೆಯುನೆನಗೆ ತಿಳುಹೆ
ಕನಸಿನಂದದೊಳು ಪುಸಿಯುಂದವನು ನೇತಿಗಳೆವನುವನೆನಗುಪದೇಶಿಸಿ
ಅನುದಿನವು ಮಿರುಗುತಿಹ ಪರತರ ಪರಂಜ್ಯೋತಿರೂಪ ನೀನೆಂದರುಹಿ
ಮನಮರವೆಯು ಬಿಡಿಸಿ ಮಾಯಾಗುಣವ ತ್ಯಜಿಸಿ ಪರಿಪೂರ್ಣಮಯನೆನಿಸಿದ
ಗುರುವೆ ೧

ನೀರಿನೊಳು ಲವಣವನು ಹಾಕಲನಿತರೊಳು ತನ್ನಾಕಾರವಳಿದು ಲವಣಂ
ನೀರಾಗಿ ತೋರ್ಪವೊಲು ಜೀವಾತ್ಮನೆಂಬ ಲವಣವನು ಪರಮಾತ್ಮನೆಂಬ
ನೀರಿನೊಳು ಬೆರೆಸಿ ಜೀವೇಶರೆನಿಸುವ ದ್ವೈತಭಾವವನು ಖಿಗೆ ತೊಲಗಿಸಿ
ತಾರಕಬ್ರಹ್ಮದಂಗವ ತೋರಿ ಸಂಸಾರಸಾಗರವ ಕಡೆಹಾಯಿಸಿದ ಗುರುವೆ ೨

ವರ ದಿವ್ಯಾನಂದ ನಿಕ್ಷೇಪಭೂಮಿಯೆಂದೆನುತಪ್ಪ ನೇತ್ರಾಗ್ರದಲಿ
ಸುರುಚಿರಾದಿತ್ಯ ಸೋಮಾಗ್ನಿಬಿಂಬತ್ರಯಂಗಳಿಂದೆಸೆವ ಪೀಠದಲಿ
ತರತರದಿ ರುದ್ರಗಣರೊಡ್ಡೋಲಗಂಗೊಡುವ ಸಡಗರದ ಸಮಯದಲಿ
ಗುರು ಸಂಗಮೇಶ್ವರನ ಚರಣಾರವಿಂದದೊಳ್ ಬೆರೆಸಿ ಬೇರಿಲ್ಲೆನಿಸಿದ ಗುರುವೆ ೩

೨

ಏನ ಮಾಡಲಿ ಶಿವನೆ ಮನಸಿಗಿನ್ನೆಂತು ಮಾಡಲಿ ಶಿವನೆ
ನಾನೊಂದ ನೆನೆದಡೆ ತಾನೊಂದಕೆಳಸುತಿದೇನ ಮಾಡಲಿ ಶಿವನೆ ॥ ಪಲ್ಲ

ಲಿಂಗಪೂಜೆಯನು ಮಾಳ್ಪೆನೆಂದಂತರಂಗದೊಳಗೆ ನೆನೆಯೆ
ಹೆಂಗಳಂಗದ ಹುತ್ತುಭಂಗಿಗೆಳಸಿ ಮನ ಕೊಂಗನೆ ಕುಣಿಸುತಿದೆ
ಅಂಗಜಮದ ವಿಭಂಗ ಸತ್ಯಪಾಪಾಂಗ ನಿರ್ಮಲಚಿದಂಗ
ತುಂಗವೃಷಭಚರಮಾಂಗನಿಲಯನೆನ್ನ ಭಂಗವ ಪರಿಹರಿಸ ೧

ಆಸನದಲಿ ಕುಳಿತು ನಾಸಾಗ್ರವಾಸದೊಳಗೆ ದೃಷ್ಟಿಯ
ಬೀಸದಂತಿರಿಸಿ ಬೆರೆಸುವೆನೆಂಬನಿತರೊಳ್ಗಾಸೆಯ ಮಾಡುತಿದೆ
ಹೇಸಿ ಮನವ್ರುಯೆನ್ನನು ಬಿಡದೆ ಕಾಡಿ ನಾಶವ ಮಾಡುತಿದೆ
ಮೋಸಹೋದೆನು ಮುನ್ನ ಮುಂದರಿಯದೆ ಪಾರ್ವತೀಶ ನೀ ಪಾಲಿಸಯ್ಯ ೨

ಕುಂಡಲಿಮಂಟಪದಿ ತೇಜೋಮಯ ಮಂಡಲತ್ರಯದಗ್ರದಿ
ಮಂಡಿಸಿಕೊಂಡಿಹ ತಾರಾಗ್ರನಭದೊಳಾ ಖಂಡಚಂದ್ರೋದಯವ
ಕಂಡು ತದೀಯ ಸುಧಾರಸವ ದಣಿಯುಂಡು ಸುಖಿಸುತಿರಲು
ಬಂಡಾಟಗೊಳಿಸೆನ್ನ ಬಲು ಬಳಲಿಸುತಿದೆ ಕೆಂಡಗಣ್ಣನೆ ಪಾಲಿಸ ೩

ಬಿಂದು ನಾದಗಳ ಮೇಲೆ ಪರಿವೃತಿಹ ಮಂದಾಕಿನಿಪ್ರಾಂತದ
ನಂದನವನದ ಮಾಕಂದದದೊಳಗೆ ಕುಕಿಲೆಂದು ಬಿಡದೆ ಕೂಗುವ
ಚಂದದ ಕೋಗಿಲೆಯ ಗಾನವ ನಲವಿಂದ ಕೇಳುತಿರಲು
ದಂದುಗದೊಳಗೆನ್ನ ಬಂಧಿಸಿ ಕೊಲುತಿದೆ ಚಂದ್ರಶೇಖರ ಪಾಲಿಸ ೪

ಅನುದಿನದೊಳಗೆನ್ನನು ಬಿಡದೆ ಕಾಡಿ ಮನವೆಂಬ ಪೆರ್ಬುಲಿಯು
ಘನವಾಗಿ ಪಿಡಿದು ತಿನುತಲಿದೆ ಬಿಡಿಸಿಕೊಳ್ಳನಘನಿರಾಮಯನೆ
ಅನುನಯದಿಂದಲೆನ್ನ ಮನೋಂಬುಜ ಕರ್ಣಿಕಾಗ್ರದೊಳು ನಿಂದು
ಮನವನುನ್ಮನಿಯೊಳು ಲಯಿಸಿ ರಕ್ಷಿಪುದು ಚಿದ್ಘನ ಸಂಗಮೇಶ್ವರನೆ ೫

೩

ರಾಗ : ಮಧು ಮಾಧವಿ

ಕಾಣಿಸುತಿದೆ ನೋಡಂದು ಕಂಗಳ ಮುಂದೆ
ಕಾಣಬಾರದು ಘನವು
ಪ್ರಾಣಕಾಧಾರವಾದ ಚಿದಾಕಾಶಂ
ಕೋಣೆಯೊಳಗೆ ಜ್ಯೋತಿಯು ॥ ಪಲ್ಲ

ಕಾಂಚನಾಚಲದ ಮೇಲೆ ಮಿರುಗುತಿಹ
ಮಿಂಚಿನೊಬ್ಬುಳಿಯೊಳಗೆ
ಚಂಚರೀಕನು ಸ್ವರವೆತ್ತಿ ಪಾಡುತಲುರೆ
ಪಂಚವರ್ಣದೊಳಿಹುದು ೧

ಪರಶಿವನೆಂಬದಕಾ ತೆರದಿ ಬಿಲ್ವ
ಸುರುಚಿರದಳದಂದದಿ
ನಿರುಪಮ ವರ್ಣತ್ರಯಾನ್ವಿತ ಲಿಂಗಮುಂ
ದಿರೆ ಮಧ್ಯದೊಳಗೆ ನೀನು ೨

ಬಿಂಬತ್ರಯದ ತಾರಕಾನಭದೊಳ
ಗಂಬುಜಾರಿಯ ಮಧ್ಯದ
ಬಿಂಬದೊಳಗೆ ಪ್ರತಿಬಿಂಬಿಪ ಗುರು ಸಂಗ
ನೆಂಬ ಚಿದ್ಘನಲಿಂಗವು ೩

೪

ಕಾಣಿಸುತಿದೆ ನೋಡು ಕಂಗಳಾಲಿಯ ನಡು
ತಾಣದೀವಿಗೆಯ ಮೇಲೆ
ಪ್ರಾಣದಗ್ರದ ಗಂಗಾ ಯಮುನ ಸರಸ್ವತಿಗಳ
ಕೋಣೆಯೊಳಗೆ ಪ್ರಾಣಲಿಂಗವೆನಿಪ ಜ್ಯೋತಿ ॥ ಪಲ್ಲ

ತಾಲುಮೂಲದ ದ್ವಾದಶಾಂತವೆಂದೆನಿಸಿಕೊಂ
ಬಾಲಯದಂಬರದ
ನೀಲ ಬಿಂದುವಿನಂತರಾಳದೊಳಗೆ ಸೂಕ್ಷ್ಮ
ಜಾಲಾಂಧರದೊಳ್ ಬಲುಬೆಳಗ ಬೀರುತಲಿದೆ ೧

ಬಿಳಿದು ಕರಿದು ಕೆಂಪುವೆರದು ರಂಗಿಪ ಮೂರು
ಬಳಸಿನೊಳಗೆ ಮಿರುಪ
ನಳಿನಾಪ್ತ ರಾಜಾಜ್ಞಿ ಮಂಡಲತ್ರಯಗಳಿಂ
ಮಿಳಿತವಾಗಿಹ ಮಂಡಲದೊಳೀಗ ೨

ಮತ್ತದರೊಳಗೇಳು ಸುತ್ತುಗಳಿಹವದ
ರತ್ತ ನಿಲಿಕಿ ನೋಡಲು
ಬಿತ್ತರವಾದ ಮೂವತ್ತೆರಡು ಕುಸುಮಗಳ
ಮೊತ್ತದೊಳಗೆ ಮುದವೆತ್ತು ರಾಜಿಸುತಿದೆ ೩

ಪುರಬಾಣ ಶಶಿಕಳಾಸರಸಿಜ ಸಿತನಿಧಿ
ಕರರುತು ಹರನಯನ
ಸುರುಚಿರದಳಗಳಿಂದೆಸೆವ ಮನೋಂಬುಜ
ವರ ಕರ್ಣಿಕಾಗ್ರ ತೇಜೋಮಂಡಲದೊಳೀಗ ೪

ಬಿಂದು ನಾದಾತ್ಮವಿದ್ಯನಾಮ ಸಚ್ಚಿದಾ
ನಂದಮಂಟಪದೊಳಗೆ

ಆಂದವಟ್ಟಿಹ ಶೂನ್ಯಸಿಂಹಾಸನದೊಳೊಲ
ವಿಂದ ನೆಲಸಿಹ ಸಂಗಮೇಶನೆನಿಪ ಜ್ಯೋತಿ ೫

೫

ಜ್ಞಾನೋಪದೇಶವನು ಬ್ರಹ್ಮ
ಜ್ಞಾನಾನುಭಾವಿಗಳಿಗೆ ತಿಳಿವೇಳ್ವೆನು ॥ ಪಲ್ಲ

ವಾಮದಕ್ಷಿಣಭಾಗಗಳೊಳು ರಾಜಿಸುತಿಹ
ಸೋಮಸೂರ್ಯರ ಮಹಾಧಾಮದೊಳು
ಪ್ರೇಮದಿಂ ನೆಲಸಿಹ ಸತಿಪತಿಗಳ ದಿವ್ಯ
ನಾಮವನರಿದು ಜಪಿಸಬಲ್ಲಡುಪದೇಶ ೧

ಆರುನೂರುಳಿದ ಮೂರೇಳುಸಾಸಿರವಾದ
ಚಾರು ಜಪಗಳ ವಿಚಾರವನು
ವಾರಿಜಭವ ಮೊದಲಾದ ದೇವತೆಗಳಿ
ಗಾರ್ಯೆದು ಹಸಿಗೆಯ ಮಾಡಲದುಪದೇಶ ೨

ಆದರೊಳು ಶಿವಬೀಜವೆನಿಪಾತ್ಮಮಂತ್ರವು
ಆದರೊಳಗರಿದದೊ ಕುಂಡಲಿಯು
ಪದೆದು ಜತನದಿಂದದ ಮೇಲಕಡರಿಸಿ
ಮುದದಿಂದಲಾಡಿಸಬಲ್ಲಡದುಪದೇಶ ೩

ಬಳಿಕಲದೊ ಕುಂಡಲಿಯನಂಡಲೆದು
ಕಳಕಳಿಸುವ ಮಧ್ಯಕುಂಡಲಿಯನು
ತಿಳಿದದನುಳಿದೂರ್ಧ್ವಕುಂಡಲಿಯನು ಶಿವ
ನಿಳಯದೊಳಗಡಗಿಸಬಲ್ಲಡದುಪದೇಶ ೪

ಮೂಲಾವಲೋಕನಿಮುದ್ರೆಯ ಬಲದಿಂದ
ಲಾಲಿ ಮಿಡುಕದ ದೃಷ್ಟಿಗಳನು
ಕೀಲಿಸಿ ಭ್ರೂಯುಗ ಮಧ್ಯದೊಳಗೆ ಮನೋ
ಜಾಲನೆಯಳಿದು ನೋಡುತಲಿ ಉಪದೇಶ ೫

ಆರುಚಕ್ರಗಳ ಮೇಲೇಕಮುಖವಾಗಿ
ಮೂರು ಚಕ್ರಂಗಳೊಳಗೆ ಬೆರೆದು
ಆರುಮೂರೊಂಬತ್ತುವೆನಿಪವೆಲ್ಲೊಂದಾಗಿ
ಮೀರಿದ ಸ್ಥಾನವನರಿಯಲದುಪದೇಶ ೬

ತಾಲುಮೂಲದ ದ್ವಾದಶಾಂತವೆಂದೆನಿಪ ಸುವಿ
ಶಾಲವಾದನುಪಮಾಲಯದೊಳಗೆ
ಲೀಲೆಯಿಂದಲಿ ನಡುನೀರ ಜ್ಯೋತಿಯ ಬಹು
ಜ್ವಾಲೆಯೊಳಗೆ ಮನವಳಿಯೆ ತಾನುಪದೇಶ ೭

ರವಿರಾಜ ವೈಶ್ವಾನರರ ತೇಜೋಪುಂಜದೊ
ಳವಿದಳ ಹೃದಯಕಮಲದೊಳಗೆ
ರವಿ ಶತಕೋಟಿಸಂಕಾಶ ವಿರಾಜಿತ
ಶಿವಲಿಂಗದನುಸಂಧಾನದೊಳೀ ಉಪದೇಶ ೮

ನಸುಗೆಂಪು ಬಿಳಿದು ಕರಿದು ಕೆಂಪು
ನಸು ಬಿಳಿದಸಮ ಸುರಕ್ತಕೃಷ್ಣಗಳಿಂದ
ಎಸೆವ ಹಳದಿ ಮಿಸುನಿಯ ಬಣ್ಣದತಿಶಯ
ಕುಸುಮ ಗದ್ದುಗೆಯ ಕೊನೆಯನೇರಲುಪದೇಶ ೯

ಮತ್ತೆಂಟು ದಳದ ಷೋಡಶದಳದಬ್ಜಗ
ಳಿತ್ತೆರದೊಳು ನಟ್ಟನಡುವೆಡೆಯೊ
ಗೊತ್ತಿನ ಶತಪತ್ರದೊಳು ಬಿಳಿವಣ್ಣದ
ಬಿತ್ತರದಲಿಯಾ ನುಡಿಯ ಕೇಳಲುಪದೇಶ ೧೦

ಇಂತು ನಾನಾ ವಿಧವಾಗಿ ತನ್ನಯ ಬಾಹ್ಯಾ
ಭ್ಯಂತರದೊಳಗೆಡೆದೆರಹಿಲ್ಲದೆ
ಸಂತತ ಬೆಳಗುವ ಗುರುಸಂಗಮೇಶನ
ಚಿಂತೆಯೊಳಗಿರಲುಪದೇಶ ೧೧

೬

ಕಂಡೆನೆನ್ನಯ ಕರಮಂಡಿತಾಂತರ
ಖಂಡ ತೇಜೋಮಯಮಂಡಲದೊಳಗೆ
ಕುಂಡಲಿ ಮಣಿಮಂಟಪೋನ್ನತ
ಮಂಡಿತಾದ್ಭುತ ಚಂಡಕಿರಣೋ
ದ್ದಂಡ ನಂದೀಶಾದಿರುದ್ರರ
ತಂಡದೊಳು ರಂಜಿಸುವ ಶಿವನ ॥ ಪಲ್ಲ

ವಾಮ ದಕ್ಷಿಣಭಾಗದೆಡೆಯೊಳಗಿರುವ
ಸೋಮಸೂರ್ಯರ ಮಧ್ಯದೊಳಗೆ ರಾಜಿಸುವ

೬

ಧಾಮದೊಳಗನುದಿನದೊಳಗೆ ಚರಿಸುವ
ಕಾಮಿತಫಲಗಳ ಕರುಣದಿ
ಆ ಮಹಾ ಶಿವಬೀಜಗಳ ಯುಗ
ನಾಮವಳಿದೇಕಾಕ್ಷರ ಚಿ
ದ್ವ್ಯೋಮಮಂಡಲ ಮಧ್ಯದೊಳಗತಿ
ಪ್ರೇಮದಿಂ ನೆಲಸಿರುವನಾ ಶಿವನ ಕಂಡೆ ೧

ಅರುಣಮಂಡಲದೊಳಗತಿಶಯದಾದಿ
ಸ್ವರವನು ಚಂದ್ರಮಂಡಲದೊಳಗಿರದೆ
ಸುರುಚಿರಾನಲ ಮಂಡಲದಿ ಮಿಗೆ ಬರದೆ
ಪರಮ ಪ್ರಣವಗಳ ಬೆರೆದೆಡವಿಡದೆ
ತರಣಿ ಶಶಿ ಶಿಖಿ ಕಿರಣನಿಕರ
ಸ್ಫುರಣವಿಲಸಿತ ನಿರ್ಮಲ ಮಾತ್ರಾವಣ
ನಿರುಪಮ ಜ್ಯೋತಿರಗ್ರೋಪರಿ ಸದನದೊಳ
ಗಿರುವನಾ ಶಿವನ ಕಂಡೆ ೨

ತನುವೆಂಬ ಭೂಮಿಯ ಮೇಲಣಚಲದ
ಕೊನೆಯೊಳಗರ್ಧಚಂದ್ರನ ಕರವಾದ
ಘನ ತೇಜೋಬಿಂದುಸ್ವರೂಪ ತಾನಾದ
ಘನದುರುತರ ಜ್ಯೋತಿಸಂಕಾಶವಾದ
ಅನಿಲಚಂಚಲದಿಂದಲಲುಗದ
ಮಿನುಗುವಂಗುಷ್ಟ ಪ್ರಮಾಣದ
ವನಜ ಸೂತ್ರಾದಿಗಳಿಗತಿಶಯ
ವೆನಿಸಿ ಮಿಗೆ ಚಕಚಕಿಸುವ ಶಿವನ ಕಂಡೆ ೩

ಮುನ್ನೀರ ನಡುವೆ ತಿಳಿಯೆ ಚೋದ್ಯವಾದ
ಪನ್ನೆರಡಂಗುಲಗಳ ಪರಿಮಿತವಾದ
ಬಿನ್ನಾಣದಿಂ ಮೂವತ್ತೆರಡೆಸಳಾದ
ಸನ್ನುತ ತಾಲು ಚಕ್ರದ ಪೆಸರಾದ
ನನ್ನಿಯಿಂದಲಿ ನೋಡಲವನ
ಚಿನ್ನಾಳದ ಕಂಜದೊಳಗತಿ
ಸನ್ನಹಿತ ದಿವ್ಯಪ್ರಕಾಶದಿ
ಬಿನ್ನವಿಲ್ಲದೆ ಬೆಳಗುವ ಶಿವನ ಕಂಡೆ ೪

ಒಳಗಲ್ಲ ಹೊರಗಲ್ಲದಾವುದೊಂದೆಡೆಯ
ತಿಳಿಯಬಾರದ ಮಹಾಗೋಪ್ಯದ ಬಗೆಯ
ಬೆಳಗಿನ ಬೆಳಗದೊಬ್ಬುಳಿಯೊಳು ಹೊಳೆವ
ಬೆಳಗಿನೊಳಗೆ ಬೆಳಗಿಪ ಚೆಲುವ
ಕಳಕಳಿಸುತ್ತಿಹ ನೇತ್ರಸೂತ್ರದ
ಸುಳಿಯೊಳಗೆ ಕಣ್ಣೆಸೆದು ಕಾಣಿಸಿ
ದಳಕುಳಗಳೊಂದಾದ ಪರತರ
ನಿಳಯದೊಳು ಗುರುಸಂಗನ ಶಿವನ ಕಂಡೆ ೫

೭

ಆತ್ಮರಾಮ ಆತ್ಮರಾಮ ಆತ್ಮರಾಮ ಆತ್ಮರಾಮ ॥ ಪಲ್ಲ

ಮಾಪಮೂರೆಸಳಿನ ಬ್ರಹ್ಮಚಕ್ರದೊಳನುಪಮ
ಚಾರುಕರ್ಣಿಕೆಯಗ್ರದಲ್ಲಿ ರಾಜಿಸುವ ೧

ಲಿಂಗಸ್ಥಾನದ ನಾಲ್ಕೆಸಳಿನ ಕಮಲದಿ
ರಂಗಿಸಿ ಪಶ್ಚಿಮಮುಖದಿಂದೆಸೆವ ೨

ಪಂಚಾವರ್ತದ ಪದ್ಮದಂತರದೊಳಗುರೆ
ಮಿಂಚಿನಬಳ್ಳಿಯಂದದೊಳು ಬೆಳಗುವ ೩

ಎಂಟೆಸಳಿನ ತಾವರೆಯ ಹೂವಿನ ನಡು
ದಂಟಿನೊಳುರುತರ ದೀಪದಂತುರಿವ ೪

ತಾಲುಮೂಲದೊಳಿಡೆ ಪಿಂಗಳೆಗಳ ಮಧ್ಯ
ದಾಲಯದಾಕಾಶದೊಳಗೆ ಕಾಣಿಸುವ ೫

ಅತಿಶಯವಾದ ಮತ್ತೊಂದೆಡೆಯೊಳಗನು
ಮತಿಸಿ ಮಹಾಶೂನ್ಯಕರವಾಗಿರುವ ೬

ನೂತನವಾದೇಕನಾಳಕಂಜದ ಮಧ್ಯ
ಜ್ಯೋತಿಯೊಳಗೆ ಜ್ಞಾನನೇತ್ರವಾಗಿರುವ ೭

ವರ್ಣತ್ರಯಾನ್ವಿತ ಪಂಕೇರುಹ
ಕರ್ಣಿಕಾಗ್ರದೊಳಗ್ನಿಯಂತೆ ರಾಜಿಸುವ ೮

೮.

ಹದಿನಾರೆಸಳಿನ ಪಂಕಜ ಕರ್ಣಿಕಾಗ್ರದ
ಸದನದೊಳಗೆ ಮುದದಿಂ ನೆಲಸಿರುವ ೯

ನಾದ ಬಿಂದು ಕಲಾತೀತವಾದನುಪಮ
ನಾದಲಯದೊಳಗೆ ಹೊಳೆವಗ್ನಿದೀಪ ೧೦

ಹಿಂಗದೆನ್ನಯ ಹೃದಯಾಂಗಣದೊಳಗಿಹ
ಸಂಗಮೇಶ್ವರನೆನಿಸುವ ಪರಮಾತ್ಮ ೧೧

೮

ಏಗಿ ಏಗಿಸೆನ್ನನು ವಿಷಯ ಪರಮಶಿವ
ಯೋಗಿಜನ ವಂದ್ಯನೆ
ಭೋಗವಿಷಯಸುಖಪೂಗಕೆಳಸಿ ಭವ
ರೋಗಿಯೆನಿಸದೆ ಪಾವನ ಚಿತ್ಪ್ರಕಾಶನೆ ॥ ಪಲ್ಲ

ಪರಮ ಚೌಪೀಠದೊಳು ಮಿರುಗುತಿರ್ಪ
ನಿರುಪಮ ನಾದವನು
ತ್ವರಿತದಿಂ ಭೋಗಿಸೆ ಹೊರಗೆ ರಾಜಿಸುತಿರ್ಪ
ತರುಣಿಯ ಚೊಕ್ಕ ನುಡಿಯ ಕೇಳಲೀಸದೆ ೧

ಸುರುಚಿರಾಸನ ಮುದ್ರೆಯಿಂ ಮನೋದೃಷ್ಟಿ
ಮರುತಂಗಳನುಗೊಳಿಸಿ
ಸರಸಿಜಾನನೆಯಾಲಿಂಗನವ ಮಾಡುವ ಚಾರು
ತರವಾದ ಕಲೆಯ ಮೋಹವ ಮಾಡಲೀಸದೆ ೨

ಮೂರು ಮಂಡಲದ ಮೇಲೆ ಮಿರುಗುತಿರ್ಪ
ಪಾರ ತೇಜವ ತೋರಿಸಿ
ವಾರಿಜಾಕ್ಷಿಯ ರೂಪ ನೋಡಿನಿದೆಂದದ
ಸಾರಿ ಮನದೊಳು ಭಾವಿಸಿ ಭ್ರಮೆಗೊಳಿಸದೆ ೩

ಬಾಲರಂಡೆಯ ಶಿರದಿ ಸುರಿವುತಿರ್ಪ
ಲೋಲ ಚಿದ್ರಸವ ನೋಡಿ
ಬಾಲೆಯಧರಸುಧಾರಸವ ಸೇವಿಸುತಿರ್ಪ
ಲೀಲೆಯೊಳೊಡವೆರಸಿಹ ಸೊಗಸೆಸಗದೆ ೪

ಸಾಸಿರೆಸಳ ಕಮಲವಲರೆ ದಿವ್ಯ
ವಾಸನೆ ಶೀವಿ ಮಿಕ್ಕ ಲೇಸಿನ ಬಲೆಯುಸು

ಮಾಸನೆಯಮು ಮಿಗೆ
ಪಾಸಿಸಗೊಡದೆಲೆ ಸಂಗಮೇಶ್ವರ ೫

೯

ದೂರವಲ್ಲವು ಕಾಣ ಕಲಧೌತಪರ್ವತವು
ಸೂರ್ಯಚಂದ್ರರ ಮೇಗಡೆಯೊಳು ನೆಲಸಿಹದು ॥ ಪಲ್ಲ

ಹಲವು ಕೋಟಲೆಗಳನುಳಿದು ನಿರ್ಮಳನಾಗಿ
ಚಲಿಸುವ ಮನವನಂಡಲೆದು ಸೆರೆವಿಡಿದು
ನೆಲೆನೆಲೆಗಳ ಹತ್ತಿ ನೆತ್ತಿ ಮಂಡಲದಲ್ಲಿ
ಚೆಲುವ ತಾವರೆಕೊಳದ ತಿಳಿನೀರ ಸವಿಯೆ ೧

ಮಂತಣದೊಳಗಿರ್ದ ಮಾಯಪಾಶವ ಗೆಲ್ದು
ಶಾಂತಿ ಪ್ರಾಣಯಿನಿ ಹೃತ್ಕಾಂತದೊಳೆಸೆದು
ಕಾಂತಿಮಯ ಕಮಲದ ಕರ್ಣಿಕಾರೇಖಾಗ್ರ
ದಂತಾರಾಕಾಶದಾಕಾಶದಿ ಮನವಳಿಯೆ ೨

ಮರುತನ ದ್ವಾರ ಹೃದ್ವಾರ ಮೂರ್ಧ್ವದ್ವಾರ
ಪರಮ ಮೋಕ್ಷದ್ವಾರ ಸುಸಿರಮಂಡಲದಿ
ಮರುತ ಮನೋದೃಷ್ಟಿಗಳನೊಂದುಗೂಡಿ ಸು
ಸ್ಥಿರವಾಗಿ ನೋಡುತ್ತಿರಲು ಕಾಣುತಿಹುದು ೩

ಆರೆರಡೆಸಳದ ಕಮಲದ ತುದಿಯಲಿ ಪದಿ
ನಾರೆರಡೆಸಳ ಕಮಲಂಕಿದಣದೊಳು
ಮೀರಿದ ದಶಶತ ಪತ್ರದ ಬಿಳಿವಣ್ಣ
ದಾರಡಿಯ ಧ್ವನಿಯನೆಡೆವಿಡದೆ ಲಾಲಿಸಲು ೪

ತಾರಚಲವೆಂದೆನಲು ದೇವಚಲವೆಂದೆನಲು
ಚಾರುತರ ಪೂರ್ಣಚಲವೆಂದೆನಲು ತಾನೆ
ಆ ರಮ್ಯತರವಾದ ಸುರಸದನವೆಂದೆನಲು
ಸಾರ ಶಾಂಭವಲೋಕವೆಂಬ ಪೆಸರಹುದು ೫

ಇನ್ನೇನ ಹೇಳಲಿ ನಿನ್ನ ಬುದ್ಧಿಯ ನಾನು
ನಿನ್ನ ಕಂಗಳ ಮುಂದಣದಂಗಣದಲ್ಲಿ
ರನ್ನವೆಟ್ಟುವಿನಾಚೆ ರಂಜಿಸಿ ಬೆಳಗುತಿದೆ
ನಿನ್ನಾಣೆ ಪುಸಿಯಲ್ಲ ಚೆನ್ನಾಗಿ ನೋಡೆ ೬

ಇದಿಗಿದಿಗೊ ಕಾಣುತಿದೆ ಗದಗದನೆ ಹೊಳೆವುತಿದೆ
ಮುದದಿಂದವೆ ತನ್ನಾ ಮುದ್ರೆಯೊಳು ಮೈಮರೆದು
ಸದಮಲಾನಂದ ಶ್ರೀಗುರುಸಂಗಮೇಶ್ವರನ
ಪದಸರಸಿಜದನುಸಂಧಾನದೊಳಿರುತಿರಲು ೭

೧೦

ಶರಣು ಶರಣು ಶರಣಯ್ಯ ನಿಮ್ಮ
ಚರಣ ಕಮಲಕೆ ದಮ್ಮಯ್ಯ
ಕರುಣಾಸಾಗರ ಚೆನ್ನಬಸವೇಶ ನೀವೆನ್ನ
ಪರಿಭವಗಳನು ತೊಲಗಿಸಿ ರಕ್ಷಿಪುದು ॥ ಪಲ್ಲ

ಶಶಿರವಿಗಳ ಮಧ್ಯದೊಳಗೆ ಬೆಳ
ಗೆಸೆವ ಮಹಾಜ್ಯೋತಿಯೊಳಗೆ
ಮಿಸುಪ ತಾರಕ ಬ್ರಹ್ಮರೂಪಾಗಿ ಯೋಗಿಗ
ಳಸಮ ಹೃದಯಕಮಲದೊಳು ರಾಜಿಸುವ ೧

ತಾಲುಮೂಲದ ದ್ವಾದಶಾಂತಕನಾ
ದಾಲಯದೊಳು ಚೆಲುವಾಂತ
ಜಾಲಕದೊಳು ಝಗಝಗಿಪ ಕಾಲಾನಲ
ಜಾಲಾಗ್ರ ದಿವ್ಯಪ್ರಕಾಶನಿವಾಸ ೨

ಉತ್ತರವೆನಿಪ ಶಾಂಭವಿಯ ಮುದ್ರೆ
ಯತ್ತಣಿಂ ಮೂಗಿನ ಕೊನೆಯ
ಗೊತ್ತಿನ ಕೋಣೆಯ ಕುಸುಮಗದ್ದುಗೆಯೊಳು
ಬಿತ್ತರದಿಂದೊಪ್ಪಿ ಮಿಗೆ ನೆಲಸಿರುವ ೩

ಆರೆರಡೆಸಳಿನ ಕಮಲದ ಪದಿ
ನಾರೆಸಳಿನ ಪಂಕೇರುಹದ
ದ್ವಾರದ ನಡುವಣ ಸಾಸಿರೆಸಳಿನ ಪದ್ಮ
ಚಾರು ಕರ್ಣಿಕೆಯೊಳು ಮೆರೆವ ಚಿದ್ಬಿಂಗ ೪

ಕಂಗಳ ಮುಂಗಡೆಯೊಳಗೆ ತವೆ
ರಂಗಿಸುವಂಗಣದೊಳಗೆ
ತುಂಗಪೂರ್ಣಾಚಲದೊಳು ಮಿರುಗುವ ಗುರು
ಸಂಗನೆನಿಪ ಚೆನ್ನಬಸವರಾಜೇಂದ್ರ ೫

೧೧

ಏನ ಹೇಳಲಿ ತನ್ನ ತಾನೆ ಬೆಳಗುತಿದೆ
ಜ್ಞಾನಜ್ಯೋತಿಯಯು ಪಲಬಗೆಗಳಾಗಿ ॥ ಪಲ್ಲ

ಅಚ್ಚ ಬೆಳಗೊ ಕಾರ್ಮುಗಿಲ ಮಧ್ಯದೊಳುರೆ
ಸ್ವಚ್ಛವಾಗೆಸೆವ ಮಿಂಚಿನ ಬಳ್ಳಿಯೊ
ಮುಚ್ಚಿ ಮುಸುಕಿದ ಪೊಗೆಯು ಬಗೆ ನಾನಿದ
ರೆಚ್ಚರಿಯನು ಪೇಳಲಸದಳವು ೬

ಕಾಳಮಂಡಲವೊ ನಿರ್ಮಳನಲೆಗಳೊ ತಿಳಿ
ನೀರೊ ಕಂಗೊಳಿಪ ಖದ್ಯೋತಂಗಳೊ
ಸೂರ್ಯಬಿಂಬವೊ ದೀವಿಗೆಯ ಶಶಿಕಿರಣವೊ
ಮೂರಾರು ರನ್ನಗಳಿಂಗಿತವೊ ೨

ಕಂಗಳಾಗ್ರದ ಸುವರ್ಣದ ಕಂಜ ಕಿಂಜಲ್ಕ
ಶೃಂಗಾರ ದಂಡನಾಳಗಳಿರವೊ
ಮಂಗಳಾತ್ಮಕ ಗುರು
ಸಂಗಮೇಶ್ವರನಂಘ್ರಿಯೊಳಗೆ

೧೨

ಶರಣು ಶರಣು ಯೋಗಿಜನ ಮನೋಭೋಜ ಚಂ
ಚರೀಕ ರೂಪನೆ ಮಾಯಮಲಕರ್ಮಲೋಪನೆ
ನಿರಘ ನಿರಾಮಯ ಪರತರಚರಿತನೆ
ಕರುಣದಿಂ ಪೊರೆಯೆನ್ನನು ದೇವ ॥ ಪಲ್ಲ

ನಮಿತಜನಾರ್ತಿ ಪಯೋಧರ ಮರುತನೆ
ವಿಮಲ ಸದ್ಗುಣಭರಿತನೆ ಭವರಹಿತನೆ
ಕಮಲಲೋಚನ ಲೋಚನಾರ್ಚಿತಚರಣನೆ ದಮಿತೇಂದ್ರಿಯಾನೀಕನೆ
ಅಮಿತ ಮಹಿಮನೆ ನಿಗಮ ಜಾಯಿಲನೆ ನಿತ್ಯ
ಕಮನೀಯಕಾಯನೆ ನಿರುಪಮೋಪಾಯನೆ
ಯಮನ ಮುಮ್ಮೊನೆಯಿಂದಲಿರಿದು ಲಜ್ಜಿಸಿದನೆ ಸುಮತ ಸಜ್ಜನಯುತನೆ ದೇವ ೧

ಕಂದುಗೊರಲನೆ ಕಾಮನ ಸುಟ್ಟುರುಹಿದನೆ
ಗಾಂಧರಗಿವಿಯನೆ ಗಾನಸಂಪ್ರೀತನೆ
ಸುಂದರ ಭಸಿತಭೂಷನೆ ವ್ಯೋಮಕೇಶನೆ ಮಂದಸ್ಮಿತನೆ ಭವನೆ

ನಂದಿವಾಹನ ನಾರಾಯಣಪ್ರಿಯನೆ
ಸ್ಕಂದಜನಕನೆ ಕಾತ್ಯಾಯನಿಕಾಂತನೆ
ಚಂದ್ರಧರನೆ ಶುಚಿವರ್ಣನ ಸಚ್ಚಿದಾನಂದಮನೆ ಶಿವನೆ' ೨

ವಾರಣಾಸುರ ಸಂಹಾರನೆ ನರವರದನೆ
ತಾರಾಚಲಾಗ್ರಸದನ ನಿವಾಸನೆ ನಿರ್ವಿ
ಕಾರನೆ ಭಕ್ತಮಂದಾರನೆ ಭಗಣಾಲಂಕಾರನೆ ಶಂಕರನೆ
ಪಾರಿಜಭವನ ಶಿರವರಿದವನೆ ರಾಜ
ಸೂರ್ಯಾಗ್ನಿನೇತ್ರನೆ ಸುರನುತಿಪಾತ್ರನೆ
ತಾರಕಾತ್ಮನೆ ಶ್ರೀಗುರು ಸಂಗಮೇಶ್ವರನೆ ಕಾರುಣ್ಯಸಾಗರನೆ ೩

೧೩

ರಾಗ: ಮಂಗಳ ಕೌಸಿ

ಶರಣು ಶರಣು ಗುರುದೇವನೆ ನಿಮ್ಮ ಶ್ರೀ
ಚರಣ ಕಮಲಗಳಿಗನುದಿನವು ॥ ಪಲ್ಲ

ತತ್ವ ತಾತ್ವಿಕಗಳ ಮೊತ್ತಗಳನು ಪೇಳಿ
ಮತ್ತವನೆತಿಗಳೆವ ಬಗೆಯು
ಬಿತ್ತರದಿಂದುಪದೇಶವ ಮಾಡಿದ
ಸತ್ತು ಚಿತ್ತಾನಂದಮಯಗುರುವೆ ೧

ನೀಲತೋಯದ ನಿರ್ವಿಕಾರ ಕ್ಷಣಿಕರುಚಿ
ಜಾಲ ನಿವಾರಸೂಕಗಳಿಂದಾದ
ಜ್ವಾಲಾಗ್ರ ಕಳೆಯೊಳು ಬೆಳಗುವ ಬ್ರಹ್ಮದ
ಮೂಲವನೆನಗರುಹಿದ ಗುರುವೆ ೨

ಕಂಗಳ ಕೊನೆ ಮೊನೆಯ ಮೇಲೆ ರಂಗಿಪ
ಸಂಗಮೇಶ್ವರನೆಂದೆನಿಸಿ ಪರವಮಾ
ಮಂಗಳಾತ್ಮಕ ದಿವ್ಯಲಿಂಗಾನುಸಂಧಾನ
ದಿಂಗಿತವನು ಪೇಳ್ದ ಘನ ಗುರುವೆ ೩

೧೪

ಮೂರು ಲಕ್ಷ್ಯವನು ಬಾಹ್ಯಾಭ್ಯಾಂತರದೊಳು ಸುವಿ
ಚಾರದಿಂದರಿದು ಲಕ್ಷಿಪುದು ಯೋಗಿಗಳು ॥ ಪಲ್ಲ

ಮೂಲಕಂದದಿ ದಂಡಪಸು ತೊಡಗಿ ನಡುನಾಡಿ
ಮೇಲಣಂಬರತನಕ ಬೆಳೆದು ಪರ್ಬಿಹುದು
ಅಲೋಕಿಸಲ್ಕಂತರದಿ ತಾವರೆಯನು
ಹೋಲುವತಿಶಯದ ಮಿಂಚಿನ ಬಳ್ಳಿಯದನು ೧

ಮತ್ತೆ ನಾಸಿಕದ ತುದಿಯೊಳಗೆ ನಾಲ್ಕಾರೆಂಟು
ಪತ್ತು ಹನ್ನೆರಡು ಬೆರಲುಗಳ ಮಿತಿಯೊಳಗೆ
ಬಿತ್ತರದಿ ಬಾಹ್ಯದೊಳು ಕರಿದು ಪೋಗೆ ಕೆಂಪು ಚೆಲು
ವೆತ್ತಿಹ ಬಿಳಿದು ಹಳದಿಗಳ ಪ್ರಕಾಶವನು ೨

ಬಳಿಕ ರವಿ ಶಶಿ ವಿದ್ಯುದನಲ ತಾರಾನಿಕರ
ಕಳೆಗಳೊಳಕೊಂಡು ಸ್ಥಲನಿಯಮಗಳನುಳಿದು
ಪೊಳೆವ ಶ್ರೀ ಗುರು ಸಂಗಮೇಶ್ವರನ ಶ್ರೀಚರಣ
ನಳಿನದನುಸಂಧಾನದೊಳಗೆ ಮನವೆರೆದು ೩

೧೫

ಹಲವು ಮಾತುಗಳಿಂದಲೇನು ಸಾಧನವಹುದು
ನೆಲೆಯರಿದು ನಿಮ್ಮ ನಿಜವನು ಪೇಳಿರಣ್ಣ ॥ ಪಲ್ಲ

ವಾತಚರವೆನಿಸಿಕೊಂಬುದರ ಪೆಸರೇನು ಖ
ದ್ಯೋತಾಬ್ಜಶರಣನೆನಿಪುದರ ನೆಲೆಯೇನು
ಸಾತಿಶಯ ವಿಸರ್ಗ ಬಿಂದುಶಕ್ತಿಗಳೇನು
ನೀತಿಯಿಂದಿದರ ಬಗೆಯೇನು ಪೇಳಿರಣ್ಣ ೧

ಶಿವನ ಬೀಜವೆಂಬೆರಡು ನಿರುತಿಲಿಹ ನೆಲೆ ಯಾವು
ದವರ ತ್ರಿಕೂಟದೊಳು ಸತ್ತಿರುವುದೇನು
ತವೆ ತಾನೆ ಬಿಡದೆ ಪಾಡುತಲಿರ್ಪ
ಯುವತಿಯಳ ಸವಿ ನುಡಿಯನಿರವೇನು ಪೇಳಿರಣ್ಣ ೨

ತತ್ವ ಮೂರರ ಮೂಲವೇನು ಮೂವತ್ತಾರು
ತತ್ವಗಳ ಲಕ್ಷಿಸುವ ಲಕ್ಷಣವದೇನು
ತತ್ವಮಸಿ ವಾಕ್ಯಂಗಳರ್ಥವದು ತಾನೇನು
ತತ್ವಜ್ಞರುಗಳೆಂಬವರು ಪೇಳಿರಣ್ಣ ೩

ಬುಡ ಮೇಲು ಕೊನೆಯು ಕೆಳಗಾಗಿ ರಾಜಿಸುತಿರ್ಪ
ಬುಡದ ಮೊದಲೊಳಗಡಗಿಹನ ಕುರುಹದನು

ಬಿಡದೆಯಾತನ ಕಯ್ಯೊಳಡಗಿರ್ದನು
ನುಡಿಜಾಣರುಗಳೆಂಬವರು ಪೇಳಿರಣ್ಣ ೪

ಆರಣ್ಯದಾವಲ್ಯನೆಲ್ಯಾಭ್ರ ಮಧ್ಯದೊಳು
ತೋರಿಯಡಗುತಲಿರ್ಪ ಮಿಂಚಿನಿರವೇನು
ಘೋರೆನುತಾರ್ಭಡಿಸುತಿಹ ಮಿಂಚಿನಿರವೇನು
ಮೀರಿ ಸುರಿವುತಲಿರ್ಪ ಮಳೆಯು ಪೆಸರೇನು ೫

ಈರಾರು ಬೆರಲುಗಳ ಮೇಲೆ ಬೆಳಗುವದೇನು
ಕಾರ್ಮುಗಿಲ ಮಧ್ಯದೊಳು ಮಾರ್ಪೊಳೆವುದೇನು
ನೀರ ಬೊಬ್ಬುಳಿಕೆಯೊಳಗುರಿವುತಿಹ ಸೊಡರೇನು
ತಾರಕವನರಿದ ಜಾಣರು ಪೇಳಿರಣ್ಣ ೬

ಲಿಂಗಾಂಗ ಸಂಯೋಗದಿಂಗಿತವದೇನು ಸ
ರ್ವಾಂಗದೊಳಹೊರಗೆಲ್ಲ ತುಂಬಿರುವುದೇನು
ಕಂಗಳಾಗ್ರದೊಳೆಸೆವ ಕಮಲನಾಳದೊಳೆ ಗುರು
ಸಂಗನೊಳ್ ಬೆರೆವುದೆ ನಿಜ ಕಾಣಿರಣ್ಣ ೭

೧೬

ರಾಗ: ಮೊಖಾರಿ

ಜ್ಞಾನಮುದ್ರೆಯ ಮರ್ಮವರಿಯೆ ಗುರುಕೃಪೆಯಿಂದ
ತಾನೆ ಗೋಚರವಹುದು ಪರವಸ್ತುವು ॥ ಪಲ್ಲ

ಒಳಗೆ ಜ್ಯೋತಿರ್ಲಿಂಗದೊಳ್ಮನವನಳವಡಿಸಿ
ಬಳಿಕ ನಾಸಾಗ್ರವೆಂದೆಂಬ ತಾಣದೊಳು
ಹಳದೆವೆಗಳ ಸ್ಥಿರಗೊಳಿಸಿ ನೋಡುತಿರಲು
ಥಳಥಳನೆ ಹೊಳೆವ ಜ್ಯೋತಿಯು ಕಾಣುತಿಹುದು ೧

ಪನ್ನೆರಡು ಬೆರಲುಗಳ ಪರಿಪ್ರಮಾಣದೊಳಿರ್ಪ
ಚಿನ್ನದುಪ್ಪರಿಗೆಯಾಗ್ರದೊಳೆ ರಾಜಿಸುವ
ಮುನ್ನೀರ ನಡುವೆ ನೋಡವದಕತಿಶಯವಾದ
ಚೆನ್ನಸೆವ ಮಡುವಿನೊಳುರಿಯು ಕಾಣುತಿಹುದು ೨

ವೇದ ವೇದಾಂತ ಪಂಡಿತರಿಗಸದಳವಾದ
ಮೂದೆರದ ಭುವನಗಳ ಮೀರಿದಂಬರದ

ನಾದಲಯದೊಳಿಸಿಪ ಗುರು ಸಂಗಮೇಶನ
ಪಾದಪಂಕಜದೊಳು ಮನೋಲಯವಹುದು ೩

೧೭

ಬಂದು ಬೇಗದೊಳೆನ್ನನು ಪಾಲಿಪುದು ಬಾ
ಲೇಂದುಶಂಕರ ಶಂಕರಾನಂದ
ನಂದನ ನಯನಾರವಿಂದಾರ್ಚಿತ
ಸುಂದರ ಚರಣಾರವಿಂದ ನಂದಿವಾಹನ ॥ ಪಲ್ಲ

ಸಗ್ಗದೊರೆಯ ಜಡೆಯನೆ ಮುಪ್ಪುರವ
ರಗ್ಗಳಿಕೆಯ ಮುರಿದನೆ
ಸುಗ್ಗಿಗೆಳೆಯನ ಸುಟ್ಟುರುಹಿ ಬೂದಿಯ ಬಲು
ಹಿಗ್ಗಿ ಮೆಯ್ಯೊಳ್ಪೂಸಿ ಬೇಗದಿ ನಟಿಸಿದನೆ ೧

ಬಡಗಣರಸಗೆಳೆಯನೆ ಬದ್ಧದೊವಲ
ನುಡಿಯೊಳಾಳಿದ ದೇವನೆ
ನುಡಿವೆಣ್ಣಿನರಸನ ನಡುವಣ ತಲೆಯನು
ಕಡಿದು ಕತ್ತರಿಸಿ ಕೈಯೊಳ್ಪಿಡಿದಭವನೆ ೨

ಕಂದುಗೊರಲ ನಿಜವನೆರ್ದೆಯನೊಲ
ವಿಂದಲೊದೆದು ಪೊರೆದನೆ
ಗಾಂಧರಗಿವಿಯನೆ ಗಾನಸಂಪ್ರೀತನೆ
ಚಂದದಿಂದಲಿ ಗೊಲ್ಲಿತಿಯ ಪುಗಗೊಲಿದನೆ ೩

ಕುಳಿರ್ವೆಟ್ಟಣೆನಿಯರಸನೆ ಕುಂದರಿಯದು
ಮ್ಮ [ಳಿ] ಸಿ ಸೊಡರ್ಬಲಿಯೊಳಿರ್ದನೆ
ಪಳೆವಾತುಗಳನು ಹಾಳೆನೆ ಹಾಳರೆನಿ
ಸಿಳೆಯೊಳಗತಿ ಮುದದಿಂದ ಶಂಬರನಾಧೀಶನ ೪

ದೇವಾದಿ ದೇವನೆ ಯೋಗಿಹೃದಯ ರಾ
ಜೀವದಿವಾಕರನೆ
ಭಾವವಿದೂರನೆ ಭಕ್ತಮಂದಾರನೆ
ಪಾವನಾತ್ಮಕ ಸಂಗಮೇಶ್ವರನೆ ನೀನು ೫

೧೮

ರಾಗ : ಕಾದಂಬಿನಿ

ಅಂಗದೊಳಹೊರಗನುದಿನವು ಹೆರೆ
ಹಿಂಗದಿರುತಿಹ ಲಿಂಗಪ್ರಭೆಯು ಬೆ
ಡಂಗಿನೊಳಗೆ ಬೆರಂಗುಗೊಂಡಿಹುದೆಂದಿಗಾದಪ್ಪುದೊ ॥ ಪಲ್ಲ

ತರಳ ಬಾರೆಂದೆನ್ನ ಕೈವಿಡಿದುರುತರ ಮಹ
ದರಿವ ಬೋಧಿಸಿ ಪರಿಭವಂಗಳ
ನಿರದೆ ಕಿತ್ತೀಡಾಡಿ ಭರದಿಂದೆ
ತ್ವರಿತದಿಂದಲಿ ಪೊರೆದ ಚಿದ್ಘನ
ಪರಮ ಪರತರ ಪಾವನಾತ್ಮಕ
ಗುರುವಿನಡಿಗಳ ಬಿಡದೆ ಧ್ಯಾನಿಪ್ಪುದೆಂದಿಗಾದಪ್ಪುದೊ ೧

ಪಾಮದಕ್ಷಿಣಭಾಗದೊಳಗಿಹ
ಸೋಮಸೂರ್ಯರ ಮಧ್ಯದೊಳಗಣ
ಧಾಮದೊಳಗೆಡೆಯಾಡುತಿಹ ಜೀವೇಶರೆಂದೆಂಬ
ನಾಮವನು ತಿಳಿದೆರಡು ಪ್ರಾಣ
ಯಾಮಳಿದೇಕಾಕ್ಷರದಿ ಮಿಗೆ
ಪ್ರೇಮದಿಂದವರೊಳಗೆ ಬೆರೆದಿಹುದೆಂದಿಗಾದಪ್ಪುದೊ ೨

ಗೋಳಕದಿ ಪ್ರಣವವು ಯಕಾರವು
ನಾಳದೊಳಗೆ ವಕಾರ ಗೋಮುಖ
ದಾಳಿಯೊಳು ವರ್ತುಳ ಶಿಕಾರ ಮಕಾರ ಮಧ್ಯದೊಳು
ಪೇಳಲೇಂ ವೃತ್ತದಿ ನಕಾರವು
ಮೇಳೈಸಿ ರಂಜಿಸುವದರಿದಘ
ದೇಳಿಗೆಯ ಸುಟ್ಟುರುಹಿ ಬಾಳುವದೆಂದಿಗಾದಪ್ಪುದೊ ೩

ಲಿಂಗಗೋಳಕದೊಳಗೆ ಪದಿನಾ
ಲ್ಕಂಗೈಸೆ ನಾಳದೊಳು ಷೋಡಶ
ಹಾಂಗೆ ಗೋಮುಖದೊಳಗೆ ದ್ವಾದಶವರ್ತುಳದೊಳು ದಶ
ಸಾಂಗದಿಂ ಮಧ್ಯದೊಳಗಾರು
ತ್ತುಂಗವೃತ್ತದಿ ನಾಲ್ಕು ಪ್ರಣವಗ
ಳಿಂಗಿತವನರಿದಂಗವಳಿದಿಹುದೆಂದಿಗಾದಪ್ಪುದೊ ೪

ಆಸನಾಶ್ರಿತನಾಗಿ ಬಳಿಕಲಿ
ನಾಸಿಕಾಗ್ರದಿ ನಿಲಿಸಿ ದೃಷ್ಟಿಯು
ಮೋಸಹೋಗದೆ ಮನ ಸಾಸಿರದಳದೊಳಳವಡಿಸಿ
ಭಾಸುರಾರುಣ ಚಂದ್ರಶಾಖೆಗಳ
ವಾಸದೊಳು ಲವಲವಿಪ ರುದ್ರರ
ಲೇಸ ಪಡೆದವರೊಳಗೆ ಬೆರದಿಹುದೆಂದಿಗಾದಪುದೊ ೫

ಆಗಸಗಳೈದಾರು ತಾರಕ
ಮೇಗೆ ಕುಚ ಗುಹ್ಯೋಷ್ಟವರ್ತಗಳ
ಸೊಗಯಿಪ ಗೋವ[ದ]ನದ ಗೋಮುಖ ಬಾಣನಿಧಿದಿಕ್ಕು
ನಾಗಭೇದದ ಗಣನೆಯಂಬಕ
ದಾಗಮುವನರಿದವರ ಬೆಳಗಿನೊ
ಳಾಗುಹೋಗುಗಳಳಿದು ಬಾಳುವದೆಂದಿಗಾದಪುದೊ ೬

ಬಾನದೊಳಗಣ ಬಯಲಿನೊಳಗಿಹ
ಬಾನದೊಳು ದಳದಳನೆ ರಾಜಿಪ
ಭಾನುವಿನ ಬೆಳಗಿನ ಬಳಗವನು ಕಂಡು ಕಣ್ಮುಚ್ಚಿ
ಸಾನುರಾಗದಿ ಸಂಗಮೇಶನ
ಧ್ಯಾನದಿಂದಲಿ ಮೈಮರೆದು ಮ
ಹಾನುಭಾವಾನಂದದೊಳಗಿಹುದೆಂದಿಗಾದಪುದೊ ೭

೧೯

ಈಶ್ವರಂ ಸಚ್ಚಿದಾನಂದ ಭಾಸ್ವರಂ ನಮಿತಾ ಕಮ
ಲೇಶ್ವರಂ ಮೆಚಾನೆ ಹೃದಯೆ ಈಶ್ವರಂ ॥ ಪಲ್ಲ

ಕಾರಣಂ ಕಲಿತ ಮಂತ್ರೋ
ದ್ಧಾರಣಂ ಶರಣಮಗೋ
ಚಾರಣಂ ಭಸ್ಮ ರುದ್ರಾಕ್ಷ ಧಾರಣಂ ೧

ಸುಂದರಂ ತ್ರೈಯಿಳಾಂಕೃತ
ಕಂಧರಂ ರಾಜಿತಚಲ
ಮಂದಿರಂ ದಿವ್ಯ ಸಂಕಾಶ
ಬಂಧುರಂ ಮೆಚಾನೆ ಹೃದಯೆ ೨

ತಾರಕಂ ನಿಟಿಲತಟ
ದ್ವಾರಕಂ ಸುಜ್ಞಾನರಸ
ಪೂರಕಂ ಸಂಗಮೇಶಾಖ್ಯ
ಧೀರಕಂ ಮಜಾನೆ ಹೃದಯೆ ಈಶ್ವರಂ ೩

೨೦

ಏನನೆಂಬೆನೆನ್ನ ಸಿರಿಯ ಚಂದಮಾಮ
ಪರಮಾನಂದಭರಿತನಾದೆ ಚಂದಮಾಮ ॥ ಪಲ್ಲ

ಸುರುಚಿರವಾದಾಸನದಿಂ ಚಂದಮಾಮ
ಪರತರ ಮುದ್ರಾನುಸಂಧಾನದಿಂ ಚಂದಮಾಮ
ಮರುತ ಮನೋದೃಷ್ಟಿಗಳ ಚಂದಮಾಮ.
ಮಿಗೆ ಸ್ಥಿರಗೊಳಿಸಿ ನೋಡುತಿರೆ ಚಂದಮಾಮ ೧

ಜೀವಪರಮರೆಂದೆನಿಪ ಚಂದಮಾಮ
ದ್ವೈತಭಾವವಳಿದೇಕವಾಗಿ ಚಂದಮಾಮ
ಆ ವಿಮಲ ಪ್ರಣವದೊಳು ಚಂದಮಾಮ
ಪರಿಭಾವಿಸಿ ಪರಮನಾದೆ ಚಂದಮಾಮ ೨

ನಟ್ಟನಡುವಗಲಿನಲ್ಲಿ ಚಂದಮಾಮ
ದಿಟ್ಟಿ ನಟ್ಟು ನಿಟ್ಟಿಸುತಿರಲು ಚಂದಮಾಮ
ಬಟ್ಟಬಯ[ಲ] ಬಾನದೊಳಗೆ ಚಂದಮಾಮ
ಬೆಳಗು ದಟ್ಟೈಸಿ ತೋರುತಿದೆ ಚಂದಮಾಮ ೩

ಮೂರು ಮಂಡಲದ ಮೇಲೆ ಚಂದಮಾಮ
ಮಿರುಪ ತಾರಕಾಗ್ರಾಕಾಶದಲಿ ಚಂದಮಾಮ
ನೀರಜಾರಿಲ್ಲದುದಿಸೆ ಚಂದಮಾಮ
ಬೇಗ ಸಾರಾಮೃತದ ಸವಿಯನರಿದೆ ಚಂದಮಾಮ ೪

ಗಿರಿಯ ಕೊನೆಯ ಮೊನೆಯ ಮೇಲೆ ಚಂದಮಾಮ
ಮೂರು ಪರಿವ ನದಿಗಳ ನಡುವೆ ಚಂದಮಾಮ
ಉರಿವ ಜ್ಯೋತಿನಿಳಯದೊಳಗೆ ಚಂದಮಾಮ
ನಿರತ ಗುರುಸಂಗನೊಳಗೆ ಬೆರೆದೆ ಚಂದಮಾಮ ೫

೨೧

ಉದಯರಾಗ :
ಏಳು ಪರಶಿವನೆ ಬಾಲಾರ್ಕನುದಯಿಸಿಗೀ
ರೇಳು ಲೋಕದ ಕಾವಳವು ಹರೆದು ಬೆಳಗಾಯಿ
ತೇಳು ನವಪುರದರಸುಗಳು ಬಂದು ನೆರೆದಿಹರೆ ದೇವ ನೀನುಪ್ಪವಡಿಸ ॥ ಪಲ್ಲ

ಅರುಣನುದಯಕ್ಕೆ ಸರಸಿಜವರಳಿತದರೊಳಗೆ
ವರಕರ್ನಿಕೆಯು ಕಾಣಬರುತಲಿದೆ ಕರ್ಣಿಕೆಯೊ
ಳುರು ಪ್ರಣವಜ್ಯೋತಿ ತಳತಳಿಸುತಿದೆ ಪ್ರಣವದೆಡಬಲ ಹಿಂದು ಮುಂದೆಸೆಯೊಳು
ಸುರುಚಿರದ ಚತುರ್ದಳಗಳೊಳು ಬಿಂದು ನಾದ ತ
ತ್ತರುಣಿಯರೊಳಗಂಬಿಕೆಗಣನಿ ಮೊದಲಾದವರು
ತರತರದಿ ಪರಿವಿಡಿದು ನಿಂದು ಭಜಿಸುತ್ತಿಹರೆ ನಿರಘ ನೀನುಪ್ಪವಡಿಸ ೧

ನಿಗಮಾಗಮೇತಿಹಾಸಗಳೊಳಚ್ಚರಿಯೆನಿಸು
ವಗಿನಿವಳೆಯದೊಳೆಸೆವುತಿಹರೆ ಅಷ್ಟವಿಧವಾಗಿ
ಹೊಗರೊಡೆದು ಬೆಳೆದ ದಳಗಳೆಂಟು ತೆರನಾದ ಪ್ರಣವಂಗಳಿರುತಲಿವಕೊ
ಸೊಗಸಿನಿಂದ ಪ್ರಣವದಾಕಾರ ತಾವಾಗಿ
ಮಿಗೆ ಮೀರಿ ಚರಿಪವಾ ಮಾಚಿಲ್ವೆ ಮೊದಲಾದ
ಬಗೆ ಬಗೆಯ ಶಕ್ತಿಯರು ಬಂದು ಪಾಡುತ್ತಿಹರೆ ಪರಮೇಶನುಪ್ಪವಡಿಸ ೨

ರಾಜಮಂಡಲವೆನಿಪ ಪೆಸರಿನಾವರಣದೊಳು
ಸೋಜಿಗದ ರಮಣೀಯವಾದ ಪದಿನಾರು ದಳ
ರಾಜಿಯೊಳು ಲಸದಮಲದತಿಶಯದ ಪದಿನಾರು ಪ್ರಣವಂಗಳಿರುತಲಿವೆಕೊ
ನೈಜದಿಂದಾ ಪ್ರಣವರೂಪುಗಳನುರೆ ತಳೆದ
ತೇಜಸ್ವರೂಪ ನಂದೀಶ ಮೊದಲಾದವರು
ಪೂಜಿಸುವ ವ್ಯಾಜದಿಂದೆಯ್ದಿ ವಂದಿಸುತಿಹರೆ ವರದ ನೀನುಪ್ಪವಡಿಸ ೩

ಅಂಬುಜಸಖನ ಬಟ್ಟೆಸೊಳಿಳಿದು ನೋಡೆ ಪ್ರತಿ
ಬಿಂಬಿಸುವ ಮೂವತ್ತು ಜಗವೆನಿಪ ದಳಗಳವ
ಲಂಬಿಸೊಳಗೆಂಟನುಳಿದಿಪ್ಪತ್ತನಾಲ್ಕರೊಳು ಪ್ರಣವಂಗಳಿರುತಲಿವೆಕೊ
ತುಂಬಿಕೊಂಡಿರುತಿರ್ಪ ಪ್ರಣವಸ್ವರೂಪನವ'
ಲಂಬಿಸಿದ ವಿದ್ಯೇಶರಷ್ಟವಸು ದಿಕ್ಪತಿಗ
ಳೆಂಬವರು ಮುಂಬರಿದು ಮುದದಿ ಕೀರ್ತಿಸುತಿಹರೆ ಚಂದ್ರಧರನುಪ್ಪವಡಿಸ ೪

ಬೆಳಗಿನೊಳು ಬೆಳಗಾಗಿ ಬೆಳಗನಾವರಿಸುತಿದೆ
ಬೆಳಗು ಬೀರಲು ದಿವ್ಯನಾದ ಘೋರ್ಮೊರೆವುತಿದೆ
ಬೆಳಗಿನೊಳು ಕಂಗೆ ಮಂಗಳವಾದ ತಿಳಿವೆಳಗು ಕಾಣಬರುತಿದೆ ನೋಡಲು
ಬೆಳಗು ಬೆಳಗುಗಳೇಕವಾಗಿ ಹೊಳೆವುತಿದೆ ತಿಳಿ
ವೆಳಗಿನೊಳು ಶಿವಲಿಂಗ ನಲಿವುತಿದೆ ಮನ್ಮನೋ
ನಳಿನಾಗ್ರ ಸಿಂಹಾಸನದೊಳು ಶ್ರೀಗುರುಸಂಗಮೇಶನುಪ್ಪವಡಿಸ ೫

೨೨

ರಾಗ : ಸಾರಂಗ
ಕಂಡೆನು ಕರಜೋದ್ಭವ ಕಾಮಿನಿ ಕೇಳ
ಖಂಡ ತೇಜೋಮಯದ
ಮಂಡಲಂಗಳ ಸಣ್ಣಗಂಡಿನೊಳಗೆ
ಹೊಳೆದಂಡಲೆವತಿಶಯದ ಕಳೆಯ ॥ ಪಲ್ಲ

ರನ್ನಪೆಟ್ಟುವಿನಗ್ರದಿ ರಾಜಿಸುತಿಪ
ಮುನ್ನೀರಿನ ನಡುವೆ
ಬಿನ್ನಾಣವಾದ ಮಡುವಿನೊಳುರಿವುತಿಪ
ರನ್ನದೀವಿಗೆಯ ಕಂಡೆ ಸಖಿಯೆ ೧

ನಿಡಿದಾಡಬ ಹೊಂಗೆಯ ಮಾಮರ ಸಾಲು
ವಿಡಿದಡವಿಯ ನಡುವೆ
ಕಡು ಸಣ್ಣಗೆಲಸದ ಬೆಡಗಿನ
ಗುಡಿಯೊಳು ಮೃಡಮೂರ್ತಿಯನು ಕಂಡೆನು ಏ ಸಖಿಯೆ ೨

ಕಂಗೊಳಿಸುವ ಕದಳಿವನದಿ ಬೆಳು
ದಿಂಗಳುದಯವಾಗಲು
ರಂಗಿಪ ಬಟ್ಟಬಯಲ ತುಟ್ಟತುದಿಯೊಳು
ಸಂಗನಿರವ ಕಂಡೆನು ಏ ಸಖಿಯೆ ೩

೨೩

ಅಚ್ಚರಿಯವಾದುದೊಂದ ಕನಸ ಕಂ
ಡೆಚ್ಚತ್ತುಕೊಂಡಿದ್ದೆನವ್ವ
ಮುಚ್ಚಿಕೊಂಡೆಚ್ಚರುಡುಗಿ ಮೈಮರೆದು
ಹುಚ್ಚುಗೊಂಡಿರ್ದೆನಮ್ಮಾ ॥ ಪಲ್ಲ

ದಂಡುಕೋಲಿನ ನಾಳದಿ ಧಗಧಗಿಸಿ
ಕೆಂಡ ಪ್ರಜ್ವಲಿಸಲಾಗಿ
ರಂಡೆಯೊರ್ವಳು ಕೆಂಡವ ನುಂಗುವದ
ಕಂಡು ನಿಬ್ಬೆರಗಾದೆನು ೧

ಮೂಲ ಗ್ರಾಮದೊಳು ಕಿಚ್ಚು ಬಲು ಹೆಚ್ಚಿ
ನಾಲಿಗೆಯು ನೀಡಲಾಗಿ
ಸಾಲು ಮನೆಗಳು ಬೇಯಲು ಜ್ವಾಲೆಯಿಂ
ಮೇಲೂರ ನಿಂದುರುಹಿತು ೨

ನೀರ ಮೇಲಣ ತಾವರೆಗೊಳದೊಳಗೆ
ತಾರಕಿಯನುರಿಯುಡರಲು
ತಾರಕಾಗ್ರದಿ ರಂಜಿಪ ಚಂದ್ರಮನ
ಮೀರಿ ತನ್ಮಯವಾಯಿತು ೩

ಮೀನ ಬಾಯೊಳು ಕಿಡಿಗಳು ಹೊರಹೊಮ್ಮಿ
ಭಾನುವೆಲ್ಲವ ಮುಸುಕಲು
ನಾನದನು ಕಂಡು ನೋಡಿ ನನ್ನೊಳಗೆ
ನಾನೆ ವಿಸ್ಮಯಗೊಂಡೆನು ೪

ಜಗವೆಲ್ಲ ಬೆಳಗೆಸೆಯಲು ನಾನೊಂದು
ಪೋಗುವ ದೆಸೆಯನು ಕಾಣದೆ
ಬಿಗಿದಪ್ಪಿ ಗುರುಸಂಗನ ಬೆರೆದು ಮಿಗೆ
ಯುಗಲದಿರ್ದೆನು ಭಾವಕಿ ೫

೨೪

ನಿನ್ನ ನಿಜವನು ನೀನು ತಿದ್ದು ನೋಡೆಲೆಯಾತ್ಮ
ಚಿನ್ಮಯಾನಂದ ಕಳೆಯ ಬೆಳಗಾ ॥ ಪಲ್ಲ

ವಾಮ ದಕ್ಷಿಣ ಭಾಗಗಳೊಳು ಬೆಳಗುತಿರ್ಪ
ಸೋಮ ಸೂರ್ಯರ ಕಲಾಪವನಿರಿಸಿ
ಪ್ರೇಮದಿಂದವರ ಕತೆಯನು ನೀ ನೆರೆ ಮಾಡಿ
ಧಾಮ ಹಸುವಿನೊಳು ಬೆರೆಯಲು ೧

ವರ್ಣಬೀಜವೆ ಗೋಳುಕದೊಳುಯೆರ್ಮ್ಣವೆ ನಾಳ
ವರ್ಣ ಗೋಮುಖ ವರ್ತುಳದಿ ಶಿಕಾರ
ಮಾರ್ಣವೆ ನಕಾರವೆ ವೃತ್ತದೊಳಗಿರ್ಪ
ನಿರ್ಣಯವನು ನೀನು ನೆರೆಯರಿಯು ೨

ಲಿಂಗ ಗೋಳುಕದೊಳು ಪದಿನಾಲ್ಕು ನಾಳದಿ
ಹಾಂಗೆ ಷೋಡಶ ಗೋಮುಖದಿ ದ್ವಾದಶ
ಮಂಗಳಾವರ್ತುಳದೊಳು ದಶಮಧ್ಯದೊಳಗಾರು
ಸಾಂಗದಿಂ ವೃತ್ತದಿಂ ನಾಲ್ಕರಿನಿತವರಿಯು ೩

ಆಸೀನಸ್ಥಿತನಾಗಿ ಬಳಿಕ ನಾಸಾಗ್ರದಿ
ಬೀಸಲೀಸದೆ ದೃಷ್ಟಿಗಳನೊಂದುಗೂಡಿ
ಸಾಸಿರೆಸಳುಗಳೊಳಗೆ ಮಘಮಘಿಸುವ
ವಾಸನೆಯನು ನೀನು ಸಲೆ ಸವಿಯು ೪

ಪರ ಬಿಂದುನಾದಾತ್ಮ ವಿದ್ಯಗಳೆಂದೆಂಬ
ನಿರುಪಮ ಚತುರ್ದಳಂಗಳ ಮಧ್ಯದಿ
ನಿರುತ ಬೆಳಗುತಿರ್ಪ ಗುರುಸಂಗಮೇಶನೊಳ್
ಬೆರೆದು ಬೇರಿಲ್ಲದೆ ಸುಖಿಯಾಗಿ ಬದುಕ* ೫

೨೫

ಪೇಳಲಸದಳವೆ ಪೆಂಗಳರನ್ನೆ
ಕೇಳು ಪೇಳುವೆನು
ಕಾಳೋರಗನ ತಲೆಯೊಳಗೊಬ್ಬ ಗೊರವಿತಿ
ಬಾಳುವ ಬಳಗವೆಲ್ಲರ ಕೊಂದುದನು ಕಂಡೆ ॥ ಪಲ್ಲ

ಹದ್ದು ತಾನುದ್ದಕಾಗಿ ಹಾರಿ ಮೇಲಿರ್ದ
ಗು .... ಸದೆಲ್ಲಡಗಿ ಮೊದಲಿರ್ದ ಬಿಟ್ಟು
ನಿದ್ರೆಗೈವುದ ಕಂಡೆಚ್ಚತ್ತು ನಾನಿರ್ದೆ....
.... ಪುರದ ಮೇಗಡೆಯೊಳೊಂದು ೧

---

* ಇದೇ ಸ್ವರವಚನ ಪಾಠಭೇದಗಳೊಂದಿಗೆ ಕೆ. ಬಿ. ೫೨೩ ಸಂಖ್ಯೆಯ ಹಸ್ತಪ್ರತಿಯ ೧೮ ನೆಯ ಪುಟದಲ್ಲಿದೆ.

ಪೂಯುದ ನರಿ ಸ್ವರವೆತ್ತಿ ಕೂಗುತಿರೆ
ಪುರದ ಪರದ ಕೇ
ಳರಸಿಗೆ ಪೇಳ್ವನಿತರೊಳ್
ನರಿಯು ಪಟ್ಟಣವನೆಲ್ಲ ನುಂಗವದ ಕಂಡೆ ೨

ಕಣ್ಣಿನ ಮನೆಯೊಳಗೆ ಕೇಳೆಲೆ ಹೆಣ್ಣೆ
ಬಣ್ಣಗಾರಿಕೆಯವನು
ಸಣ್ಣಬಟ್ಟೆಯೊಳಗೆ ಹೆಣ್ಣುಗಳೊಡಗೂಡಿ
ಹಣ್ಣ ಸವಿದು ಕಣ್ಣೊಳಿದುದ ಕಂಡೆನು ೩

ಮೂರು ಬಣ್ಣಗಳಿಂದೆ ಮಿರುಗುತಿರ್ಪ
ಮೂರು ಮಂಡಲದೊಳಗೆ
ತೋರುವೈವತ್ತೆರಡು ದಳ ವರ್ಣನಿಕರದೊ
ಳಾರೈದು ರುದ್ರರಿರುವದ ನಾ ಕಂಡೆನು ೪

ಹಿಂದೆ ಮುಂದೆಡಬಲದೊಳೆಲೆ ತಂಗಿ
ಬಿಂದುನಾದಾತ್ಮವಿದ್ಯೆ
ಎಂದೆನಿಸುವ ನಾಲ್ಕುದಳವ ನಡುವೆ ನಿಂದು
ಚೆಂದದಿಂ ರಾಜಿಪ ಸಂಗನಿರವ ಕಂಡೆ ೫

೨೬

ಸರಸಿಜಾನನೆ ಕೇಳು ಶರೀರದ ಮಧ್ಯೆ
ಸರಸಿಯೊಳಗೆ ಮಿನುಗುತಿರ್ಪ ಕಳೆಯು ಬೆಳಗ ಕಂಡೆನು ॥ ಪಲ್ಲ

ನೆಲ ನೀರುಗಳ ನಡುವೆಡೆಯೊಳು ತೋರ್ಪ
ನೆಲದೊಳಗೆ ಜನಿಸಿ ಬೆಳೆದು ಕೊರ್ಬಿ ಕೊನರಿ ಪರ್ಬಿತು
ನಲವಿನಿಂದಿದನು ತಿಳಿದು ಪರಿಕಿಸಿ ಜೀವ
ದೊಲವನಾಂತ ಪರಶಿವನಿಗೆ ನೆಲೆವನೆಯೆಂದೆನಿಸಿತ್ತು ೧

ಆದರೊಳು ಕುಟಿಲಾಂಗಿಯು ಪೆಸರಿನ ಚಾರು
ಸುದತಿಯೊರ್ವಳೊಗತನವನು ಮಾಡುತಿಹಳು
ಸುದತಿಯು ಹೊದರಿನೊಳಗೆ ಮಾರುತಾನಲ ಬಿಂದು
ಸದಮಲ ಸುನಾದ ಹಂಸಮನಸು ಲಯವಾದವು ೧

ಏನ ಹೇಳಲೆ ಬಾಲರಂಡೆಯು ತಾನು
ಮೀನಿನ ಬಾಯೊಳಗೆ ನುಸಿದು ಭಾನುವ ನುಂಗಿದಳು
ಭಾನಿನೊಳಗೆ ಭಾನು ಹೊಳೆಯುವು[ದ] ಕಂಡು
ಮೌನದಿಂದ ಸಂಗನೊಳಗೆ ಬೆರೆದು ಭೇದವಳಿದೆನು ೩

೨೭

ನಿರುತ ಯೋಗನಿದ್ರಾಮುದ್ರೆಯನುವ ಮರೆದೆಯು
ತೆರದ ಕೃತ್ಯಗಳನು ಮರೆಯಲೊಲ್ಲೆಯು ॥ ಪಲ್ಲ

ಪಲರ ಎಡದ ಮಡಹದಿಂ ಯೋಗಿಯನೊತ್ತಲೊಲ್ಲೆಯು
ಬಲದ ಮಡಹನದರ ಮೇಲೆ ದೃಢದಿ ಮಡಗಲೊಲ್ಲೆಯು
ಬಿಡದೆ ಮೂಲಾಗ್ನಿಯನು ಪಟುಮಾಡಲೊಲ್ಲೆಯು
ಹಾಂಗೆ ಕಲ್ಮಷವ ಸುಟ್ಟುರುಹಲೊಲ್ಲೆಯು ೧

ವಾಸುಗಿಯ ಝೊಂಕನೆಳತಿದ್ದಲೊಲ್ಲೆಯು
ಲೇಸಿನಿಂದ ಪೆಡೆಯನೆತ್ತಾಡಿಸಲೊಲ್ಲೆಯು
ಸೂಸುವ ಮನವ ಸುಮ್ಮನಿರಿಸಲೊಲ್ಲೆಯು ಹತ್ತಿ
ಬೀಸುವ ಗಾಳಿಯ ಬಿಗಿದು ತಡೆಯಲೊಲ್ಲೆಯು ೨

ಕಂಗಳೆರಡನೊಂದು ಮಾಡಿ ನೋಡಲೊಲ್ಲೆಯು ಬಹಿ
ರಂಗದ ಬಳಕೆಯನೀಡಾಡಲೊಲ್ಲೆಯು
ಪೊಂಗುವ ತಾವರೆಹೂವ ಸೂಡಲೊಲ್ಲೆಯು ಗುರು
ಸಂಗಮೇಶ್ವರನಂಘ್ರಿಯೊಳಗೆ ಕೂಡಲೊಲ್ಲೆಯು ೩

೨೮

ಕರಿವಣ್ಣದ ಬಿಳಿವಣ್ಣದ ಕೆಂಪಿನ ವಣ್ಣಗಳಿಂದ
ಬೆರೆದು ರುಚಿಪ ಪರಿಮಳದರಲೊಳು ನೀರು ತುಂಬಿ ॥ ಪಲ್ಲ

ಕಡಿದು ಕತ್ತರಿಸಿದ ಬಿದಿರಿನಂದದಲಿರ್ಪ
ನಡುನಾಡಿ ದಂಡ ಖಂಡದ ನಾಳದೊಳಗೆ
ಬೆಡಗಿನಿಂ ತಳತಳನೆ ಹೊಳೆದು ರಾಜಿಸುತಿರ್ಪ
ಕುಡಿಮಿಂಚಿನ ಕೊನೆಯೊಳಗೆಡಬಿಡದಿರು [ತುಂ]ಬಿ ೧

ಆರೆರಡೆಸಳು ಪದಿನಾರು ದಳಗಳು ದಳ
ನೀರಜಗಳೆರಡರ ನಡುವೆ ಸಾಸಿರೆಸಳ
ವಾರಿಜದ ಕರ್ಣಿಕಾಗ್ರದ ಸೆಳೆವನೆಯೊಳಗೆ
ಭೋರ್ಮೋರೆವಾನಂದಾಮೃತದೊಳಗಿರು ನಿಜ ತುಂಬಿ ೨

ಬಿಂದುನಾದಾತ್ಮವಿದ್ಯಗಳಿಂ ಸೋಕಿಸುತಿರ್ಪ
ನಂದನವನದ ನಡುವಣ ಸರಸಿಯೊಳಗೆ
ಮಿಂದು ಮನ ನಲಿದುಬ್ಬಿಪರು ಸಂಗಮೇಶನೊಳ
ಗೆಂದೆಂದು ಬೆರೆದಿರು ಪರನಿರ್ವಾಣ ತುಂಬಿ ೩

೨೯

ಮಂಗಳಾರತಿ ಪದ
ಮಂಗಳಂ ಮಂಗಳಂ ಮನ್ಮನೋವಲ್ಲಭಗೆ
ಮಂಗಳಂ ಸರ್ವಮಂಗಳೆಯರಸಗೆ
ಮಂಗಳಂ ಗಂಗಾತರಂಗೋತ್ತಮಂಗನಿಗೆ
ಮಂಗಳಂ ನಿರುತ ಶಿವಶಂಕರನಿಗೆ ಜಯ
ಮಂಗಳಂ ಸದಾ ಶುಭಮಂಗಳಂ ॥ ಪಲ್ಲ

ಹೇಮಾದ್ರಿಕಾರ್ಮುಕಗೆ ಹೇರಂಬಜನಕನಿಗೆ
ಸೋಮಶೇಖರಗೆ ಕಾಮವಿದೂರಗೆ
ಕಾಮಿತಾರ್ಥಪ್ರದ ಕಾರುಣ್ಯಸಾಗರಗೆ
ಶ್ರೀಮಹಾಪರಶಿವಶಂಕರನಿಗೆ ಜಯಮಂಗಳಂ ೧

ಸರಸಿಜೋದ್ಭವ ಶಿರಃ ಕರಗೆ ಪರಮೇಶ್ವರಗೆ
ಮುರವೈರಿಲೋಚನಾರ್ಚಿತ ಚರಣಗೆ
ಕರಣಗುಣವಿರಹಿತಗೆ ಕಂದಳಿತಶಂಭಕರಗೆ
ನಿರಘ ನಿರವದ್ಯ ಶಿವಶಂಕರನಿಗೆ ಜಯ ೨

ಕನನಿಕಾರೆ ಭದ್ರಾಕಂಜ ಪ್ರಭಾಕರಗೆ
ದಿನಕರ ಸುಧಾಕರನಲಾಭಾಸಗೆ
ಅನುದಿನದೊಳೆನ್ನ ಕರನೇತ್ರ ಭಾವಂಗಳೊಳು
ಮಿನುಗುತಿಹ ಗುರು ಸಂಗಮೇಶ್ವರನಿಗೆ
ಜಯಮಂಗಳಂ ಸದಾ ಶುಭಮಂಗಳಂ ೩

## ಕಟ್ಟಿಗೆಸಂಗ ಅಂಕಿತದ ಸ್ವರವಚನ

೩೦

ಹೊಸ ಪರಿಯೊಳಗೊಂದು ಶಶಿವೃಕ್ಷವನು ಕಂಡೆ ಚಂದಮಾಮ
ಮುಸುಕಿ ನುಂಗುತಲಿದೆ ಈರೇಳುಲೋಕವನೆಲ್ಲ ಚಂದಮಾಮ ॥ ಪಲ್ಲ

ತುದಿ ಕೀಳು ಬುಡ ಮೇಲು ಪದುಳದಿಂದಾದ ಮರ ಚಂದಮಾಮ
ಪೊದರೆದ್ದ ಎಲೆ ಹೂವು ಕಾಯಿ ಹಣ್ಣುಗಳಿಲ್ಲ ಚಂದಮಾಮ
ಚದುರಿಂದ ನೋಡಲು ಎಲೆ ಹೂವು ಕಾಯುಂಟು ಚಂದಮಾಮ
ಮಧುರದ ಹಣ್ಣುಂಟು ಮಾಯದ ಮರದೊಳು ಚಂದಮಾಮ ೧

ಹಣ್ಣೊಂದು ಬಣ್ಣವೈದು ಆರುಬಗೆಯು ರುಚಿ ಚಂದಮಾಮ
ಹಣ್ಣಿನ ಹೆಸರುಗಳು ಹಲವು [ಪ]ರಿಗಳುಂಟು ಚಂದಮಾಮ
ಹಣ್ಣು ಮೆಲುವಂಥ ಅಣ್ಣಂಗಳಿಲ್ಲರು ಚಂದಮಾಮ
ಹಣ್ಣ ಮೇದಣ್ಣನ ಪೆಸರಿಲ್ಲ ಕುರುಹಿಲ್ಲ ಚಂದಮಾಮ ೨

ಮರದಲಾದ ಹಣ್ಣ ಮರವೆ ತಾ ನುಂಗಿತ್ತು ಚಂದಮಾಮ
ಮರದ ಮರವೆ ಹೋಗಿ ಮರ ಮಾಯವಾಯಿತ್ತು ಚಂದಮಾಮ
ಮರದ ಕುರುಹ ಬಲ್ಲ ಕರುಣಿ ನಿಶ್ಚಿಂತನು ಚಂದಮಾಮ
ಮರದ ಮರವನೆಲ್ಲ ಕರುಣಿ ಕಟ್ಟಿಗೆಸಂಗ ಚಂದಮಾಮ ೩

## ಗುರುಶಾಂತ ಅಂಕಿತದ ಸ್ವರವಚನ

೩೧

ನಿರುಪಮ ದೇಶದಿ ಭರದಿ ಬಂದಿತು ಪಕ್ಷಿ ಚಂದಮಾಮ
ಆದ ವಿವರಿಸಿ ನೋಡಿದರೆ ತುಪ್ಪುಟ ಅದಕಿಲ್ಲ ಚಂದಮಾಮ ॥ ಪಲ್ಲ

ಊರ ಮಧ್ಯದೊಳೊಂದು ಉಪ್ಪರಿಗೆಯ ಮೇಲೆ ಚಂದಮಾಮ
ಅದು ಕಾರುಣೀಕದ ಪಕ್ಷಿ ಕನಸಲ್ಲ ದಿಟವಿದು ಚಂದಮಾಮ ೧

ಆರುವರ್ಣದ ಪಕ್ಷಿ ಆನಂದವಾಗಿದೆ ಚಂದಮಾಮ
ಅದು ನೀರಜದುದಕದಿ ನಿಂತು ನೋಡುತಿದೆ ಚಂದಮಾಮ ೨

ಕ್ಷಿತಿಯು ಆಕಾಶಕ್ಕೆ ನಡುವೆ ಗೂಡಿಕ್ಕಿತು ಚಂದಮಾಮ
ಅದು ಅತಿಶಯುದಮೃತದ ಗುಟುಕ ನುಂಗಿತು ಚಂದಮಾಮ ೩

ಸತತಿ ಚಿತ್ತದ ಬೆಳಕಿನೊಳಾಡಿತು ಚಂದಮಾಮ
ಅಪ್ಪಮ ಆದುಬ್ಬಿ ಪ್ರಣಪದೀಶ್ವರನೆಂದು ಕೂಗಿತು ಚಂದಮಾಮ ೪

ಪಕ್ಷಿಗೆ ಕ್ರಿಯಾಜ್ಞಾನ ಪಕ್ಕಗಳ್ಬಂದವು ಚಂದಮಾಮ
ಅದು ಸಿಕ್ಕದೆ ಹೋದೀತು ಹದಿನಾಲ್ಕುಲೋಕಕ್ಕೆ ಚಂದಮಾಮ ೫
ಇಕ್ಕಟ ಬೈಲೊಳು ಬೆದರಿತು ನಿಜದಿಂದ ಚಂದಮಾಮ
ಅಕ್ಕಟ ಗುರುಶಾಂತಪ್ರಭುವಿನೊಳಡಗಿತು ಚಂದಮಾಮ ೬

೩೨

ಲಿಂಗ ಸೋಂಕಿದ ತನು ಲಿಂಗವಾಯಿತು ಘನ ಲಿಂಗ ತುಂಬಿ
ಮಂಗಳವಾಯಿತು ಕರಪೂರ ಶಿವಮಂತ್ರಲಿಂಗ ತುಂಬಿ ॥ ಪಲ್ಲ

ಪಂಚಭೂತಂಗಳ ಕಳೆದು ಶ್ರೀ ಗುರುವಿತ್ತಲಿಂಗ ತುಂಬಿ
ಸಂಚಲವಡಂಗಿತು ಕರಣಂಗಳೊಳು ಪ್ರಾಣಲಿಂಗ ತುಂಬಿ
ಮಿಂಚುವ ಮನವರಿಷಡ್ವರ್ಗದೊಳಗೆಲ್ಲ ಲಿಂಗ ತುಂಬಿ ದ್ವಿ
ಪಂಚ ಮಾರುತ ಪುರುವಿಷಯಂಗಳವು ತಾವು ಲಿಂಗ ತುಂಬಿ ೧

ಒದವೆ ರ್ಝೀಂಕಾರ ಪ್ರಣವಸ್ವರೂಪದ ಲಿಂಗ ತುಂಬಿ
ಮುದದಿ ದ್ವಿಭುಜದೊಳು ನಾಮದ್ವಿಯಕಾಕ್ಷರ ಲಿಂಗ ತುಂಬಿ
ಹೃದಯ ಮಧ್ಯದೊಳು ಶಿಕಾರ ಪ್ರಣವರೂಪ ಲಿಂಗ ತುಂಬಿ
ಪದದ್ವಯದೊಳು ಚ ಯಃ ಕಾರ ಷಡಕ್ಷರ ಲಿಂಗ ತುಂಬಿ ೨

ಹೋದಾರ ಚೌದಶ ಚಾಲಿತವಾ ಚರಲಿಂಗ ತುಂಬಿ
ಸ್ವಾದಿಷ್ಟ ಷಡುದಳ ಷಡುಲಿಕ್ತದೊಳು ಗುರುಲಿಂಗ ತುಂಬಿ
ಭೇದಿನಿ ಮಣಿಪುರದ ಸಲಿಕ್ತದೊಳು ಶಿವಲಿಂಗ ತುಂಬಿ
ದ್ವಾದಶದಳಲಿಕ್ತ ಅನಾಹತದೊಳು ಚಾರುಲಿಂಗ ತುಂಬಿ ೩

ವಿಶುದ್ಧಿ ಷೋಡಶದಳಲಿಕ್ತ ಪ್ರಾಸದ ಲಿಂಗ ತುಂಬಿ
ಮಿಸುಪಾಜ್ಞೆಯೊಳು ದ್ವಿದಳವು ದ್ವಿಯಕಾಕ್ಷರ ಮಹಲಿಂಗ ತುಂಬಿ
ಎಸೆವ ಬ್ರಹ್ಮೇಂದ್ರಿ ನಿಃಕಲ ಶಿಖಾಗ್ರದಿ ಶೂನ್ಯಲಿಂಗ ತುಂಬಿ
ಪಶ್ಚಿಮ ಚಕ್ರದಿ ಪರಮ ನಿರಂಜನಲಿಂಗ ತುಂಬಿ ೪

ಇಳೆತತ್ವವಳಿದು ಘ್ರಾಣೇಂದ್ರಿಯೊಳಾ ಚರಲಿಂಗ ತುಂಬಿ
ಜಲತತ್ವವಳಿದು ಜಿಹ್ವೇಂದ್ರಿಯೊಳಗೆ ಗುರುಲಿಂಗ ತುಂಬಿ
ಸಲೆ ತೇಜತತ್ವವಳಿದು ನೇತ್ರೇಂದ್ರಿಯೊಳಗೆ ಶಿವಲಿಂಗ ತುಂಬಿ
ಸುಳಿ ಮಾರುತತ್ವವಳಿದು ತ್ವಕ್ಕೇಂದ್ರಿಯೊಳಾ ಚರಲಿಂಗ ತುಂಬಿ ೫

೨೮

ಗಗನತ್ವವಳಿದು ಶ್ರೋತ್ರೇಂದ್ರಿಯೊಳ್ ಪ್ರಸಾದ ಲಿಂಗ ತುಂಬಿ
ಘನ ಹೃದಯದಿ ನಿಜವೆನಿಸುವ ಮಹಲಿಂಗ ತುಂಬಿ
ಆಗು ಹೋಗುವ ಮತಪರಪೆಗಳು ಮೀರಿತು ಲಿಂಗ ತುಂಬಿ
ಬೀಗಿ ಸಲೆ ರವಿ ಕೋಟಿ ತೇಜ ಪ್ರಭಾಮಯ ಲಿಂಗ ತುಂಬಿ ೬

ನವಚಕ್ರ ನವವರ್ಣ ನವನಾಮ ನವವಿಧ ಲಿಂಗ ತುಂಬಿ
ನವಶಕ್ತಿ ನವಭಕ್ತಿ ನವಪೂಜೆ ನವಮಂತ್ರ ಲಿಂಗ ತುಂಬಿ
ವಿವರಿಸಬಾರದ ತ್ರಿಪುಟಿಯನೊಳಕೊಂಡ ಲಿಂಗ ತುಂಬಿ
ಎವೆ ಹೊಳಚದೆ ಕರವ್ನರದ ಮದ್ಗುರುಶಾಂತ ಲಿಂಗ ತುಂಬಿ ೭

೩೩

ಅರಿವಿನ ದೀಪವೆಚ್ಚರಿಕೆ ಕಂಡ್ಯ
ಬಟ್ಟ ಬರಿದೆ ಆನಂದ ತೋರುವದು ಕಂಡ್ಯ ॥ ಪಲ್ಲ

ಕಣ್ಣುಗಾಣದೆ ಬಾಗಿಲೊಳಗೆ ಕಂಡ್ಯ ಮೂರು
ಬಣ್ಣದ ಸೊ[ಡರ] ರತ್ನ ಪಣತೆ ಕಂಡ್ಯ ೧

ಎಣ್ಣೆ ಬತ್ತಿಯ ಹಂಗಿಲ್ಲ ಕಂಡ್ಯ ಅದು
ಸಣ್ಣನಾಗಿ ಉರಿ [ವ ನಿ]ಜ ಕಂಡ್ಯ
ಹುಬ್ಬಳ್ಳಿ ನಟ್ಟ ನಡುವೆ ಕಂಡ್ಯ ಮುಗ
ರಿ[ಂ]ಬಿಟ್ಟು ದಾಟವು ನಿಲಲಿ ಕಂಡ್ಯ
ಕಬ್ಬ ಬಿಲ್ಲನೆ ತೆರೆ ಜೋಕೆ ಕಂಡ್ಯ ಮನ
ಸುಬ್ಬಿನ ಕೊಬ್ಬು ತಾ ಬಿಟ್ಟುದು ಕಂಡ್ಯ ೨

ಹಗಲಿರುಳು ಆನಂದಯಿಹದು ಕಂಡ್ಯ
ಇಹಲೋಕ ಪರಲೋಕ ಸಾಧನವು ಕಂಡ್ಯ
ನಿತ್ಯ ನೀ ರಕ್ಷಿಸು ನೋಡು ಕಂಡ್ಯ
ನಮ್ಮ ಗುರುಶಾಂತ ಬಸವೇಶ ತಾನೆ ಕಂಡ್ಯ ೩

೩೪

ಬರಿಯ ಬೊಮ್ಮದ ಮಾತು ಕೋಡು
ಗುರುಕಾರುಣ್ಯ ಪಡೆದಂಥರಂಗವ ನೋಡು ॥ ಪಲ್ಲ

ವಾಯುಮಾನವನೊಂದು ಮಾಡು ನಿನ್ನ
ಕಾಯವಿಡಿದು ಪರಮಾತ್ಮನ ಕೂಡು
ಮಾಯಪಾಶವ ಪೋಗಲಾಡು ನನ
ಗಾಯುಷ್ಯವಲ್ಲಿಲ್ಲ ಇಲ್ಲಿದೆ ನೋಡು ೧

ವಳ ನಾಲ್ಕರೊಳು ಚೆಲ್ಲರೊಳು ಚೆಲ್ಲವಾಡು
ವಳವಾರು ವಳ ಪೊಕ್ಕುಗಾನಂದವಾಡು
ಒಳಗೆ ಭೇದಿಸಿ ಮೇಲೆ ನೋಡು
ತಿಳಿಗೊಳನುಂಟಲ್ಲಿ ನೀ ಮುಳುಗಾಡು ೨

ಬ್ರಹ್ಮನಾಳವ ಪೊಕ್ಕು ನೋಡು ಪರ
ಬ್ರಹ್ಮ ಮಂಟಪದೊಳಗಾನಂದವಾಡು
ಧರ್ಮಗುರುವು ಒಮ್ಮೆ ಪಾಡು
ನಮ್ಮ ನಿರ್ಮಳ ನಿಜಗುರುಶಾಂತನ ಕೂಡು ೩

೩೫

ಬಳ್ಳು ಕೂಗಿದ ಫಲನು ಬಲ್ಲೆಯಾ ಎಲೆ ಅಕ್ಕ
ಒಳ್ಳಿತಲ್ಲವೆ ತಂಗಿ ಪುರದ ಜನರ್ಗಳಿಗೆ ॥ ಪಲ್ಲ

ಪುರದ ಮೂಡಣ ದಿಕ್ಕನಡರಿ ಅಗ್ನಿಗೆ ಬಂದು
ಸ್ವರವನಿಕ್ಕುತಲಿದೆ ಯಮ ನೈರುತ್ಯಕಾಗಿ
ದೊರೆಗಳಳಿದರು ತಂಗಿ ಮರಣ ತಳವಾರರಿಗೆ
ಸಿರಿಹೋಯಿ ಭೂಪತಿಗೆ ಸಾರುತಿದೆ ತರಳೆ ೧

ನಡುಕೇರಿಯುರಿದು ನಾನಾ ಭಟರು ಮಡಿದರು
ನಡೆವುತಿದೆಯಾ ಬಳ್ಳು ಕರುಣ ವಾಯುವ್ಯಕಾಗಿ
ಕಡುಚೆಲ್ವೆ ಕೇಳು ಕುಬೇರನಲಿ ಕೂಗುತಿದೆ
ಒಡೆಯನಾದನು ಅಲ್ಲಿ ಪರಲೋಕದರಸು ೨

ನಿಲ್ಲುತಿದೆ ಈಶಾನ್ಯದಲಿ ಜಂಬುಕ ತಾನು
ಎಲ್ಲಿ ಮಾತೇಕೆ ಶಿವಪುರವಾದುದು
ತಲ್ಲೀಯವಾಗಿ ಗುರುಶಾಂತನೊಳಗಾ ಬಳ್ಳು
ನಿಲ್ಲುತಿದೆ ಬಟ್ಟಬಯಲೊಳಗೆ ಲಲಿತಾಂಗಿ ೩

೩೬

ರಾಗ: ಪಾಡಿ
ಬಗುಳಿದವರಾರೆಂದು ನೀನು ಹೋಗಿ
ಮಗುಳಿ ಮೂದಲಿಸುವರೀಶಾತ್ಮ ನಿನಗೇನು ॥ ಪಲ್ಲ

ಒಡಲಾಹುತಿಗೆ ಶುನಿಯು ತುಡಗ ತಿಂಬುದಕಟ
ಕಡೆಯು ಮನೆಬಾಗಿಲೊಳು ನಿಂದಿರುತಿರೆ
ಬಿಡದೆ ದಡಿಯಲಿ ಪೊಯಿದು ಕೆಡಹುವಂದದಿ ಯಮನು
ಹೊಡಗಿಚ್ಚಿಗಿಕ್ಕಿ ಶಿಕ್ಷಿಪನಿರ್ದಯೆಲೆ ೧

ಹೇಳುವನೊಬ್ಬ ಕೇಳುವ ತಿರುಕನಿರುತಿರಲು
ತಾಳಿದರೆ ನೀ ಮಾನ್ಯನೆನಿಸಿಕೊಂಬೆ
ಗಾಳಿಗೆತ್ತಿದ ಸೊಡರಿನಂತಾದ ಲೋಕದೊಳು
ಬೀಳುನುಡಿಗಳಿಗೆ ಬೇಸರಿಸುವರೆಯಾತ್ಮ ೨

ಅಶನದಿಂದಲಿ ವೆಸನದಿಂದಲಿ ವಿಷಯದಿಂದಲಿ ತಾಪ
ಮುಸುಕಿರ್ದ ಮೇಲೆ ಹೊಲೆಗುಣವಲ್ಲವೆ
ಹುಸಿ ಕಳವು ಹೊಲಸು ನಾರುವ ಕುಳಿಗೆ ಮನವೆಳಸಿ
ಮುಸುಕಿ ಬಿರ್ದಂಗಹೀನರ ನುಡಿಯು ಕೇಳ್ದು ೩

ಕರಿಯೆಂಟಗಳನೊಬ್ಬನೇರಿ ದಶವಾಯುಗಳ
ಕರಣಾದಿಗಳನೂರ್ಧ್ವಮುಖಕೆ ತಂದು
ಸ್ಮರನ ಕೊರಳರಿದ ಧೀರನ ಮುಂದೆ ಶತಲಕ್ಷ
ನರಿ ನಾಯಿ ನಿಲ್ಲಬಲ್ಲುವೆ ರಾಜಹಂಸೆ ೪

ಕುರಿ ಕುರುಬನಿಂದ ವಿಶ್ವಾಸಿಕೆಯು ನೆರೆ ಬಯಸಿ
ಕರೆದವರ ಸುತ್ತ ಹಿಂಪೆ ಪೋಪುದು
ಕುರಿಗಳಿಂ ಕಷ್ಟ ನರಗುರಿಗಳೆಂದರಿದೆಮ್ಮ
ಗುರುಶಾಂತನೊಳು ಬೆರಸಿ ಸುಖಿಸೆಲೆಲೆಯಾತ್ಮ ೫

೩೭

ರಾಗ: ಮೌಳಿ
ಹೆಣ್ಣಿನ ಸಂಗದಲಿ ಮೈಮರೆದಣ್ಣಗಳಿಗನುಭವವೇಕೆ ॥ ಪಲ್ಲ

**ಗುರುಶಾಂತ ಅಂಕಿತದ ಸ್ವರವಚನಗಳು** 

ಸತಿಯರ ಕಾಲ್ದೆಸೆಯಲಿ ಬಿದ್ದು
ಅತಿಶಯ ಲಿಂಗಸಂಗವ ಮರೆದು
ಗತಿಗೆಟ್ಟವರು ನಿಜದನುಭಾವ
ಸ್ಥಿತಿಯನರಿದೆವೆಂದೆನಲೇಕೆ ೧

ಹಿಂದು ಮುಂದನೆ ಹರಿದು ಲಿಂಗದೊ
ಳೊಂದಿ ಬೆರಸಿದನುಭಾವಿಗಳೆಂದು
ಚಂದ ಚಂದದಿ ನುಡಿದು ಮರಳಿ
ಹಿಂದ ಬಯಸಲೇಕೆ ೨

ಪರಿಪೂರ್ಣಲಿಂಗದೊಳು ಬೆರಸಿದ
ಪರಮ ವಿರಕ್ತರು ತಾವೆಂದು
ಶರಣರೊಳಗೆ ಗಳಹಿ ತರುಣಿಯ
ರೆರಡು ಕಾಲೆಡೆಯ ಮಂಡಿಸಲೇಕೆ ೩

ಕಾಮನಬಾಣಕಂಜಿ ಸತಿಯರ
ಕಾಲ ಕೆಳಗಡಗುತಿರ್ದು
ಆ ಮಹಾಘನಲಿಂಗದ ಅನುಭಾವ
ಸೀಮೆಯಾದೆವೆಂದೆನಲೇಕೆ ೪

ಕನ್ನೆಯರೆರಡು ಕಾಲ ಹೆಗಲೊಳಿಟ್ಟು
ಕರ್ನದಿ ಚರ್ಮದಂಡವನು ಕೊಡುವ
ಕುನ್ನಿಜಡರು ಲಿಂಗದನುಭಾವಾ
ದಿರ್ನಯಮನರಿದೆವೆನಲೇಕೆ ೫

ಶಕ್ತಿಗೆ ಭೃತ್ಯನಾಗಿ ಜಡ
ಶಕ್ತಿಯನಾತ್ಮದೊಳಗೆ ಧರಿಸಿ
ಮುಕ್ತಿದೂರರಾದ ಜಡರು ವಿ
ರಕ್ತಾನುಭವವನುಸುರಲೇಕೆ ೬

ಕರಕಮಲದೊಳಿರ್ಪ ನಿರುಪಮ
ದಿರವಯ ನಿಜ ಗುರುಶಾಂತನಲ್ಲಿ
ಮನವ ನಿಲಿಸಲೊಲ್ಲದೆ ಸತಿ
ಯರ ನೆನಹಿಲಿರ್ದಗನುಭವವೇಕೆ ೭

೩೮

ರಾಗ ಮುಖಾರಿ :

ತನುಗುಣಂಗಳು ಹಿಂಗಿ ಮನವು ಲಿಂಗದಿ ನಿಲದು
ಅನುಭಾವಿಗಳೆಂದೆನುತ ನುಡಿವಿರಣ್ಣ ॥ ಪಲ್ಲ

ಕಾಮದಲಿ ಕಂಗೆಟ್ಟು ಕ್ರೋಧದಲಿ ಮುಂಗೆಟ್ಟು
ಆ ಮಹಾ ಮದ ಮತ್ಸರದಲ್ಲಿ ಮುಳುಗೆ
ಕಾಮಿನಿಯ ಕಾಲೆಡೆಯ ಹ[illegible]ದೊಳು ಸಿಲ್ಕಿ ನಿ
ಸ್ಸೀಮಲಿಂಗವನೆಂತು ಅರಿ[illegible]ರಿ ೧

ಪುತ್ರ ಮಿತ್ರ ಕಳತ್ರ ಮೋಹದಲಿ ಕೂಡಿದ್ದು
ನಿತ್ಯಲಿಂಗಾರ್ಚನೆಗೆ ತೆರಹಿಲ್ಲದೆ
ಮತ್ತೆ ನೀವು ಲಿಂಗಾನುಭಾವಿಗಳೆಂದು ಜಡ
ಭಕ್ತರೊಳು ನುಡಿದು ಬೆಬ್ಬನೆ ಬೆರಹಿರಿ ೨

ಬರಿಯ ಮಯ್ಯೊಳು ತಿರುಗಿ ಕರಪಾತ್ರೆಯಲ್ಲುಂಡು
ಉರುತರದನುಭಾವ ನಾವರಿದೆವೆಂದು
ಮರಳಿ ಸತಿಯರ ಸಂಗದಲಿ ಮೆಚ್ಚಿ ಮರುಳಾದ
ದುರುಳರಿಗನುಭಾವವೆತ್ತಲಣ್ಣ ೩

ಬಿಟ್ಟ ಮಲ ತ್ರಿವಿಧವನು ಕಚ್ಚಿ ಲಿಂಗವ ಮರೆದು
ಭ್ರಷ್ಟರುಳಿಗಳೆಲ್ಲರು ಕೇಳಿರಣ್ಣ
ಮರ್ತ್ಯಕೆ ನೀವು ನಿಜಲಿಂಗಾಂಗಿಗಳ ಕೂಡೆ
ಶ್ರೇಷ್ಠಾನುಭಾವಿಗಳೆಂದೆಂಬಿರಣ್ಣ ೪

ಪಾತಕಕೆ ನೆಲೆಯಪ್ಪ ಮೂತ್ರದ ಕುಳಿಯ ಕಂಡು
ದಾಟಲಾರದೆಯಲ್ಲಿ ಬಿಡಿರಣ್ಣ
ಸ್ವಾತಂತ್ರ್ಯ ಘನಲಿಂಗದನುಭಾವವನರಿಯದೆ
ಮೂತ್ರದ ಕುಳಿಯಲ್ಲಿ ಬಿದ್ದಿರಣ್ಣ ೫

ಅಂಗನೆಯರೆರಡು ಕಾಲನು ಹೆಗಲೊಳಗೆ ಪೊತ್ತು
ಭಂಗಬಟ್ಟಾಕಾಲ ಮಧ್ಯದಲ್ಲಿ
ಹಿಂಗದನುದಿನ ಹೊರಳಿ ಉರುಳಿ ನರಳುತಲಿದ್ದು
ಲಿಂಗಾನುಭಾವವವೆಂತರಿದಿರಣ್ಣ ೬

ಸತಿಯು ದ್ವಿಕಾಲ ಮಧ್ಯದಿ ಮಿಂಡಗಾಲಿಕ್ಕಿ ಶಾ
ಶ್ವತ ಸಿದ್ಧಲಿಂಗಸಂಗವನು ಮರೆದು
ಮತಿಗೆಟ್ಟು ಗತಿಯ ಹೋಗಾಡಿ ಕ್ರೀಡಿಸುವಲ್ಲಿ
ಅತಿಶಯದನುಭಾವವೆಂತರಿವಿರಣ್ಣ ೭

ಅಂಗಗುಣಗಳ ಬಿಟ್ಟು ಲಿಂಗದಲಿ ಮನವಿಟ್ಟು
ಕಂಗಳಲಿ ಕರುಣರಸ ಕೋಡಿವರೆದು
ಅಂಗನೆಯರಳುಪಿಂಗೆ ಮಯ್ಯೊಡ್ಡದಿರುವ ಜಡ
ಲಿಂಗಾಗಿಯನುಭವವನರಿವನಣ್ಣ ೮

ನಿತ್ಯಾನಿತ್ಯವ ತಿಳಿದು ಮರ್ತ್ಯದ ಸುಖವ ಮರೆದು
ಕರ್ತ ನಿಜಗುರುಶಾಂತಮಲ್ಲಯ್ಯನಾ
ಹಸ್ತದಲ್ಲಿ ಧರಿಸಿ ಗಿರಿಗುಹೆಗಳೊಳು ಚರಿಸುವ ವಿ
ರಕ್ತ ಲಿಂಗಾನುಭಾವವಾರಿಗಣ್ಣ ೯

೩೯

ರಾಗ : ವರಾಳಿ

ತೊಲಗಲಿಲ್ಲವೆ ಶರಣ
ತೊಲಗಲಿಲ್ಲವೆ ಮಾಯಾಬಲೆಗೆ ಸಿಲ್ಕಿ
ಹೊಲಬುಗೆಟ್ಟ ಜಡಜನಗಳ ಕಂಡು ಹೇಸಿ ॥ ಪಲ್ಲ

ಹೇಮ ಭೂಮಿ ಸತಿಯರೆಂಬ
ತಾಮಸದೊಳು ಸಿಲ್ಕಿ ನಿತ್ಯ
ವ್ಯೋಮಕೇಶನಿರವ ಮರೆದು
ಕಾಮಭೃತ್ಯರಿರವ ಕಂಡು ಹೇಸಿ ೧

ಅಶನ ವಸನ ವಿಷಯಕಾಗಿ
ಹುಸಿಯ ಶಾಸ್ತ್ರಗಳನು ಪಠಿಸಿ
ವಸುಧೆಯೊಳಗೆ ಪ್ರಾಜ್ಞರೆನಿಪ
ಪಶುಜೀವಾತ್ಮರುಗಳ ಕಂಡು ಹೇಸಿ ೨

ಅಷ್ಟಮದಗಳಿಂದ ಹಲವು
ಕಷ್ಟವಿಷಯದೊಳಗೆ ಸಿಲ್ಕಿ
ಶ್ರೇಷ್ಠರೆನಿಸಿಕೊಳುತಲಿರ್ಪ
ಭ್ರಷ್ಟರುಗಳ ಕಂಡು ಹೇಸಿ ೩

ಮಂಜಿನಂತೆ ತೋರಿ ಹರಿವ
ರಂಜನೆಯೊಳು ಸಿಲ್ಕಿಸದ ನಿ
ರಂಜನನನರಿಯದೆ ನರಕ
ಭುಂಜಿತರನು ಕಂಡು ಹೇಸಿ ೪

ತಮ್ಮ ತಾವರಿಯದೆ ಬರಿದೆಯ
ಗಮ್ಯವನ್ನು ನುಡಿದು ಪರ
ಬ್ರಹ್ಮವೆನಿಸಿಕೊಳುತಲಿರ್ಪ
ಕರ್ಮಿಗಳನು ಕಂಡು ಹೇಸಿ ೫

ಜೀವ ಪರಮರಿರ್ಪ ಉಭಯ
ತಾವನರಿದು ಲಿಂಗದಲ್ಲಿ
ಸಾವಧಾನಿಯಾಗದಿರ್ಪ
ಗಾವಿಲರನು ಕಂಡು ಹೇಸಿ ೬

ಸತ್ತು ಚಿತ್ತಾನಂದದಿಂದ
ಅತ್ತ ತಿಳಿದು ಶಾಂತನೊಳಗೆ
ಚಿತ್ತಶುದ್ಧವಾಗದಿರ್ಪ
ಮುಕ್ತಿಹೀನರುಗಳ ಕಂಡು ಹೇಸಿ ೭

೪೦

ರಾಗ : ಕಾಂಬೋಧಿ

ಮಾಸಾಳು ಬಂದ ಕಣೆ ನೋಡೆಲೆ ತಂಗಿ
ಮಾಸಾಳು ಬಂದ ಕಣೆ ಮನದಾಸೆ
ರೋಷವನಳಿದವಿರಳಾತ್ಮಕನಾದ ॥ ಪಲ್ಲ

ಆಟಮಟ ವ್ಯಾಪಾರ ಕುಟಿಲ ವಂಚನೆಯಿಂದ
ನಿಟಿಲಾಕ್ಷಮೃಡನ ವೇಷವ ಧರಿಸಿ
ಘಟವ ರಕ್ಷಿಪ ಜನರೆದೆಯ ಮೆಟ್ಟುತ ಪಟು
ಭಟ ವೀರಮಾಹೇಶ್ವರರುಗಳೆನಿಸುವ ೧

ಪರಧನ ಪರಸತಿ ಪರಹಿಂಸೆಗಳ ಮಾಡಿ
ಗುರುಲಿಂಗಜಂಗಮನೆನಿಸಿಕೊಂಡು
ಬೆರತುಕೊಂಡಿಹ ಪರಗುರಿಗಳ ಮೊಗನು
ಕೊರೆದು ಹಿಂಗೆಡಿಸಿ ಕನ್ನಡಿಯ ತೋರುತ ಚೆಲ್ವ ೨

ದಶವಾಯು ದಶ ಇಂದ್ರಿಯಂಗಳಿಂದಲಿ ಮನ
ಹಸಗೆಟ್ಟು ವಿಷಯದಿಕ್ಕಿಗೆ ಹರಿದು
ಒಸರುವ ಮೂತ್ರನಾಳದಿ ಬಿದ್ದು ಹೊರಳುವ
ಪಶುಜೀವಿಗಳು ಚರಲಿಂಗವಲ್ಲವನುತ ೩

ಲಿಂಗಾಂಗಸಮರಸದಿಂಗಿತವರಿಯದೆ
ಭಂಗಿತರುಗಳು ಜಂಗಮವೆನಿಸಿ
ಅಂಗಜನರಳಂಬಿಗೆ ಸಿಕ್ಕಿ ನರಳುವ
ಜಂಗುಳಿಮನುಜರು ಹಿಂಗದೆ ಜರಿವುತ ೪

ಅಷ್ಟಾವರಣ ಪಂಚಾಚಾರವರಿಯದೆ
ಭ್ರಷ್ಟರು ಲಿಂಗಜಂಗಮವೇಷವ
ತೊಟ್ಟರೆಯವನು ಜಂಗಮವಲ್ಲ ಪೂಜ್ಯಕ್ಕೆ
ನೆಟ್ಟನೆ ಹೊರಗೆಂದು ದಟ್ಟಿಸಿ ನುಡಿವುತ ೫

ಚರ ಸ್ವಯ ಪರವೀ ತ್ರಿವಿಧ ಲಕ್ಷಣಂಗಳ
ನೆರೆ ತಿಳಿಯದೆ ವೃಥಾ ಬರಿದೆ
ಪರಾತ್ಪರ ಶಿವಲಾಂಛನವೆನಿಸಿಕೊಳುತಲಿರ್ಪ
ದುರುಳಾತ್ಮರುಗಳ ತಾನೀಗ ಭೇದಿಸುತ ೬

ಆನೆಚೋಹವ ತೊಟ್ಟು ನಾಯಾಗಿ ಬಗಳುವ
ಹೀನಮಾನವರ ಧಿಕ್ಕರಿಸುತಲಿ
ಭಾನುಕೋಟಿ ದಿವ್ಯತೇಜಪ್ರಕಾಶನ
ನೂನ ಗುರುಶಾಂತಲಿಂಗದೊಲುಮೆಯಾದ ೭

೪೧

ರಾಗ : ಶಂಕರಾಭರಣ

ಹತ್ತುಸಾವಿರಶಾಸ್ತ್ರವನೋದಿ ಫಲವೇನು
ಚಿತ್ತ ಲಿಂಗವನಪ್ಪಿ ನೆಲೆಗೊಳ್ಳದನ್ನಕ್ಕ ॥ ಪಲ್ಲ

ಕಡುಚಪಳತೆಯಿಂದ ಬಹುಪಾತಕನಾಗಿ
ನುಡಿದಲ್ಲಿ ಫಲವೇನು ಬಯಲದ್ವೈತವ ೧

ಅಗಣಿತನದಿಯಿರೆ ಜಲವೆಲ್ಲ ಸರಿಯೆಂದು
ಅಗಳನೀರನೆ ಹೊಕ್ಕು ಮೊಗದೊಳೆವಂದದಿ ೨

ಒಡೆಯ ಶಾಂತೇಶ ನಿಮ್ಮನರಿಯದವನ ಭಕ್ತಿ ಗೇಣು
ಕಡಿಮೆಯುಗಳ ದಾಂಟಿ ಜಾರಿಬಿದ್ದಂದದಿ ೩

೪೨

ಲಿಂಗಾಂಗಸಂಗಸಮರಸವಿದೂಳಿ ಕೇಳಿ
ಲಿಂಗಾಂಗಸಂಗಸಮರಸವಿದು ॥ ಪಲ್ಲ

ಅಂಗ ಮನ ಪ್ರಾಣ ಗುರು ಲಿಂಗ ಚರವೆಂಬೀ ನರ
ಇಂಗಿತವನರಿದ ಶರಣರ ಸಂಗದನುಭವ
ದಂಗವನು ಹೆರೆಹಿಂಗದಿಪ್ಪುದು ತಾನೆ ಲಿಂಗಾಂಗ ೧

ತತ್ವಮಸಿಲಿಂಗದಂಗ ಮುಕ್ತಿ ಭಕ್ತಿ ಜ್ಞಾನ ಮೊಗ
ಸತ್ತು ಚಿತ್ತಾನಂದವೆ ನಿಜನಿತ್ಯವೆಂದರಿ
ವುತ್ತಲಾಚರಿಸುತ್ತಲಿಪ್ಪುದು ತಾನೆ ಲಿಂಗಾಂಗ ೨

ಅದ್ವೈತ ಭಿನ್ನಭಾವವಳಿದು ಶುದ್ಧ ಸಿದ್ಧ ಪ್ರ
ಸಿದ್ಧ ಸೌಖ್ಯ ಸಮೃದ್ಧಿ ತಾನಾಗಿರ್ದು ನಿಜಗುರುಸಿದ್ಧಶಾಂತನ
ಹೊದ್ದಿ ಕೃಪೆಯೊಳಗದ್ದಿ ಓಲಾಡುವುದೆ ಲಿಂಗಾಂಗ ೩

೪೩

ರಾಗ : ಧನ್ಯಾಸಿ

ಬಸವಣ್ಣನೆ ಗುರು ಚೆನ್ನಬಸವಣ್ಣನೆ ಲಿಂಗ
ಅಸಮಾಕ್ಷನಲ್ಲಮಪ್ರಭುವೆ ಜಂಗಮವಾಗಿ
ವಸುಧೆಗವತರಿಸಿ ಷಟ್ಸ್ಥಲವನುದ್ಧರಿಸಿದರ ಚರಣಸ್ಮರಣೆಯ ಮಾಡಿರೊ ॥ ಪಲ್ಲ

ಬಾಯೆಂಬ ಪ್ರಣವು ಭವವಾರಿಧಿಯ ದಾಂಟಿಪುದು
ಸಾಯೆಂಬ ಪ್ರಣವು ಸರ್ವಜ್ಞನೆಂದೆನಿಸುವದು

ವಾಯೆಂಬ ಪ್ರಣಮ ವಾಚಾತೀತನಿಗಮಕ್ಕೆ ನಿಲುಕದಪ್ರಮಾಣವು
ಸ್ವಾಯೆಂಬ ಪ್ರಣಮ ಸದ್ಭಕ್ತಿಯನು ತೋರುವದು
ರಾಯೆಂಬ ಪ್ರಣಮ ನಿಜಪದದೊಳೊಂದಿಪ್ಪುದು
ದಾಯದಿಂ ಬಸವೇಶ್ವರಾಮೃತನಾಮವನು ಸ್ಮರಿಸಿ ಕೃತಕೃತ್ಯರಹರು ೧

ಆಯೆಂಬ ಪ್ರಣಮ ಅನವರತ ಭಕ್ತಿಯ ಬೀಜ
ಊಯೆಂಬ ಪ್ರಣಮ ಜ್ಞಾನದ ವೃಕ್ಷದಂಕುರವು
ಮಾಯೆಂಬ ಪ್ರಣಮ ವೈರಾಗ್ಯ ಮುಕ್ತಿಯ ಬೆಳೆಯ ಫಳರಸವು ತೊಟ್ಟಿಡುವದು
ಪ್ರಾಯೆಂಬ ಪ್ರಣಮ ಪರಲೋಕ ಸೋಪನವಹುದು
ಭೂಯೆಂಬ ಪ್ರಣಮ ಭೂತೇಶನೊಡಗೂಡುವದು
ಮಾಯಾಮದ ಲವಿತ್ರನಲ್ಲಮಪ್ರಭುನಾಮಸ್ಮರಣೆ ನಿಜಪದವಿ.... ೨

ನಕಾರಗಳೆಂಬ [ಅ] ದ್ವಿಪ್ರಣಮವಿಧಿವಶದ
ಲಿಖಿತವನು ತೊಡೆದು ಗುರುಲಿಖಿತವೆಂದೆನಿಸುವದು
ಬಕಸಕಾರಗಳೆಂಬ ದ್ವಿಪ್ರಣಮ ನಿತ್ಯ ಗುರುಲಿಂಗಜಂಗಮವೆನಿಪುದು
ನಕಣಕಾರಗಳೆಂಬ ದ್ವಿಪ್ರಣಮ ಪಾದೋದಕ
ಸುಖಪ್ರಸಾದವನಿತ್ತು ಸಲಹುವದು ನಂಬಿರಲು
ಮುಕುರವೇತಕೆ ಕರದ ಕಂಕಣಕೆ ಚೆನ್ನಬಸವಣ್ಣ ಪರಬ್ರಹ್ಮದೊಡಲು ೩

ಚೆನ್ನಬಸವೇಶ ದಂಡಾಧೀಶ ಪ್ರಭುರಾಯ
ಉನ್ನಂತ ರೇಣುಕಾಚಾರ್ಯ ಮಡಿವಾಳಯ್ಯ
ಕಿನ್ನರಯ್ಯನು ಸಿದ್ಧರಾಮೇಶ ಹಡಪದಪ್ಪಣ್ಣ ಸೊಡ್ಡಳದೇವರು
ಇನ್ನಿವರ ಮುಖ್ಯರಾದೇಳ್ನೂರು ಎಪ್ಪತ್ತು
ಸನ್ನುತರ ಚರಣಮಂ ನೆನಹಿನಲಿ ನೆಲೆಗೊಂಡು
ಜನ್ಮ ಜರೆ ಮರಣ ಭವ ಕಾಮ ಕಾಲರ ಗೆಲಿದ ಶರಣರಿಗೆ ಶರಣೆನ್ನಿರೊ ೪

ಇಂತಪ್ಪೊಡೊಸೆದು ತೇರಸರು ದಶಗಣರು
ಮುಂತಾದ ಅರುವತ್ತುಮೂವರಂಘ್ರಿಯ ಕರುಣ
ಸಂತತಂ ಸಲಿಲದೊಳಗಾಳುತ್ತ ಪಂಚಾಕ್ಷರೋಂಕಾರ ಪ್ರಣಮತ್ರಯಂ
ಮಂತ್ರಸ್ಮರಣೆಗಳಿಂ ಭಸ್ಮಾಕ್ಷಮಾಲೆಗಳ
ನಂತು ಸರ್ವಾಂಗದೊಳು ಧರಿಸುತ್ತ ಕರರುಹದ
.......ಸದ್ಗುರುವರನ ತ್ರಿಕಾಲದೊಳು ಭಜಿಸೆ ಶಾಂತ ಮುಕ್ತಿಯನೀವನು ೫

## ಇಷ್ಟತ್ರೈದುಲೀಲಾ ಚಾರಿತ್ರದ ಕೋಲಪದಗಳು

೪೪

ಶ್ರೀಗುರುಶಂಕರ ಶ್ರೀಗಿರಿಜೇಶ್ವರ
ಶ್ರೀಗಣನಾಥಜನಕನೆ ಕೋಲೆ
ಶ್ರೀ ಗಣನಾಥ ಜನಕನೆ ಶಾಂತೇಶ
ರಾಗವಿದೂರ ಶರಣಾಗು ಕೋಲೆ ೧

ಸತ್ತು ಹುಟ್ಟದ ಗಂಡಗಿತ್ತು ತನ್ನರೆಮೈಯ
ಮುತ್ತೈದೆತನವ ಪಡೆದವಳೆ ಕೋಲೆ ತ್ರಿಗುಣ
ಮುತ್ತೈದೆತನವ ಪಡೆದ ಪಾರ್ವತಿತಾಯಿ
ಹೆತ್ತಪ್ಪೆ ಮತಿಯ ಕರುಣಿಸು ಕೋಲೆ ೨

ಈರೇಳುಲೋಕವನಾಳ್ದು ಸಲಹುವ
ಕಾರುಣ್ಯನಿಧಿಯೆ ನಂದೀಶ ಕೋಲೆ
ಕಾರುಣ್ಯನಿಧಿಯೆ ನಂದೀಶ ಭಕ್ತಿಯ
ನೋರಂತೆ ಕೊಟ್ಟು ಸಲಹಯ್ಯ ಕೋಲೆ ೩

ಗಂಡರ ಗಂಡ ಪ್ರಚಂಡ ಶರಭರಾಯ
ಲಂಡ ದಾನವರ ತಲೆಗೊಯ್ದು ಕೋಲೆ
ಲಂಡದಾನವರ ತಲೆಗೊಯ್ದು ವೀರ ಮಾ
(ರ್ತಾಂಡ) ವೀರೇಶ ದಯವಾಗು ಕೋಲೆ ೪

ಅಂಗವಿಕಾರವ ಭೋಗಿಸಿಯೆ ಪರಶಿವ
ನಂಗನೆಯೊಡನೆ ಜಯವಾಂತ ಕೋಲೆ
ಅಂಗನೆಯೊಡನೆ ಜಯವಾಂತ ಭೃಂಗೀಶ
ಮಂಗಳಮತಿಯನೊದವಿಸು ಕೋಲೆ ೫

ಗಾದೆಯ ಮಾತಲ್ಲ ವೇದ-ಸಮ್ಮತವಿದು
ಮೂದೇವರುಗಳ ಒಡೆಯನ ಕೋಲೆ
ಮೂದೇವರುಗಳ ಒಡೆಯನ ಲೀಲೆಯ
ನೋದಿ ಕೇಳ್ದರಿಗೆ ನಿಜಮೋಕ್ಷ ಕೋಲೆ ೬

ಹಲವು ಮಾತುಗಳಾಡಿ ಗಲಭೆಯ ಮಾಡದೆ
ಒಲಿದೊಂದು ಬೆಡಗನಾಲಿಸಿ ಕೋಲೆ
ಒಲಿದೊಂದು ಬೆಡಗನಾಲಿಸಿದವರಿಗೆ
ಮಲಹರನೊಲವು ನಿಜವಾದೆ ಕೋಲೆ ೭

ನಾಡಗಾದೆಯ ಮಾತ ಜೋಡಿಸಿ ಬೆಡಗೆಂದು
ಪಾಡುವ ಪರಿಯು ತಾನಲ್ಲ ಕೋಲೆ
ಪಾಡುವ ಪರಿಯು ತಾನಲ್ಲ ಶಿವನ ಕೊಂ
ಡಾಡುವೆನೊಂದು ಪರಿಯಿಂದ ಕೋಲೆ ೮

ಚಿತ್ರಪಲ್ಲ ವಾಗ್ವಜೀವಗದುತ್ತಮ ಪರಿಯುಳ
ಮೊತ್ತವು ಕೇಳಿ ನಲವಿಂದ ಕೋಲೆ
ಮೊತ್ತವು ಕೇಳಿ ನಲವಿಂದ ಮಂಗಳ
ವೆತ್ತಿಹ ಕೋಲುಪದಗಳ ಕೋಲೆ ೯

ಕೇಳಿರದ ಖೂಳರ ಮೇಳವನೊಲ್ಲೆನು
ಕೇಳುವೆನೆಂದು ಬಗೆವಂದ ಕೋಲೆ
ಕೇಳುವೆನೆಂದು ಬಗೆವಂದ ಸುಜನರಿಂ
ಗೇಳೆಂಟು ಬಾರಿ ಶರಣೆಂಬೆ ಕೋಲೆ ೧೦

ತಿಳಿವ ಜಾಣರಿಗದು ಸುಲಿದ ಬಾಳೆಯಹಣ್ಣು
ತಿಳಿಯದೆಂದಿದನು ಬಿಡದೊಡೆ ಕೋಲೆ
ತಿಳಿಯದೆಂದಿದನು ಬಿಡದೊಡೆ ತೆಂಗಿನ
ಒಲುಮೆಯ ಫಲದ ಸವಿಯಾದ ಕೋಲೆ ೧೧

ಕಾವನ ಕೋಲಾಟ ಧಾವತಿಗೊಳಿಸಿತ್ತು
ದೇವ ದಾನವರ ಮನುಜರ ಕೋಲೆ
ದೇವ ದಾನವರ ಮನುಜರ ಸುಜನರು
ಭಾವಿಸಿ ನೋಡೆ ತಿಳಿವುದು ಕೋಲೆ ೧೨

ಆ ಕೋಲಿನಾಟದಿ ಕಾಕಾದನಜನಿಂದ್ರ
[ನಾ]ಕಾರವಲ್ಲವು ಭಗವಾದ ಕೋಲೆ
[ಆಕಾರ]ವಲ್ಲ ಭಗವಾದ ಮಾಧವ
ನೊಕು ಮುಗ್ಗಾದನನುದಿನ ಕೋಲೆ ೧೩

ಋಷಿಜನರೆಲ್ಲರು ನಸಿದು ನುಗ್ಗಾದರು
ಮಸಿವಣ್ಣನಾದ ಚಂದ್ರಮ ಕೋಲೆ
ಮಸಿವಣ್ಣನಾದ ಚಂದ್ರಮ ಕೋಲಾಟ
ದೆಸಕವನೇನನುಸುರುವೆ ಕೋಲೆ ೧೪

ದನುಜರು ಮನುಜರು ಮನಸಿಜರಾಯನ
ದನಗಾವ ಗಂಡುದೊತ್ತಿರ ಕೋಲೆ
ದನಗಾವ ಗಂಡುದೊತ್ತಿರ ಮಾಡಿದ
ನನೆಗೋಲಿನಳವನೇನೆಂಬೆ ಕೋಲೆ ೧೫

...................ವಳಿವಡೆ
ಶ್ರೀಮಹಾದೇವನಡಿಯನು ಕೋಲೆ
ಶ್ರೀ ಮಹಾದೇವನಡಿಯನು ಪಾಡಿರೆ
ಭೂಮಿಯ ಭಕ್ತಜನರೆಲ್ಲ ಕೋಲೆ ೧೬

ಕಾಕುತನವ ಬಿಟ್ಟು ಏಕಚಿತ್ತದಿ ಕೇಳಿ
ಶ್ರೀಕರ ಶಿವನ ಲೀಲೆಯ ಕೋಲೆ
ಶ್ರೀಕರ ಶಿವನ ಲೀಲೆಯ ವೇಷಗನ
ನೇಕ ಸಂಪದ ಭೂಮಿಯು ನಿಮಗಾದೆ ಕೋಲೆ ೧೭

ಸುಲಿಪಲ್ಲ ಸೊಬಗಿನ ಕಳಶಕುಚದ ನೀರೆ
ಎಳೆನಗೆಮೊಗವನಗಲದೆ ಕೋಲೆ
ಎಳೆನಗೆಮೊಗವನಗಲದೆ ನಿನ್ನ ಕಂಗಳ
..............ಳಗಿತ್ತ ಪಸರಿಸು ಕೋಲೆ ೧೮

ಕೋಗಿಲದನಿಯಂತೆ ರಾಗದಿ ಪಾಡುತ
ಸೋಗೆನವಿಲಂತೆ ನಲಿವುತ ಕೋಲೆ
ಸೋಗೆನವಿಲಂತೆ ನಲಿವುತ ಎಳೆವಳ್ಳಿ
ಬಾಗುವಂದದಲಿ ಬಳುಕುತ ಕೋಲೆ ೧೯

ಬೆಡಗ ಬಣ್ಣಿಸಬಲ್ಲ ಮಡದಿರನ್ನದ ಕೋಲೆ
ಪಿಡಿದೆನ್ನ ಕೂಡೆ ದನಿಗೊಡೆ ಕೋಲೆ
ಪಿಡಿದೆನ್ನ ಕೂಡೆ ದನಿಗೊಟ್ಟು ಕೇಳುವ
ಕಡುಜಾಣರೆಲ್ಲ ನಲಿವಂತೆ ಕೋಲೆ ೨೦

ನೋಡೆನ್ನನನುವಾಗೆ ಕೊಡೆನ್ನ ದನಿಯೊಳು
ನೋಡುವರೆಲ್ಲ ನಲಿವಂತೆ ಕೋಲೆ
ನೋಡುವರೆಲ್ಲ ನಲಿವಂತೆ ಬೆಡಗಿಲಿ
ಪಾಡಿರೆ ಕೋಲಪದಗಳ ಕೋಲೆ ೨೧

ಸುಗುಣನಾರಿಯರೆನ್ನನಗಲದೆ ಕೋಲೆನ್ನಿ
ಬಗೆ ಬಗೆ ದನಿಯನನುಮಾಡಿ ಕೋಲೆ
ಬಗೆ ಬಗೆ ದನಿಯನನುಮಾಡಿ ಕೇಳುವ
ಸುಗುಣರ ಮನಕೆ ಮುದವಾಗಿ ಕೋಲೆ ೨೨

ಆವನ ಚಾರಿತ್ರ ಪಾವನಲೀಲೆಯಿಂ
ದಾವಾಗ ನುತಿಸುತಿಹ ವೇದದ ಕೋಲೆ
ಆವಾಗ ನುತಿಸುತಿಹ ವೇದವಚನವ
ಭಾವಿಸಿ ಪಾಡಿ ಶರಣರು ಕೋಲೆ ೨೩

ಬೆಡಗಿಂದ ಜಗವನು ಪಡೆದು ಪಾಲಿಸುವನ
ಬಡಮತಿಯಿಂದೆ ಪಾಡುವೆ ಕೋಲೆ
ಬಡಮತಿಯಿಂದೆ ಪಾಡುವೆನಿಂತಿದೆ
ಬೆಡಗೆಂದು ಕೇಳಿ ಸುಜನರು ಕೋಲೆ ೨೪

ಉಡುಗಳು ಮುತ್ತಿದ ಕಡಲ ತಡಿಯ ಮೇಲೆ
ಎಡೆಯೊಳಗೆಳೆಯ ಬಾಲಕ ಕೋಲೆ
ಎಡೆಯೊಳಗೆಳೆಯ ಬಾಲಕನೊಪ್ಪಿಹ
ಬೆಡಗ ಬಣ್ಣಿಸುವುದಸಿಯಳೆ ಕೋಲೆ ೨೫

ಘೂರಿಜೆಯ ಗಂಗಾತೀರದೊಳೆಸೆವ ಕು
ಮಾರಚಂದ್ರಮನ ಬಳಸಿಲಿ ಕೋಲೆ
ಮಾರಚಂದ್ರಮನ ಬಳಸಿಲಿ ತೋರುವ
ಕೋರೆಗಳೊಪ್ಪುವೆಲೆ ಬಾಲೆ ಕೋಲೆ ೨೬

ಜಳ....ಳೆ ಗಾಲದವಗೆ ಪೆತ್ತ....ಎಂಡನು
ಎಳೆಯಂ ಹೆಂಗುಸು ನಲವಿಂದ ಕೋಲೆ
ಎಳೆಯ ಹೆಂಗುಸು ನಲವಿಂದಲಿ ಬೆಡಗ
ತಿಳಿದು ಕನ್ನಡಿಸೆ ತರಳಾಕ್ಷಿ ೨೭

ವಿವಿಧ ಬ್ರಹ್ಮಾಂಡದುದ್ಭವಕೆಲ್ಲ ತವರೂರು
ಶಿವನಾದಿಶಕ್ತಿಗಳ ಕೂಟಕೆ ಕೋಲೆ
ಶಿವನಾದಿಶಕ್ತಿಗಳ ಕೂಟ ಬೆಡಗಿನ
ಸವಿಗೇಳಿಸೆನ್ನ ಮನದನ್ನೆ ೩೮

ಹದಿನಾಲ್ಕು ಲೋಕದ....ದುಕಿನವನಿಗೊಂದು
ಮುದಿಯೆತ್ತು ಮುಖ್ಯವದನೇರಿ ಕೋಲೆ
ಮುದಿಯೆತ್ತು ಮುಖ್ಯವದನೇರಿ ತಾನಾರ
ನದರಿಲ್ಲದಿರುವನಸಿಯಳೆ ೩೯

ಎಸಳುಗಂಗಳ ನೀರೆ ಬಸವರಾಜನನೇರಿ
ಪಶುಪತಿ ಪೆಸರು.......... *
............ ——————
ಈ ಬೆಡಗ ನೆಟ್ಟದಪನೆ ತಿಳಿಯಲೊರೆ ಪೆಣ್ಣೆ ೪೦

ದುರುಳ ದಾನವ ಜಲಂಧರನ ತಲೆಯು ಕಾಲ
ಗೆರೆಯು ಚಕ್ರದೊಳು ತರಿದಿಕ್ಕೆ ಕೋಲೆ
ಗೆರೆಯು ಚಕ್ರದೊಳು ತರಿದಿಕ್ಕೆ
ಕರದೆಸೆದ ನಾಯಕರತ್ನವೆನಿಸಿದ ಕೋಲೆ ೪೧

ಹಿರಿಯತನದ ಹೆಮ್ಮೆ ಹರಿಹಂಚು ತಾನಾಗಿ
ತಿರಿವರದೇನು ಪರಿ ಹೇಳೆ ಕೋಲೆ
ತಿರಿವರದೇನು ಪರಿ ಹೇಳೆ ಕೋವಿದ
ರರೆಸಿ ಬಿನ್ನಣದ ಬೆಡಗಿದು ೪೨

ಹುಸಿಯಿಂದೆ ಬೊಮ್ಮನ ಹಸಗೆಟ್ಟು ತಲೆಹೋಗಿ
ವಸುಧೆಯೊಳೆಲ್ಲ ತಿರಿವದು ಕೋಲೆ
ವಸುಧೆಯೊಳೆಲ್ಲ ತಿರಿವದು ಹುಸಿಯದು
ಬಸಿದಪನೆನ್ನ ಮನೆದೈವ ಕೋಲೆ ೪೩

————

* ಇಲ್ಲಿಂದ ಮುಂದೆ ಒಂದು ಪತ್ರವಿಲ್ಲ.

ಹೋತಿನ ತಲೆ ಪಿರಿಯಾತನಿಗಿರ್ಪುದ ಕಂಡೆ
ಆತನ ರೀತಿ ವಿಪರೀತ ಕೋಲೆ
ಆತನ ರೀತಿ ವಿಪರೀತ ಬೆಡಗಿನ
ಸೂತವನರಿದು ನುಡಿಯಕ್ಕ ಕೋಲೆ ೪೭

ನಿಂದಕ ದಕ್ಷಂಗೆ ಬಂದುದು ಕುರಿದಲೆ
ಸಂದೇಹವೇಕೆ ತಿಳಿಯಕ್ಕ ಕೋಲೆ
ಸಂದೇಹವೇಕೆ ತಿಳಿಯಕ್ಕ ಶಿವನಿಂದೆ
ಇಂದವಸಂದಗೆಡದಿಹ ಕೋಲೆ ೪೮

ಹತ್ತೆಂಟು ಭವದಲಿ ಪೆತ್ತವನೆಮಿಗಳ
ಹೊತ್ತು ಬಾಳುವದನ ಕಂಡೆ ಕೋಲೆ
ಹೊತ್ತು ಬಾಳುವದನ ಕಂಡೆನೀ ಬೆಡಗ
ಬಿತ್ತರಿಸಬಲ್ಲರೊಲಿವಂತೆ ಕೋಲೆ ೪೯

ಹಲವು ಜನ್ಮದೊಳಳಿದಲರಂಬನಂತ್ಯಪ
ಎಲುಮಾಲೆಗಳನು ತಳೆದನು ಕೋಲೆ
ಎಲುಮಾಲೆಗಳನು ತಳೆದನು ಪರಶಿವ
ನೊಲುಮೆಯುಳ್ಳವರ ಫಲವಕ್ಕ ಕೋಲೆ ೫೦

ಲೋಕದೆ ತವರೂರು ಸಾಕಾರವಾಗಿದೆ
ನಾ ಕಂಡೆನೊಂದೆ ನಿಲವಿನಲಿ ಕೋಲೆ
ನಾ ಕಂಡೆನೊಂದೆ ನಿಲವಿನಲೀ ಬೆಡಗ ವಿ
ವೇಕದೊಳುಸುರೆ ಬಿಸಜಾಕ್ಷಿ ಕೋಲೆ ೫೧

ತಂದೆ ತಾಯಿಗಳಿರ್ವರೊಂದಂಗದೊಳಗಿರೆ
ಸುಂದರಿಯರ್ಧನಾರೀಶ ಕೋಲೆ
ಸುಂದರಿಯರ್ಧನಾರೀಶ್ವರಮೂರ್ತಿಗೆ
ವಂದಿಸಲಿಷ್ಟ ಫಲಿಸಿತೀ ಕೋಲೆ ೫೨

ನೀತಿ[ಯನು]ಳಿದ ದುರ್ವಿನೀತರ ಕೊಲ್ಲುವ
ದಾತನ ಪೆಸರನೊರೆಯೆನಗೆ ಕೋಲೆ
ದಾತನ ಪೆಸರನೊರೆಯೆನಗೆ ಪೆಂಗಳ
ಜಾತಿಯು ನೊಸಲ ತಿಲಕವೆ ಕೋಲೆ ೫೩

ತನ್ನ ಮಗಳ ಪಿಡಿವನ್ನಯೀ ಬೊಮ್ಮನ
ಬೆನ್ನ ಬಿಡದೆಚ್ಚು ಕೆಡಪಿದ ಕೋಲೆ
ಬೆನ್ನ ಬಿಡದೆಚ್ಚು ಕೆಡಪಿದ ಕಿರಾತ
ಸನ್ನುತ ಲೀಲೆ ಶಿವನಿಗೆ ಕೋಲೆ ೫೪

ದಾನಿಗಳೆಸಗುವ ದಾನದೆಡೆಗೆ ಹೋಗಿ
ಹಾನಿಯ ಮಾಡುವರಿಗಾವ ಕೋಲೆ
ಹಾನಿಯ ಮಾಡುವರಿಗಾವ ಗತಿಯುದ
ಮಾನಿನಿ ಮಾಜದುಸುರೆನಗೆ ಕೋಲೆ ೫೫

ಬಲಿ ದಾನ ಕಂಟಕರೆಲೆ ಶುಕ್ರ ವಾಮನ
ಒಲುಮೆಯ ಕಣ್ಣು ನಿಡುಬೆನ್ನು ಕೋಲೆ
ಒಲುಮೆಯ ಕಣ್ಣು ನಿಡುಬೆನ್ನಿನೆಲು ಪೋದು
ದಿಳೆಯೆಲ್ಲ ಬಲ್ಲುದೆಲೆ ಕಾಂತೆ ಕೋಲೆ ೫೬

ತಂದೆಯ ತಲೆಗೊಯ್ದು ಕಂದ ನೋಡತಿಶಯಾ
ನಂದ ಸಂಪದವ ಪಡೆದನು ಕೋಲೆ
ನಂದ ಸಂಪದವ ಪಡೆದನು ಬೆಡಗಿನ
ಚಂದವ ಚದುರೆ ತಿಳಿದುಸುರೆ ಕೋಲೆ ೫೭

ಶೂಲಿ [ಪೂ]ಜೆಯ ಕಾಲಿಲೊದ್ದಯ್ಯನ
ಬೀಳ ಹೊಡೆದಿಕ್ಕಿ ಚಂಡೇಶ ಕೋಲೆ
ಬೀಳ ಹೊಡೆದಿಕ್ಕಿ ಚಂಡೇಶ ಪಡೆದನು
ಕೈಲಾಸಪತಿಯ ಕರುಣವ ಕೋಲೆ ೫೮

ಹಾಲುಂಡರಳಿದರು ಗರಳಕೂಟವನುಂಡ
ನೇಳಿಗೆ ಹೆಚ್ಚಿ ಹಿರಿದಾದೆ ಕೋಲೆ
ಏಳಿಗೆ ಹೆಚ್ಚಿ ಹಿರಿದಾದೆ ಈ ಬೆಡಗ
ಹೇಳೆ ಹೆಣ್ಣುಗಳ ತಲೆರನ್ನ ಕೋಲೆ ೫೯

ಎಲ್ಲಮರರೊಲ್ದು ಬಲ್ಲಿದ ವಿಷವುಂಡು
ಮಲ್ಲಿಕಾರ್ಜುನನು ಜಯಿಸಿದ ಕೋಲೆ
ಮಲ್ಲಿಕಾರ್ಜುನನು ಜಯಿಸಿದ ಪರಹಿತ
ಉಳ್ಳವರಿಗುಂಟೆ ಅಪಜಯ ಕೋಲೆ ೬೦

ಪೂಗಣ್ಣೆಗೊಂದನುವಾಗಿ ಪಾಟುಂಬಳೆ
ಸಾಗಿ ಕೊಲ್ಲುವದು ಪಗೆಗಳ ಕೋಲೆ
ಸಾಗಿ ಕೊಲ್ಲುವದು ಪಗೆಗಳ ಪುಸಿಯಲ್ಲ
ಬೇಗದೊಳುಸುರೆ ಗುರುಶಿಟ್ಟಿ ಕೋಲೆ ೭೧

ಕಮಲನೇತ್ರಗೆ ಮೆಚ್ಚಿ ಸುಮತಿ ಚಕ್ರವನಿತ್ತ
ನಮಮ ಬೋಳಿಯರ ಬಲ್ಲಹ ಕೋಲೆ
ಅಮಮ ಬೋಳಿಯರ ಬಲ್ಲಹನದರ ವಿ
ಕ್ರಮವ ಕೇಳ್ದಟಿಯ ಕಾಮಾಕ್ಷಿ ಕೋಲೆ ೭೨

ಮತಿವಂತ ಮಗನಿಗೆ ಸತಿಯು ತಾ ಮುನ್ನಿಲ್ಲ
ಪ್ರತಿಗಾಣೆನವಗೆ ಸವಿಬಾಯಿ ಕೋಲೆ
ಪ್ರತಿಗಾಣೆನವಗೆ ಸವಿಬಾಯಿ ಬೆಡಗಿನ
ಮತಿವಂತೆ ಬೆಡಗನೊರೆಯೆನಗೆ ಕೋಲೆ ೭೩

ಬುದ್ಧಿವಂತರ ಕುಲವಿದ್ಯಂಗಳಧಿದೈವ
ಸಿದ್ಧಿವಿನಾಯಕನವನಕ್ಕ ಕೋಲೆ
ಸಿದ್ಧಿವಿನಾಯಕನವನ ಕರುಣದಿಂದ
ಉದ್ಧರಿಸಿದೆನೀ ಬೆಡಗನುವಾಗಿ ಕೋಲೆ ೭೪

ಈರೈದು ಕಣ್ಣುಳ್ಳ ಭಾರಿಯ ಭೂತಕ್ಕೆ
ಈರಾರು ಕಣ್ಣ ಮಗುವಾದೆ ಕೋಲೆ
ಈರಾರು ಕಣ್ಣ ಮಗುವಾಗಿ ದಿವಿಜರ
ವಾರಿಯ ನುಂಗಿತುಸುರೆನಗೆ ಕೋಲೆ ೭೫

ಸುಗುಣೆ ಕೇಳೆಲೆವೈದುಮೊಗವುಳ್ಳ ದೇವನಿ
ಗೊಗೆದ ಷಣ್ಮುಖದ ಕುವರನು ಕೋಲೆ
ಒಗೆದ ಷಣ್ಮುಖದ ಕುವರನು ತೋರದ
ವಿಗಡ ರಕ್ಕಸನ ಪಗೆ ತಾನೆ ಕೋಲೆ ೭೬

ಪುರುಷಾರ್ಥ ನಾಲ್ಕಕ್ಕೆ ಪಿರಿದಾವುದದರೊಳು
ಒರೆಯೆನಗದರ ವಿವರವ ಕೋಲೆ
ಒರೆಯೆನಗದರ ವಿವರವ ಕೇಳುವ
ಪಿರಿಯರು ಹರುಷದಳೆವಂತೆ ಕೋಲೆ ೭೭

ಧರ್ಮರೂಪನು ಮಹಾಧರ್ಮಿ ವೃಷಭರಾಜ
ಪೆರ್ಮೆಯೊಳೊಂದುಪಾದವ ಕೋಲೆ
ಪೆರ್ಮೆಯೊಳೊಂದುಪಾದವ ತೋರುವ
ಕೂರ್ಮೆಗೆ ಮೋಕ್ಷ ಘನವಕ್ಕ ಕೋಲೆ ೭೮

ವಂದಿಸಿದವರಿಗೆ ಮುಂದುವರಿವ ಭವ
ಬಂಧವ ಪರಿವ ಕರುಣೆಯು ಕೋಲೆ
ಬಂಧವ ಪರಿವ ಕರುಣೆಯು ನಿಜಮೂರ್ತಿ
ಯಂದವ........... ಕೋಲೆ ೭೯

...............
ಮೋಕ್ಷದು ಪರುವದಂ....
........ತೋರುವದಂದು
ದಕ್ಷಿಣಾವರಮೂರ್ತಿ ಜಗಕೆ ಗುರುವಕ್ಕ ಕೋಲೆ ೭೦

ಮಾಡದ ಕರ್ಮವ ಜೋಡಿಸಿದವರಿಗೆ
ರೂಢಿಯೊಳಾವ ಗತಿ ಹೇಳೆ ಕೋಲೆ
ರೂಢಿಯೊಳಾವ ಗತಿ ಹೇಳೆ ಈ ಬೆಡಗ
ನಾಡಿ ತೋರೆನಗೆ ನಯವಾಗಿ ಕೋಲೆ ೭೧

ಪುಸಿಯು ಗೋಹತ್ಯವ ಋಷಿಗಳು ಕಲ್ಪಿಸಿ
ಮಸಿವಣ್ಣವಾದರನುದಿನ ಕೋಲೆ
ಮಸಿವಣ್ಣವಾದರನುದಿನ ಗೌತಮ
ಗಸಮಾಕ್ಷ ಮೋ[ಕ್ಷವು] ನಿಜವಾದೆ ಕೋಲೆ ೭೨

ಗೆಲ್ಲ ಸೋಲದ ಮಾತು ಬಲ್ಲವರಿಗನುಚಿತ
ಎಲ್ಲರಂತಲ್ಲದನುಪಮ ಕೋಲೆ
ಎಲ್ಲರಂತಲ್ಲದನುಪಮನಂಗವ
ದೆಲ್ಲಿಹುದೆನಗೆ ತಿಳಿದುಸುರೆ ಕೋಲೆ ೭೩

ಮುಕ್ಕಳಾಟಿಕೆಯಿಂದೆ ಸೊಕ್ಕಿದ ಹರಿಯಜ
ರುಕ್ಕ ಮಾಣಿಸಿದ ಉರುಲಿಂಗ ಕೋಲೆ
ಉಕ್ಕ ಮಾಣಿಸಿದ ಉರುಲಿಂಗ ತಾ ನಡೆ
ದಿಕ್ಕೆಂಟರೊಳಗೆ ಪರಿಪೂರ್ಣ ಕೋಲೆ ೭೪

ಏರಿಯು ಕೆಳಗೊಂದು ತಳತಳ ಜ್ಯೋತಿಯು
ಸಾರಿಯು ಚಂದ್ರರವಿಗಳ ಕೋಲೆ
ಸಾರಿಯು ಚಂದ್ರರವಿಗಳ ಬೆಳಗಿನ
ಲೀರೇಳು ಲೋಕ ಬೆಳಗದೇ ಕೋಲೆ ೭೫

ಶಿರದ ಗಂಗೆಯು ತಳೆದಿರುವಗ್ನಿನಯನಕೆ
ನೆರವಾದ ಸೂರ್ಯಶಶಿನೇತ್ರ ಕೋಲೆ
ನೆರವಾದ ಸೂರ್ಯ ಶಶಿನೇತ್ರ ಕಾಂತಿಯೇಂ
ಪರಿಪೂರ್ಣವಖಿಳ ಜಗದಲ್ಲಿ ಕೋಲೆ ೭೬

ಇಡುವ ತಿಲಕವಾವುದುಡುವ ವಸ್ತ್ರವದೇನು
ತೊಡುವ ಭೂಷಣದ ಪೆಸರೇನು ಕೋಲೆ
ತೊಡುವ ಭೂಷಣದ ಪೆಸರೇನು ಶಿವ ಮೆಚ್ಚಿ
ಕೊಡುವನದೇನು ಪೇಳೆನಗೆ ಕೋಲೆ ೭೭

ಇಡುವದು [ಬೂದಿ]ಯು ಉಡುವದೆ ಪುಲಿಸವ್ಮು
ತೊಡುವದು ಪಾಪುಗಳ ಪಚ್ಚ ಕೋಲೆ
ತೊಡುವದು ಪಾವುಗಳ ಪಚ್ಚ ಕೊಡುವದು
ಬಿಡುಗಣ್ಣರೊಡೆಯನೈಸಿರಿ ಕೋಲೆ ೭೮

ಗಂಡರೆಲ್ಲೊಬ್ಬಗೆ ಹೆಂಡರಾದರು ಕೇಳು
ಮಂಡಲದೊಳಗೆ ವಿಪರೀತ ಕೋಲೆ
ಮಂಡಲದೊಳಗೆ ವಿಪರೀತ ಬೆಡಗಿದು
ಪುಂಡರೀಕಾಕ್ಷಿ ತಿಳಿದುಸುರೆ ಕೋಲೆ ೭೯

ವಿುಕ್ಕ ಮಾತೇನಮ್ಮ ಮಕ್ಕಳಾಟಿಕೆಯಲ್ಲ
ಮುಕ್ಕಣ್ಣ ಜಗದ ಜನಕೆಲ್ಲ ಕೋಲೆ
ಮುಕ್ಕಣ್ಣ ಜಗದ ಜನಕೆಲ್ಲ ಗಂಡನು
ಮುಕ್ಕಣ್ಣನಕ್ಕ ಪುಸಿಯಲ್ಲ ಕೋಲೆ ೮೦

ಮೂಜಗವನೊಳಕೊಂಡ ಸೋಜಿಗದ ವೃಕ್ಷದಾ
ಬೀಜವನಿಡಿದು ಸೆರೆವಿರ ಕೋಲೆ
ಬೀಜವ ಪಿಡಿದು ಸೆರೆವಿರ ನೆರೆಯಲು
ಓಜೆಯು ಪಟ್ಟಕ್ಕೆ ಸರಿಗಾಣೆ ಕೋಲೆ ೮೧

ಜಗದ [ಬೀ]ಜವು ಸಗುಣಿಷ್ಟಲಿಂಗವು
ಬಗೆಯಲೊಕ್ಕುಡಿತೆ ಜಲಕೊಲಿದು ಕೋಲೆ
ಬಗೆಯಲೊಕ್ಕುಡಿತೆ ಜಲಕೊಲಿದು ಕೊಡ
ಲಗಣಿತ ಪುಣ್ಯಫಲವನು ಕೋಲೆ ೮೨

ಪರಶಿವಲೀಲೆಯ ಪರಮಚಾರಿತ್ರವ
ಬರೆದೋದಿ ಕೇಳಿದವರಿಗೆ ಕೋಲೆ
ಬರೆದೋದಿ ಕೇಳಿದವರಿಗೆ ಶಂಕರ
ನಿರದೀವನಿಷ್ಟಪದವಿಯ ಕೋಲೆ ೮೩

ಕರಣಿಕ ಕಲ್ಲಯ್ಯನ ವರಪುತ್ರ ಬಸವಾಂಕ
ನೊರೆದನೀ ಕೋಲಪದಗಳ ಕೋಲೆ
ಒರೆದನೀ ಕೋಲಪದಗಳ ಕೇಳಲು
ಗುರುಶಾಂತಲಿಗನೊಲಿದೀವ ಕೋಲೆ ೮೪

೪೫

ಶಿವಶಿವಾ ಏನೆಂಬೆನಯ್ಯ ॥ ಪಲ್ಲ

ಏನೆಂಬೆನಯ್ಯ ನಿರಾಮಯ ನಿಜವನರಿಯದಜ್ಞಾನಿ
ಮಾನವರಲ್ಪಸುಖಕೆಳಸಿ ಪರಶಿವ
ಜ್ಞಾನವಿಲ್ಲದೆ ತೊಳಲಿ ಬಳಲುತಿಹ ಭವಭವದಿ
ಕಾ[ನನ]ದ ಮಧ್ಯದೊಳಗೆ ೧

ಉರಲಿನೊಳು ಸಿಲ್ಕಿ ಮಾನವನ ಕೈವಶವಾದ
ಗರುಡನುರಗನ ಕಚ್ಚಿಕೊಂಡದರ ಜಿಹ್ವೆಯೊಳು
[ಹ]ರಿಯದರ ಬಾಯೊಳಗೆ ನೊಣವ್ರಣಕೆ
ಗುರಿಯಾಗಿ ಸ್ಥಿರಬಾಳ್ವೆನೆಂಬ ತೆರದಿ ೨

ಪುರುಷಸಂಗವ ಬಯಸಿ ಹೊಟ್ಟೆಬೇನೆಯ ಸತಿಯು
ನಿರಿಯ ಪಸರಿಸಿ ಉಟ್ಟು ಶೃಂಗರಿಸುವಂದದಿಂ
ನರರಲ್ಪಸುಖಕೆಳಸಿ ಪಿರಿದು ದುಃಖವ ಮರೆದು
ದುರಿತ ಕಿಡದರಯ್ಯೊ ಅರಿಭಯದಿ ಮುರಿದಿಂದ್ರುಪ
ಪಿರಿದೋಡುತಿರೆ ಕಂಡು ತನ್ನ ಪುರ ಸೂರೆಹೋಗದಲ್ಲಿ
[ಪಿರಿದ]ಡವಿಯನೆ ಬಿದ್ದು ಮೊರೆವ ರಕ್ಕಸಕಿಚ್ಚು
ಕರಿ ಸಿಂಹ ಸಾಧು ಅಲ್ಲಿರದೆ ಭೋರನೆ ಬಂದು ಬಾವಿಯೊಳು ಬೀಳಲು ೩

ಸರಗಸ್ಸೊರೆಲು ಕಂಡು ಶರಧಿ ಬಳ್ಳಿಯ ಪಿಡಿದು
ಮಧುಬಿಂದುವನೆ ಸವಿದು ಪರಿದು ಸುಖವಾಯಿತೆನಗೆ
ದುರಿತವೆಲ್ಲಿಯದೆಂಬ ನರರ ಬಾಳ್ವಿಯ ತೆರದಿ ೪

ಇಂತು ಎಳೆಹೂಟೆ ಸಾಣೆಯು ಬಾರು ಗಾಣದೆ
ತ್ರಂತೆ ತಿಗುರಿಯ ತಿರುತಿರುಗಿ ಬರುತೆ ಭವಭವದಿ
ಸಂತೈಸಲರಿಯದುಭಯುಗ್ರದುರಿಕಾಷ್ಟಮಧ್ಯಂತಸ್ಥಕೀಟ
ದಂತಸ್ಥಿಕೆ ಚಿನ್ನಂತೆ
ಇಂತು ಗುರುಶಿವಸಿದ್ಧ ಶಾಂತನಂಘ್ರಿಯದ್ವಯದ ಚಿಂತನೆಯ ಪರಮಸುಖದಿ ೫

೪೭

ಮರೆಯುವ ಜಡಸ್ಥಿತಿಗೆ ಮುಯ್ಯುಪರೀತಕೆ ಬರಿದೆ ॥ ಪಲ್ಲ

ತನುವೆಂದೆಂಬೆನೆ ರುಜೆಗಳ ಗೂಡು
ಮನವೆಂದೆಂಬೆನೆ ಚಿಂತೆಯ ಬೀಡು
[ಧನವೆಂ] ದೆಂಬೆನೆ ರಾಜರಿಗೀಡು
ಮನುಜರಿಗಿದು ಕೇಡು ೧

ಒಂದಾಗುಂಬ ಮಾನವರೆಲ್ಲ
ಸಂದಾಗೊಡನೆ ಬ....ತರಿಲ್ಲ
ಮುಂದೀ ಧರ್ಮಗಳೆಳ್ಳನಿತಿಲ್ಲ ಹೇ
ಗೆಂದು ತಿಳಿದು ನಡೆವವರಿಲ್ಲ ೨

ಎರವಿನ ಸಿರಿ....ಯಲ್ಲರ ಜರಿದು
ಸ್ಥಿರವಹ ಸತ್ಕ್ರೀಗಳ ಮರೆದು
ಗುರುಶಾಂತನ ಸೇವೆಯೊಳಿರದೆ
ಇರುತಿಹ ಶರಿರವಿದೇತರದು ೩

೪೭

ಪ್ರೋದಧಾರ....ವಿ
ನೋದಪಾವನಮೂರ್ತಿ ಲಿಂಗದೊಳ್ ಬೆರೆದು....ಮು ಬಿಂಕ ॥ ಪಲ್ಲ

ಭಕ್ತಿಸ್ಥಲವನೆ ಕಂಡೀ ಶರಣ ಸ್ಥಲವನೆ ಕಂಡು
ಉತ್ಪತ್ಯ ಸ್ಥಿತಿ ಲಯವನೆಲ್ಲ ಕಳೆದು
ಎತ್ತಿ ದಶವಾಯುಗಳ ಊರ್ಧ್ವಮುಖವನೆ ಮಾಡಿ
ನಿತ್ಯಪರಿಪೂರ್ಣ ಬೆಳಗಿನೊಳ್ ಬೆಳಗಾಗಿ ೧

4

ಹಮ್ಮು ಬಿಮ್ಮುವ ಕಳೆದು ಹಸಿವು ತೃಷೆಗಳ ಮರೆದು
ಕಲ್ಮಷದ ಕಸಗಳಿಗೆ ಕಿಚ್ಚನಿಕ್ಕಿ
ನಿರ್ಮಲದಿ ಧಗಧಗಿಪ ಜ್ಯೋತಿ ನೆಲೆಯನೆ ಕಂಡು
ಜುಮ್ಮುದಟ್ಟುತ ಹಿಗ್ಗಿ ತಾನು ತಾನಾಗಿ ೨

ಕುಂಡಲಿಯು ಸರ್ಪನ ಗ್ರಹಿಸಿ ಮೂವರ ಗೆಲಿದು
ಲಂಡ ಕಳ್ಳರೈವರನು ಒಡಲ ಬಗೆದು
ಉಂಡು ಉಣ್ಣದಲಿಪ್ಪ ಉರಿಯ ಬ್ರಹ್ಮನ ಪ್ರಭೆಯ
ಕಂಡು ಮನ ನೆಟ್ಟು ಪ್ರಣಮದೊಳು ಬಯಲಾಗಿ ೩

ಅಜ ಹರಿ ರುದ್ರರೆಂಬ ಅಲ್ಪಸುಖವನೆ ಕಳೆದು
ನಿಜತತ್ವ ನಿರ್ವಯಲ ನೆಲೆಯ ತಿಳಿದು
ಭುಜಪರಾಕ್ರಮದ ಮೋಹಿನಿಯಿದೊಟ್ಟಿ
ಗಜವನೇರಿದ ವಸ್ತು ತಾನು ತಾನಾಗಿ ೪

ಉರಿ ಕರ್ಪೂರವನುಂಡ ತೆರನೆ....[ಮ]ರಿಮುಂಜಿ
ಪರಿಮಳವ ತಾನುಂಡ ಸುಖಬಂಧದಿ
ಪರವಶದೊಳಗಿಪ್ಪ ಗುರುಶಾಂತನೊಳ್ ಬೆರೆದು
ಕರುಣೆಯತಿಗಳ ಪ್ರಿಯ ಕರಸ್ಥಲದ ರಾಯ ೫

೪೮

ಬೇಡ ಸಂಸಾರಸುಖ ನೆಲೆಯಿಲ್ಲ ಮನುಜರಿಗೆ
ನೋಡಿ ನಡೆವುದು ಮುಂದೆ ಪುಣ್ಯಪಾಪವನರಿದು
ಮಾಡುವುದು ಮುಟ್ಟಿ ಘನ ಶಿವಲಿಂಗಪೂಜೆಯನು
ಕೂಡುವುದು ಶಿವನ ಕೂಡೆ ಶಂಕರ ಬೇಡ ಸಂಸಾರಸುಖವು ॥ ಪಲ್ಲ

ಒಡಲೆಂಬುದಿದು ಬಾಳ ಹಡಿಕೆ ಹೊಲಸಿನ ಹಾಳು
ನಡುವೆ ಮಲಮೂತ್ರಕೊಂಡವು ಕ್ರಿಮಿಗಳ ರಾಸಿ
ಎಡೆ ನರಕ ಎಲವು ಸುತ್ತಿದ ಮಾಕ್ಷ ಉಗ್ಗಡಿಸಿಕೊಂಡಿಹ ಹೇಸಿಕೆ
ಒಡೆದ ಗೋಡೆಯು ಮತ್ತೆ ಪೂಸಿದಂತಿಹ ದೇಹ
ಉಡಿಗೆ ತೊಡಿಗೆಯು ಮೇಲೆ ಮೆರದಿಪ್ಪುದಲ್ಲದೇ
ಹಿಡಿದು ನೋಡಲು ಒಂದು ಹುರುಳಿಲ್ಲ ಸಂಸಾರ ಕೇಡು ನರಕವೆನಿಸಿರ್ಪುದೊ. ೧

ನಿದ್ರೆಯೆಂಬಾ ಮರವೆ ಪೊದ್ದಿದಡೆ ಈ ದೇಹ.
ಎದ್ದು ಪೋಹದು ತನ್ನನು ಬಿಟ್ಟಿಲ್ಲಾದಡಂ
ಸಿದ್ಧರಂದದಿ ಹೋಗಿ ತಿರುಗಾಡುತಿರ್ಪಯದ್ದಿರವನಾರ್ಬಲ್ಲರೊ
ಹೊದ್ದ ವಸ್ತ್ರಂಗಳನು ತೊಟ್ಟ ಬಂಗಾರವನು
ಕದ್ದು ತೆಗೆವರನರಿಯ ನಾವೆಂಬದಿಂತಿಹುದು
ಎದ್ದಾಗಳೆಚ್ಚತ್ತು ಎಡಬಲಂಗಳ ನೋಡಿ ಕ್ಷುಪ್ರರಾರೆನುತಿರ್ಪರೊ ೨

ಕಣ್ಣಿನಲಿ ಜಾರು ಕಿವಿಯಲಿ ಗುಗ್ಗೆ ಮೂಗಿನಲಿ
ಗೊಣ್ಣೆ ತಾಗಿಯೆ ಸುರಿವರುಣ್ಣ ಬಾಯೆಂಜಲು
ಹುಣ್ಣು ಕುರು ಕಜ್ಜಿ ತುರಿಗಳು ಮೂಡಿ ಅತಿಭಯದಿ ಹಣ್ಣಾಗಿ ಬಳಲುತಿಹರೊ
ಹೆಣ್ಣೆಂಬ ನಾಮಕ್ಕೆ ಉರವಲ್ಲಿ ಮೋಕ್ಷವು
ಚಿಣ್ಣೆ ತಾಗಿಯು ಮೂಡಿ ಬಾತು ತಗ್ಗುವ ತೆರದಿ
ಅಣ್ಣಗಳು ಹಿರಿಯರೆಲ್ಲರು ನೋಡಿ ಮನಸಿಟ್ಟು ಕಣ್ಣಿನಲಿ ಸಿಲ್ಕಿಪ್ಪರೋ ೩

ಅದ್ದಿವಸು ಗಳಿಸಿಯು ನಿರರ್ಥಕ್ಕೆ ಕೆಡಬೇಡ
ವ್ಯರ್ಥವಪ್ಪುದು ನಿನಗೆ ಕಾಲನಿಗೆ ಕಾಯವಿದು
ಮೃತ್ಯು ಬಂದೆಳವಾಗ ಮಿಡ ಮಿಡನೆ ಮಿಡಿಕಿಸೀ ಮತ್ತೆ ಬಯಸಿದವರುಂಟೆ
ಅರ್ಥವನು ಅರಮನೆಯವಾಳುಗಳು ಕೊಂಡೊಯ್ಯೆ
ಮಿತ್ರೆಯು [ಂ] ಮತ್ತೊಬ್ಬ ಅತಿಕಾಮಿ ಸಳಕೊಂಬ
ಹುತ್ತದೊಳಗಣ ಹಾವಿನಂತೆ ಕಾಯ್ದಿರಬೇಡ ಬಿತ್ತಿ ಬೆಳೆಯಿರೊ ಧರ್ಮವ ೪

ಅದ್ದಿ ಪ್ರಾಣವೆಂಬಾ ಮುದ್ದಿನಂತಾ ಸತಿಯು
ಹೊದ್ದಲಮ್ಮಳು ಜೀವ ಹೋಯಿತೆಂಬಾಗಳೆ
ಇದ್ದಂತೆ ಆಚೆಯಿಾಚೆಯು ಮನೆಯೊಳಗಿಪ್ಪಾ ಬುದ್ಧಿವಂತರ ಕರೆಸುತ
ಹೊದ್ದ ವಸ್ತ್ರಾಭರಣವೆಲ್ಲವನು ತೆಕ್ಕೊಂಡು
ಇದ್ದಾಗೆ ಒಂದು ಹಳೆಯರುವೆಯನು ಮುಸುಕಿಟ್ಟು
ಉದ್ಯೋಗವುಂಟು ಹೆಣನ ತೆಗೆಯೆಂಬರು ಬಿದ್ದ ಬಳಿಕಾರುಯಿಲ್ಲ ಶಂಕರ ೫

ಉಡಿದೊಗಲು ಕೈಯು ಗರಗಸಗತ್ತಿ ನಾರಾಚ
ಪಿಡಿವ ಹೇರಿಟ್ಟ ಡೆಂಕಣಿಯು ಬಾವುಲಿ ತೊಡರು
ಪಿಡಿವ ಹಾಸಿನ ನಾಯಿ ರೌದ್ರಾವತಾರದಿಂ ಗುಡುಗುಡಿಸುತ್ತೆಮದೂತರು
ಪೊಡವಿಯೊಳು ಬಿದ್ದಿರ್ದ ನರನಾವನೋ ಎಂದು
ಮಡದಿ ಮಕ್ಕಳು ಬಂಧುಗಳು ಸುತ್ತ ಮುತ್ತಿರಲು
ನಡುವೆ ಅವನಸುವನಾರುಂ ಕಾಣದಂದದಲಿ ಪಿಡಿದೆಳದು ಕೊಂಡೊಯ್ವರೊ ೬

ಮಾಡುವರು ದೇಗುಲದ ಪರಿಯಂತೆ ವಿಸ್ತರಿಸಿ
ಕೊಡೆ ಹೊಂಬಣ್ಣ ದೇವಾಂಗಗಳನೇ ಬಿಗಿದು
ಗಾಡಿಯೊಳಗೈದಿರ್ಪರೊ ಗೂಡಿನೊಳಗಣ ಪಕ್ಷಿ ಹಾರಿ ಹೋದಡೆ ಹಾಳು
ಗೂಡಿಂಗೆ ಕೈಯಯಿಟ್ಟು ಸಡಗರ ಸಂಭ್ರಮವ
ಮಾಡುವರ ಬೇಕು ಬೇಡೆನಲಾಗದಿದನು ನೋಡುತ್ತಿಹುದತ್ತಿಜೋದ್ಯವು ೭

ಹುಟ್ಟಿದಾಗಲೆ ವಸು.......ವರನೆಂದು ಮುಂಜಿಯನು
ಗಟ್ಟಿ ಮದುವೆಯ ಮಾಡಿ ಉಚ್ಚಹದ ಹರಿಯೆಂದು
ಕಟ್ಟಕಡೆಯಲಿ ಮಡಿದನೆಂದು ಹೊಯ್ದು ಹರೆಯ ಸಾವರಿಗಳೆಂದೆಂಬರೊ
ಹೊಟ್ಟೆಯೊಳಗಿರದೆ ಪೊರಮಡಲು ಮನುಜನ ದೇಹ
ಮುಟ್ಟದಿರಿ ಹೆಣನೆಡೆಗೆಯೆಂದು ಮಾಡಿದ ಶಿವನ
ಕಟ್ಟಳೆಯನಾರ್ಬಲ್ಲರೊ ೮

ಒಡೆಯರೊಡವೆ[ಯ] ಕೊಳಲು ಕಳ್ಳಗಳಲಾದಂತೆ
ಒಡಹುಟ್ಟಿದರು ಬಂಧುಗಳು ಸಹಾ ಸತ್ತಿರಲು
ನುಡಿದು ಪೊಯಿವರು ಆಗಲೇ ಮತ್ತವ ಹೋದ
ಕಡೆಯ ಬಾರಿಯ ಸಾವು ತಮತಮಗೆ ತಪ್ಪದುಯೆಂದು
ನಡುವೆ ನಾಲ್ಕೆರಡು ದಿವಸಗಳೈಸೆ ಮತ್ತಿದಕೆ
ಕಡು ಮರುಗುತ್ತಲಿಪ್ಪರೊ ಶಂಕರ ೯

ಬೆಳ್ಳಿ ಬಂಗಾರವನು ಬಾಯಿಗಳಿಗೆ ಅಕ್ಕಿಯ
ನಿಕ್ಕಿ ಕುಳಿಯೊಳಗಿರಿಸಿ ತಾವೆಲ್ಲರುಂ ಕೂಡಿ
ಒಳ್ಳೆಯನುಗುಣರೂಪು ಬುದ್ಧಿವಂತನುಯೆಂದು ಹೊಳ್ಳುನುಡಿಗಳ ನುಡಿವರೊ
ಎಳ್ಳು ಅಕ್ಷತೆ ಹಲವು ಭಕ್ಷ್ಯಭೋಜ್ಯಂಗಳನು
ಹಳ್ಳದೊತ್ತಿಗೆ ತಂದು ಕೂಳ ಮುಂದೆಯು ಹಾಕಿ
ಕೊಳ್ಳೆಂದು ಕಾಗಗಳ ಕರಕರದು ತಂಡ ತಂಡದ ಡಳ್ಳುರಿಯೊಳೆ....ಬ.... ೧೦

ಇಂತು ಸಂಸಾರವೆಂಬ ಕಾನನದೊಳು ಸಿಲ್ಕಿ
ಭ್ರಾಂತನಾಗೀ ನಿಮ್ಮ ನೆನೆಯಲರಿಯದೆ ಕೆಟ್ಟೆ
ಅಂತಕನ ಅಗ್ನಿಗೀಡಾಗಿ ನರಕಾಬ್ಧಿಯೊಳು ಈಜಾಡಿ ಕಡೆಗಾಣದೆ
ಸಂತತಂ ಸತ್ತು ಹುಟ್ಟುವ ಗೊಡವೆಗಾ ನಾಕಿ
ಕಾಲಾಂತಕನೆ ನಿಮ್ಮ ನೆನೆವಂತೆ ಬುದ್ಧಿಯ
ನಿತ್ತು ಕರುಣಿಸು ಗುರುಶಾಂತ ಶಂಕರಲಿಂಗವೆ ೧೧

# ತೋಂಟದ ಸಿದ್ಧೇಶ್ವರ ಸ್ವರವಚನ

೪೯

ಜಯಜಯ ಜಗದೀಶ ಜಯ ಜಯ ಶ್ರೀ ಅಘಹರನೆ
ಜಯ ಜಯ ನಿಗಮಸಂತತಿಗಳಿಗೆ ಗುರುವಾದನಾದಮಯಸಿದ್ಧ ದಯವಾಗೊ ॥ ಪಲ್ಲ

ಆದಿನಿರಂಜನನೆ ಮೇದಿನಿಯೊಳು ಬಂದು
ಬೋಧಿಸಿ ಶರಣಸಂತತಿಗಳಿಗೆ ಗುರುವಾದ
ಆದಿಸಿದ್ಧೇಶ ದಯವಾಗೊ ೧

ಸತ್ಪುಚಿತ್ಪಾನಂದ ನಿತ್ಯಪರಿಪೂರ್ಣನೆ
ಭಕ್ತಿತತ್ವವೊ ಭವರೋಗವೈದ್ಯನೆ
ಭಕ್ತಿ ಸಿದ್ಧೇಶ ದಯವಾಗೊ ೨

ಬಸವನ ಭಕ್ತಿಯನು ಶಶಿಧರನ ಜ್ಞಾನವನು
ಅಸಮಗುಣಕುಲದ ವೈರಾಗ್ಯಯಿವು ಮೂರು
ವಶವಾದ ಸಿದ್ಧ ದಯವಾಗೊ ೩

ಹತ್ತು ಹನ್ನೊಂದವನು ಮತ್ತೆ ಪ್ರಾಣದೊಳಿರಿಸೆ
ಕ್ಷುತ್ತು ತೃಷೆ ಪೊಲಸಿಗಳನಳಿದ ಸಿದ್ಧೇಶ
ನಿತ್ಯನೀಂಪೆನಗೆ ದಯವಾಗೊ ೪

ಪಾಪದ ಪುಂಜವೆ ರೂಪಾದ ಕಾಯವನು ಈ
ಆಪತ್ತು ನಾನು ಹೊರೆಯಲಾರೆನು ಗುರುವೆ
ಕಾಪಾಲಿಸಿದ್ಧ ದಯವಾಗೊ ೫

ಕರ್ಮದ ಕಾಯವ ನೆಚ್ಚಿ ಪರ್ಮವನರಿಯದೆ
ದುರ್ಮುಖರಾಗಿ ದುರಿತ ಕಾಣದವಗೆ
ನಿರ್ಮಯಸಿದ್ಧ ದಯವಾಗೊ ೬

ಭೂತವು ನೆಚ್ಚಿ ಹಂತಕತನದಿಂದ
ಪಾತಕವ ಮಾಡಿ ಪರನಯದೆ ಕೆಟ್ಟೆ
ಭೂತೇಶಸಿದ್ಧ ದಯವಾಗೊ ೭

ಮಲಿನ ದೇಹವ [ನ]ಚ್ಚಿ ಬಲು ಗರ್ವದೊಳು ಹೆಚ್ಚಿ
ಕಲುಹೃದಯನಾಗಿ ಹೊಲಬನರಿಯದೆ ಕೆಟ್ಟೆ
ಮಲಹರಸಿದ್ಧ ದಯವಾಗೊ ೮

ಡಂಭಕದ ಕಾಯುವಿದು ನಂಬಿ ನಾ ನಿಮ್ಮಡಿಯ
ಅಂಬನೆ ಮರೆದು ಬೆಂಬಿಡದೆ ಭವಭವದಿ
ಶಂಭು ಗುರುಸಿದ್ಧ ದಯವಾಗೊ ೯

ಮನ ಬುದ್ಧಿ ಚಿತ್ತವು ಬಿಸುಗು ಅಹಂಕಾರವು
ಅನುದಿನ ನಿಮ್ಮ ನೆನೆಯಲೆಯದು ಗುರುವೆ
ಚಿನುಮಯ ಸಿದ್ಧ ದಯವಾಗೊ ೧೦

ಏಳು ವೇಷಗಳೆನ್ನ ಬಾಳಲೀಯದು ಬಹು
ಧಾಳಿಯನೆ ಮಾಡಿ ಕೋಳುಬಿಡುತ್ತೈದಾನ
ಭಾಳಾಕ್ಷಸಿದ್ಧ ದಯವಾಗೊ ೧೧

ಹತ್ತು ಯುಗಗಳೆ ಮತ್ತೆ ಜೀವನ ಶಿರವ
ಕತ್ತಲಾಗಿ ಮತ್ತೆ ಭವದೊಳು ಬಂದೆ
ಕಂತುಹರಸಿದ್ಧ ದಯವಾಗೊ ೧೨

ಹರಿವರ್ಗದೊಳು ಸಿಲ್ಕಿ ಬರಿ ಭ್ರಮೆಯೊಳು ಬಿದ್ದ
ಹರ ನಿಮ್ಮ ಪಾದವ ಮರೆದ ಮಾನವನಿಗೆ
ಉರಗಧರಸಿದ್ಧ ದಯವಾಗೊ ೧೩

ಪಂಚವಿಷಯಗಳಿಂದ ಸಂಚಲಿಸಿ ನಾ ನಿಮ್ಮ
ಚಿಂತೆಯನೆ ಮರೆದು ಹಚುಹರಾಮಹೆನು
ಪಂಚಾಕ್ಷರೀಸಿದ್ಧ ದಯವಾಗೊ ೧೪

[ಪು]ಸಿಯ ವೇಷದಿಂದ ಹುಸಿಯ ಖಂಡನು ಆಗಿ
ದೇಶದೊಳು ಗ್ರಾಸದಾಸೆಗೆ ತಿರುಗುವಗೆ
ಈಶ ಗುರುಸಿದ್ಧ ದಯವಾಗೊ ೧೫

ಆಸಿಯ ಶೂಲದೊಳು ವೇಷದ ಹೆಣ ನಾನು
ಹಸದ ಬಿದ್ದು ಘಾಸಿಯಾದೆನು ಗುರುವೆ
ಶಾಶ್ವತಸಿದ್ಧ ದಯವಾಗೊ ೧೬

ಆಸೆಯ ದಾಸನಿಗೆ ಲೇಸಾದ ಚೋರನಿಗೆ
ಭಾಷೆಹೀನನಿಗೆ ದೋಷಕೀಡಾದವಗೆ
ಗೋಸಲಸಿದ್ಧ ದಯವಾಗೊ ೧೭

ಬಡಮನದ ಆಸೆಯನು ಒಡೆತನದ ವೇಷವನು
ಪೊಡವಿಯೊಳು ಬಿಡದೆ ನಡೆಸುವಗೆ ಪಾಪಿಗೆ
ಮೃಡಸಿದ್ಧಲಿಂಗ ದಯವಾಗೊ ೧೮

ಒಂದೊಂದು ಬಯಸುವ ಸಂದೇಹಿ ಮಾನವನ
ಮಂದಮತಿಗಳನು ಹಿಂದುಗಳೆದೆನ್ನ
ಗುರು ತಂದೆ ಸಿದ್ಧೇಶ ದಯವಾಗೊ ೧೯

ಕರಿಯಜೋಹವ ತೊಟ್ಟಿ ಮರಿನಾಯಂತೇಳುವರೆ
ಗುರುರೂಪ ಧರಿಸಿ ನರನಂತೆ ನಡವಗೆ
ಕರಿಕಂಠಸಿದ್ಧ ದಯವಾಗೊ ೨೦

ಕೋಟಿಗೀತವ ಹಾಡಿ ಕೋಟಿಶಾಸ್ತ್ರವ ಕೇಳಿ
ಪ್ರೋಟ ಮನ ತನ್ನ ಆಟವ ಬಿಡದು ಶಶಿ
ಜೂಟ ಸಿದ್ಧೇಶ ದಯವಾಗೊ ೨೧

ಹಾಲನೆರೆಯಲು ಹಾವಿಗೆ ಮೇಲೆ ವಿಷವಿರ್ದನ
ಲೀಲೆಯಿಂದೆನಗೆ ಬೋಧಿಸಲು ಅದರಂತೆ
ಕಾಲಹರಸಿದ್ಧ ದಯವಾಗೊ ೨೨

ಸಲೆ ಹೊದಗಿ ತನ್ನ ಮಲವ ಭುಂಜಿಸಿದಂತೆ
ಬಲುವೇದಿ ನಾನು ಮಲಮೂರು ಬಿಡಲಾರ
ಚೆಲುವ ಗುರುಸಿದ್ಧ ದಯವಾಗೊ ೨೩

ಹೊರಗೆ ಲೇಸಾದ ನೆಂಟು ಒಳಗೆ ರೋಷದಿ ಮೆಟ್ಟಿ
ಬರಿಯ ಮಾತುಗಳ ಬಣಬೆಯ ಬಣಗನಿಗೆ
ಪರಮ ಗುರುಸಿದ್ಧ ದಯವಾಗೊ ೨೪

ಹೇಮ ಕಾಮಿನಿ ಭೂಮಿ ನೀ ಮುನ್ನಲಿಕ್ಕಿದ
ತಾಮಸವೆಂದು ಅರಿಯದಜ್ಞಾನಿಗೆ
ಸ್ವಾಮಿ ಗುರುಸಿದ್ಧ ದಯವಾಗೊ ೨೫

ಮಂಗಳಾಂಗದ ಭಂಗಿ ಹಿಂಗದೆ ತವೆ ಗತಿ
ಲಿಂಗವನೆ ಮರೆದು ಭಂಗಬಡುತ್ತೈದೇನೆ
ಮಂಗಳಮಯ ಸಿದ್ಧ ದಯವಾಗೊ ೨೬

೫೦

ಹೆಣ್ಣೆ ಪರಶಿವರೂಪು ಬಣ್ಣಿಸಲು ಶಿವ ಚಿನ್ನ
ಬಣ್ಣದುಡಿಗೆಯು ತನ್ನ ಅಂಗಕೆನಲು ॥ ಪಲ್ಲ

ಪಶ್ಚಿಮದ ಚಕ್ರ ಅಚ್ಚೊತ್ತಿರುವ ಲಿಂಗವದು
ಸ್ವಚ್ಛವಾಗಿರುವ ರಾಗಟೆ ಚೌರಿಯು
ಮುಚ್ಚಿಕೊಂಡಿರುವ ತಾರಕ ಬ್ರಹ್ಮಸೂತ್ರವದು
ಪೆಚ್ಚಿ ಶಿರದಲ್ಲಿರುವ ಮುತ್ತಿನೆಳೆಯು ೧

ತ್ರಿಣಯನ ಬಯಸುವರೆ ರೇಚಕವೆ ಪೂರಕವೆ
ಪಣೆಯಾಗ್ರದಲ್ಲಿರುವ ಚಂದ್ರಸೂರ್ಯ
ಗಣಿಸಬಾರದ ತ್ರಿಕೂಟದ ಮಹಾಲಿಂಗವದು
ಪಣೆಯಲ್ಲಿಯಿಡುವ ಮುತ್ತಿನ ಬಟ್ಟು ೨

ದಶವಿಧದ ಶಬ್ದ ಪ್ರಣಮನಾದದೊಬ್ಬುಳಿಯು
ಕುಸುಮ ಬುಗುಡಿಯು ಕೊಪ್ಪು ವಾಲೆ ಝುಮಿಕಿ
ಎಸೆವ ಘ್ರಾಣಾಗ್ರದೊಳು ತೋರುತಿಹ ಚಿಜ್ಜ್ಯೋತಿ
ಸಸಿನೆಯಿಂದಿಡುವ ಮುತ್ತಿನ ಮೂಗುತಿ ೩

ಗುರು ಕೊಟ್ಟ ಲಿಂಗವದು ಬಿಡದೆ ಕರದೊಳಗಿರಲು
ಉರುತರದಲಿಡುವ ಮಂಗಳಸೂತ್ರವು
ಪರಿಮಿತದ ವಚನಗಳನಾಡಿ ಮೌನಂಗೈಯೆ
ಗುರುತವಾಗಿರ್ದ ಕಟ್ಟಾಣಿಗುಂಡು ೪

ಅಂಗಶಕ್ತಿಯು ಭಕ್ತಿ ಹಸ್ತಮುಖ ಪದಾರ್ಥ
ಲಿಂಗಪ್ರಸಾದ ಮುತ್ತಿನ ಪೆಟ್ಟಿಗೆ
ಸಂಗ ಸಮರಸದ ಮೂವತ್ತಾರು ತತ್ವಗಳೆ
ಕಂಗಳಿಗೆ ಚೆಲ್ವಾದ ಮೋಹನ್ಮಾಲೆಯು ೫

ಈಶಪದವಲ್ಲದೇ ಮತ್ತೇನು ಅರಿಯದಿಹ
ಭಾಸುರದಿ ಹೊಳೆವ ಕಾಸಿಯು ಕರಿಮಣಿ
ನಾಶಮಾಡುವ ಜನ್ಮ ಪಂಚವರ್ಣಂಗಳೇ
ಲೇಸಾದ ಪಂಚಮುತ್ತಿನ ಪಾವಡ ೬

ಕಂತು ಯಮ ಮೃತ್ಯುಬಾದೆಗಳೆಲ್ಲ ಸದೆಬಡಿದು
ಚಿಂತೆಯಿಲ್ಲದಿರುವ ಚಿಂತಾಕವು
ಸಂತವಿಟ್ಟಿರುವ ಹೃತ್ಕಮಲದಾ ಪ್ರಣಮವದು
ಎಂತು ಹೇಳಲಿ ಅನರ್ಘ್ಯದ ಪದಕವು ೭

ತತ್ತು ತ್ವಂ ಅಸಿಪದಗಳೆಂತೆಂಬ ಕೂಟಗಳೆ
ಸತ್ಯವಾಗಿರುವ ಕರಡಿಗೆ ಸರಪಳಿ
ಸತ್ತು ಚಿತ್ತಾನಂದ ನಿತ್ಯ ಪರಿಪೂರ್ಣವೆ
ಮತ್ತೆ ಚಂದದ ಏಕಾವಳಿಯ ಸರವು ೮

ದುರಿತಹರ ನೀಲವ್ರತದಾಚಾರದಾ ಗೊತ್ತು
ಕರ ಚಿಲುವ ಗುಳ್ಡಿಂಗು ಗೋಧಿಮಣಿಯು
ಶರಣರಾ ಸಿಟ್ಟು ತೋಷಂಗಳನು ಸೈರಿಸುವ
ಸರಿಗಾಣೆ ಮೇಲಾದ ಭಾರಿ ಸರಿಗೆ ೯

ಸೊಗಸಿನಿಂಪುವ ತ್ರಿವಿಧಾಲಿಂಗ ಕೂಟಗಳೆ
ಬಿಗಿದು ತೊಟ್ಟಿರುವ ಕಂಚುಕದ ಕಟ್ಟು
ಖಗ ಕೋಟಿಪ್ರಭೆಯಂತೆ ಬೆಳಗುವ ಚಿದಂಬರವೆ
ಸೊಗಸಿನಿಂದುಡುವ ಇರುವಂತಿಸೀರೆ ೧೦

ಗುರುಮಾರ್ಗದಾಚರಣೆ ಹಿಡಿದು ಬಿಡೆನೆಂದೆಂಬ
ಪರತರವ ವಂಕಿ ತೋಳಿನ ಭಾಪುರಿ
ಚರವೆ ಚತುರ್ವಿಧ ಪದಗಳಾಗಿರುವ ಸೌಜ್ಞಗಳೆ
ಮುರಿಗೆ ನೀಲ ಪಚ್ಚೆ ವಸುವಳಿಗಳು ೧೧

ಎರಡು ಜ್ಞಾನಕ್ರಿಯಾ ಸಮನಾಗಿ ನಡೆಸುವದು
ಹರಡಿ ಕೈಕಟ್ಟೆ ಚಂದದ ಚಿಗುರಿ
ಗುರುಲಿಂಗ ಜಂಗಮಕೆ ವಂಚನಿಲ್ಲದೆ ಭಕ್ತಿ
ಪರಳಿನಿಂ ರಚಿಸಿರ್ದ ಉಂಗುರಗಳು ೧೨

ಮಿಗಿಲಾಗಿ ತೋರುವಾ ನೂರೊಂದು ಸ್ಥಲ ಗೊತ್ತು
ಸೊಗಸಿನಿಂದಿಡುವ ನಡುವಿನ ವಡ್ಯಾಣ
ಹಗರಣರು ಸಮಯಗಳ ಜಡಿದು ನುಡಿವಾ ಶಬ್ದ
ಝುಗರಝುಗಿಪ ರುಳಿ ಗೆಜ್ಜೆ ಕಾಲಂದಿಗೆ ೧೩

ಸಂಚಿತಾ ಪ್ರಾರಬ್ಧ ಆಗಾಮಿಯೆಂಬ ಲಿಖಿತಗಳ
ಹಿಂಚು ಮಾಡುವದು ಚರಣದ ಚಿಗುರಿ
ವಂಚನೆಯು ಐದೇಂದ್ರಿ ಸಂಚಿನಲಿ ನಿಲಿಸುವದು
ಮಿಂಚು ಪಿಲ್ಲಿಸುಂಗುರಣಿ ಮಿಂಟಿಕೆ ೧೪

ಇಂತು ಶಿವಲಿಂಗಾಂಗ ಸಮರಸದಾಭರಣಗಳ
ಸಂತತಂ ಇಟ್ಟು ಸುಖದಲಿರ್ದಡೆ
ಅಂತಕಾಂತಕ ಪರಮಖಂಡ ತೋಂಟದ ಸಿದ್ಧಾ
ಸಂತೈಸಿಯೆನ್ನ ಕೈವಿಡಿದನಲ್ಲೆ ೧೫

೫೧

ಎತ್ತುವೆನಾರತಿ ಎತ್ತುವೆನಾರತಿ ಎತ್ತುವೆನಾರತಿಯ
ಕರ್ತು ತೋಂಟದ ಸಿದ್ಧಲಿಂಗನ ಪಾದಕೆ ಎತ್ತುವೆನಾರತಿಯ ॥ ಪಲ್ಲ

ಮನದ ಬೆಳಗಿನಲ್ಲಿ ಜ್ಯೋತಿಯ ಮುಟ್ಟಿಸಿ ಎತ್ತುವೆನಾರತಿಯ ೧

ಉನ್ಮನೆ ಜ್ಯೋತಿಯ ಬೆಳಗಿನಲ್ಲಿ ನಾ ನೋಡೆ ಎತ್ತುವೆನಾರತಿಯ
ಚಿನ್ಮಯ ಘನಗುರುಲಿಂಗ ನಿರಂಜನಗೆ ಎತ್ತುವೆನಾರತಿಯ ೨

ನಾನು ನೀನೆಂದೆಂಬ ಉಭಯ ಭೇದವನಳಿದೆತ್ತುವೆನಾರತಿಯ ಚಿ
ದ್ಭಾನುಪ್ರಕಾಶ ತೋಂಟದ ಸಿದ್ಧಲಿಂಗಗೆ ಎತ್ತುವೆನಾರತಿಯ ೩

೫೨

ಲಿಂಗಾ ಎನ್ನಂಗದೊಳು ಬೆರೆದು ಸಂಗವ ತೋರಿದೆ
ಅಂಗಜಾನನ ರೂಪನಳಿದೆ ಮಾಯಮೂಗರಿದೆ
ಗಂಗೆಯುರವಮಣಿನೆ ಘನಮುನಿವಂದಿತ
ಲಿಂಗಳ ಸೂಡಿದ ಮಂಗಳಮಹಿಮಾ ॥ ಪಲ್ಲ

ಕಪ್ಪುಗೊರಳಭವನೆನಿಸಿಕೊಂಡೆ ಮುಪ್ಪುರವ ಗೆಲಿದೆ
ಸರಸಿಜೋದ್ಭವನ ಶಿರವನರಿದೆ
ಹರಿನಯನಾರ್ಚಿತ ಕರಿಮುಖ ನಯಪಿತ
ಪರಪೆಯ ಕುಚದೊಳು ಓಯೆಂದು ನಿಂದೆ ೧

ಬಾಲೆಗೊಲಿದು ಹಾಲ ಸವಿದೆ ಲೀಲಾವಿನೋದ
ಲೋಲಜಂಗಮನಾಗಿ ಬಂದೆ ಗೊಲ್ಲಾಳನಿಗೊಲಿದೆ
ಲೀಲನೂರ ನಿಂಬವ್ವೆಯ ಮನೆಯಲ್ಲಿ
ಬಾಲನ ಕೊಲಿಸಿ ಸಿರಿಯಾಳನಿಗೊಲಿದೆ ೨

ಪರಮತತ್ವದಿ ವಿನೋದ ಬಿರಿದಾಂಕಮಾಯ
ಓರಿಮ ನಾಂಟ್ಯವನೆಲ್ಲ ಬರಿದೆ ಸರಸವ ಮೆರೆದೆ
ಮರುಳಾಟದಿ ಹೋಗಿ ಕರುಗಳ ಕಾಯ್ವುತ
ಮುರುಗೆಯ ರಾಯನ ಕರವೊಳು ಬೆರದೆ ೩

೫೩

ಭೋಗಕೆಳಸಿ ಬಯಸುವರಲ್ಲ
ಧರಣಿಯೊಳು ಹರನನರ್ಚಿಪ ಭಕ್ತರು
ಇರುತಿರ್ಪ ಗೃಹದೊಳಗೆ ಭಕ್ತಿಭಿಕ್ಷವನುಂಡು
ಪರಮ ಪ್ರಸಾದದೊಳು ತೃಪ್ತರಾದ ೧

ಶಯನಕ್ಕೆ ಗವಿ ದೇಗುಲಗಳುಂಟು ಮಾತಿಂಗೆ
ಶಿವಮಂತ್ರವುಂಟು ತತ್ಸಂಗಕಿನ್ನು
ಅವಿರಳಧ್ಯಾತ್ಮಲಿಂಗದ ಸಂಗ ಉಂಟೆಂದು
ವಿವರಿಸಿದ ಜ್ಞಾನಬೋಧೆಯೊಳಿರುತಿಹ ೨

ಭಕ್ತಿಯಿಂದ ಬಂದಡೊಂದಂಬರವು ಶೀತಕ್ಕೆ
ಮರ್ತ್ಯದೊಳು ಶರಣುವೊಕ್ಕವರ ರಕ್ಷಿಪ
ಕರ್ತೃ ಗುರುಸಿದ್ಧಲಿಂಗನ ಸ್ಮರಿಸಿ ತಾಮಸವ
ಒತ್ತರಿಸಿ ವಿರತಿಯೊಳು ಸ್ವಸ್ಥರಾದಾ.... ೩

## ಚನ್ನಕಾಶಿ ಶಾಂತವೀರ ಅಂಕಿತದ ಸ್ವರವಚನ

೫೪

ಸ್ಥಿರವ ಬಿಟ್ಟು ಸ್ಥಿರವ ನಂಬಿ ಪರಲಿ ಸಾಯಲೇತಕೆ ಮನವೆ
ಅರುಹು ಕುರುಹು ನಿನ್ನೊಳಿಹುದು ಮರೆಯಲೇತಕೆ ॥ ಪಲ್ಲ

ಹುಟ್ಟಿ ತಾಯ ಹೊಟ್ಟೆಯಲ್ಲಿ
ಕಷ್ಟದೊಳಗೆ ಸಿಲ್ಕಿಕೊಂಡು
ಬಿಟ್ಟ ಬಯಲ ಭ್ರಾಂತಿಯಿಂದ ಬಳಲಲ್ಯಾತಕೆ
ಬಿಟ್ಟು ಮೋಹಪಾಶಗಳನು
ಸುಟ್ಟು ಕರಣ ಇಂದ್ರಿಗಳನು
ಮುಟ್ಟಿ ಪರಮತತ್ವದಿಂದ ಮುಕ್ತನಾಗಲ್ಯೆ ೧

ಹಲವು ಶಾಸ್ತ್ರಗಳನು ಕಲಿತು
ಕುಲದ ಗರ್ವವನ್ನು ಬಿಡದೆ
ಒಲಿದು ಮಾಯಮಲವ ನಚ್ಚಿ ಪೊಲಬಗಾಣದೆ
ಕಲುಷ ತಿಮಿರ ಮುಸುಕವಳಿದು
ಚಲಿಸದಂತೆ ಮನವ ನಿಲಿಸಿ
ಒಲಿದು ಶಿವನ ಭಕ್ತಿಯೊಳಗೆ ಮುಕ್ತನಾಗಲ್ಯೆ ೨

ಹೊನ್ನ ಹೆಣ್ಣ ಮಣ್ಣ ನಚ್ಚಿ
ತನ್ನ ರೀತಿ ತಿಳಿಯದನಕ
ಇನ್ನು ಭವದ ರೋಗದೊಳಗೆ ಬಳಲಲ್ಯಾತಕ್ಕೆ
ಅನ್ನ ವಸ್ತ್ರದೊಳಗೆ ಸಿಲ್ಕಿ
ಕಣ್ಣ ಮುಚ್ಚಿ ಕಾಣದನಕ
ಚನ್ನಕಾಶಿ ಶಾಂತವೀರ ಒಲಿವನ್ಯಾತಕ್ಕೆ ೩

## ಸೂಗೂರ ಅಂಕಿತದ ಸ್ವರವಚನಗಳು

೫೫

ಸುಳ್ಳಲ್ಲ ಈ ಮಾತು ಬಲ್ಲವರು ನೋಡಿ
ಒಳ್ಳಿತದು ಜಗದೊಳಗೆ ಇದ ತಿಳಿದು ನೋಡಿ ॥ ಪಲ್ಲ

ಆರು ಕಾಲಿನ ಪಕ್ಷಿ ಮೂರೂರು ನುಂಗಿತು
ಕಾರಣಿಕದ ಕಪ್ಪೆ ಸರ್ಪನನು ನುಂಗಿತು
ನೀರೊಳಾಡುವ ಮೀನು ನರಿ ನಾಯ ನುಂಗಿತು
ದೂರ ಹೇಳುವಲ್ಗಿಳಿಯ ಕೋಗಿಲೆ ನುಂಗಿಹುದು ೧

ಹುಲ್ಲೆಯ ಮರಿಯು ಒಂದು ಹುಲಿಯನು ನುಂಗಿತು
ಮೆಲ್ಲ ಮೆಲ್ಲನೆ ಹುಲಿ ಕರಡಿಯನೆ ನುಂಗಿತು
ನಿಲ್ಲದೆ ಹಾರುವ ಹದ್ದು ಚೆಲ್ಲಿದ ಎರೆ ನುಂಗಿತು
ಸೊಲ್ಲಣಿಸಿ ತನ್ನೊಳಗೆ ತನ್ನ ಬಳಗವನೆ ನುಂಗಿತು ೨

ಕರಿಯ ಬಿಳಿಯ ಒಂದು ತುರಗನ ನುಂಗಿತು
ಹಾರುತಿಪ ಹಂಸನನು ಇರುವೆ ನುಂಗಿತು
ವೀರ ಸೂಗೂರನೊಳು ಸೇರಿ ಅಮೃತವನುಂಡು
ಮೀರಿದವರನು ನುಂಗಿ ನಗುತ ನಿಂತಿಹುದು ೩

೫೬

ಮನಸಾಗಿ ಲಿಂಗವನು ಪೂಜೆಮಾಡಲಿಬೇಕು
ಕಾನನವ ಕಳೆದು ಕರ್ಮಕೆ ಕಿಚ್ಚನಿಕ್ಕಿ ॥ ಪಲ್ಲ

ತನುವೆಂಬ ದೇಹದೊಳು ಮನಬುದ್ಧಿಯನು ಬಿಟ್ಟು
ನೆನವೆಂಬ ಅಗ್ಘಣೆಯ ಮಜ್ಜನವ ಮಾಡಿ
ಘನವಾದ ಕರಣಗಳ ಕಲ್ಮಷಂಗಳ ಸುಟ್ಟು
ವಿನಯದಿಂ ವಿಭೂತಿ ಅರ್ಪಿಸಲುಬೇಕು ೧

ಮದ ಮತ್ಸರಂಗಳನು ಮೋಹಪಾಶಗಳಳಿದು
ವೇದ ಪಂಚಾಕ್ಷರಿಯ ಮಂತ್ರವನು ಜಪಿಸಿ
ವಾದ ಭೇದಗಳೆಂಬ ಕೇಶಂಗಳ ಕಿತ್ತು ವಿ
ನೋದ ಪ್ರಣಮದ ಪುಷ್ಪವರ್ಪಿಸಲುಬೇಕು ೨

ಶಕ್ತಿ ಮಾಯಗಳೆಂಬ ವಾರನಾರಿಗಳಳಿದು
ಭಕ್ತಿ ಜ್ಞಾನಗಳನುಭಾವದಲಿ ಮಾಡಿ
ವ್ಯಕ್ತ ವಿಷಯಗಳೆಂಬ ಇಂದ್ರಿಯಂಗಳ ಬಿಸುಟು
ಯುಕ್ತ ನೈವೇದ್ಯನರ್ಪಿಸಲುಬೇಕು ೩

ಜನನ ಮರಣಗಳೆಂಬ ಜನ್ಮಸೂತಕವಳಿದು
ಘನ ಜ್ಞಾನಕಾರದೊಳು ದೀಪವನು ಹಚ್ಚಿ
ಅನುಮಾನವೆಂದೆಂಬ ಷಡ್ಗುಣಂಗಳ ಬಿಸುಟು
ವಿನಯದಿಂ ಸಾಂಬ್ರಾಣಿ ಅರ್ಪಿಸಲುಬೇಕು ೪

ಅಶನ ವ್ಯಸನಗಳೆಂಬ ವಿಷಯಗುಣಗಳ ಕೆಡಿಸಿ
ಶಶಿಕಳೆಯು [ಸೂಗೂರ]ನೊಳು ಸಂಭ್ರಮದಿ ನೆಲಸಿ
ದಶ ಇಂದ್ರಿಯವೆಂದೆಂಬ ತಾಮಸಂಗಳನಳಿದು
ಅಸಮಾಕ್ಷಗಾರತಿಯ ಅರ್ಪಿಸಲುಬೇಕು ೫

೫೭

ಗುರುದರುಶನ ಎಮಗಾದೀತು ಕೇಳ್ಳೆ
ಗುರುಕಟಾಕ್ಷದ ಕರುಣದಲಿ
ಪರಿಪರಿ ವಿಷಯ ಹರಿದೋಯಿತು
ಪರಮಾನಂದನ ಮಹಿಮೆಯಲಿ ॥ ಪಲ್ಲ

ತನು ಮನ ಧನಗಳು ತತ್ತರಗೊಂಡವು
ಅನಿಮಿಷದೃಷ್ಟಿಯದಾಗಮದಿ
ವಿನಯದಿ ಷಡ್ಗುಣ ವಿಪರೀತವಾದವು
ಘನ ಗುರುಲಿಂಗನ ಧ್ಯಾನದಲಿ ೧

ಪಂಚ ಇಂದ್ರಿಯ ಪರವಶವಾದವು
ಪಂಚಾಕ್ಷರಿ ಘನಮಂತ್ರದಲಿ
ಪಂಚಕಕಣ ಬಂಧಲಗಳಾದವು
ಪಂಚಾನನ ಶಿವಯೋಗದಲಿ ೨

ಸತ್ವ ರಜವು ತಾಮಸಗೆಯು ಪದ್ಯವು
ತತ್ವಜ್ಞಾನದ ತಾರಕದಿ
ತತ್ತರ ವಿಷಯವು ಉರಿದು ಹೋದವು
ಕರ್ತು ಸೂಗೂರನ ಕರುಣದಲಿ ೩

೫೮

ಬಾವಿಗೊ ಬಟ್ಟಬಯಲಾಗಿ ನಿಂದಿದೆ ತಿಳಿಯಿರೈ
ಭಾವಜ್ಞಪುರುಷಗೆ ನಿಜಹತ್ತು ತಿಂಗಳು ॥ ಪಲ್ಲ

ಅರಿವ ನದಿಯ ಮೇಲೆಯಿರುವೆ ಪಿಳ್ಳೈದವೆ
ಇರುವೆ ಪಿಳ್ಳೆಯ ಮೇಲೆ ಸ್ಥಿರಪಾನಲೈದವೆ
ಸ್ಥಿರಪಾನದ ಮೇಲೆ ಗಿರಿಗುಡ್ಡಲೈದವೆ
ಗಿರಿ ಗುಡ್ಡದ ಮೇಲೆ ತರುಣಿ ತಾನೈದಳೆ ೧

ಗಿರಿಯ ಸುತ್ತಿದ ಸರ್ಪ ಕುಳಿತು ಆಡುತಲಿದೆ
ಎರಡು ನಯನವಿಲ್ಲದಪರೂಪ ಕಾವಲು
ಕರುಳಿಲ್ಲದವನೊಬ್ಬ ಸರ್ಪನ ನುಂಗಿದ
ಈ ಪರಿಯ ನೋಡಲಿ ಬಂದ ಕಾಲಿಲ್ಲದವನೊ ೨

ಕೋತಿ ನುಂಗಿತುವೊಬ್ಬ ಬಾಯಿಲ್ಲದಾತನ
ಜ್ಯೋತಿ ತಾನಿರುವದು ಕೋತಿ ನೆತ್ತಿಯ ಮೇಲೆ
ನೀತಿಯನರಿಯದ ಭೂತ ಪ್ರೇತಗಳಲ
ಜಾತ ರಾಯನು ನಮ್ಮ ಸೂಗೂರ ಬಲ್ಲನು ೩

೫೯

ರೆಕ್ಕೆಯಿಲ್ಲದ ಪಕ್ಷಿ ರಕ್ಷಿಸಬಂದಿತು ಲಿಂಗ ನೋಡು ಭವ
ಬೆಕ್ಕುಗಳನು ನುಂಗಿ ಬಯಲಾಗಿ ನಿಂತಿತು ಲಿಂಗ ॥ ಪಲ್ಲ

ಅಕ್ಕರದಿಂದಲಿ ಐವರ ನುಂಗಿತು
ಮುಪ್ಪುರವನು ನುಂಗಿ ಮೂಜಗವಳ್ಯಾಡಿತು ೧

ಮೂರು ಆರನೆ ಕಚ್ಚಿ ಮೂವತ್ತ ನುಂಗಿತು
ಮೇರುವೆಯೊಳು ಹೋಗಿ ಮತ್ತಾರ ನುಂಗಿತು ೨

ಸರ್ಪ ಶೇಷವ ನುಂಗಿ ಸ್ಮರಣೆಯ ಮಾಡಿತು
ಕರ್ತು ಸೂಗೂರನೊಳ್ಪೆಪ್ಪಾಗಿ ನಿಂತಿತು ೩

೬೦

ಒಂದು ತಿಳಿಯದುದ್ಯೋಗೆ ನಿಂದು ನೋಡಿರಿ ನೀವು
ಬಂಧನವ ತನುವಳಿದು ಬಯಲಾದ ಬಗೆಯ ॥ ಪಲ್ಲ

ಚಂದವಾಗಿಹ ಪಕ್ಷಿ ಒಂದು ಬ್ರಹ್ಮನ ನುಂಗಿತು
ನಿಂದಿದ್ದ ಸುರಮುನಿಗಳೆಲ್ಲರನು ನುಂಗಿ
ಪೋದಿದ್ದ ಬಾಂಧವರ ಬಳಗವೆಲ್ಲವ ನುಂಗಿ
ಅಂದವಾಗಿರುವಂಥ ಕಂದನನು ನುಂಗಿ ೧

ಹುಲಿಯ ನುಂಗಿತುವೊಂದು ಹುಲ್ಲೆಯ ಮರಿ ಬಂದು
ಇಲಿಯು ನುಂಗಿತು ಏಳು ಬೆಕ್ಕಿನ ಮರಿಯ
ಮೊಲವು ನುಂಗಿತು ನೋಡಿ ಮನೆಮಕ್ಕಳೈವರನು
ಕಲಿಯೆಂಬನವಳವಳ ಕೋಳಿ ನುಂಗಿಹುದು ೨

ಕರಿಯು ನುಂಗಿತುವೊಂದ ಕಾಡಸಿಂಹದ ಮರಿಯು
ನರಿಯು ನುಂಗಿತು ಮೂರುಲೋಕವೆಲ್ಲವನು
ಇರುವೆ ಹೆಗ್ಗಣ ನುಂಗಿ ಈಶ ಸೂಗೂರನೊಳು
ಕುರಿಹಿಂಡುಗಳ ನುಂಗಿ ಕುಲವನಳಿದಿಹುದು ೩

## ಗುರುಲಿಂಗಸಂಗ ಅಂಕಿತದ ಸ್ವರವಚನ

೬೧

ಕಂಡಿರಾ ಆತ್ಮ ಕನಸಿನ ವಿಪರೀತವ
ಮುಂಡೆ ಮಗನ್ಹೆತ್ತು ಮುದ್ದಾಡುತಿಹುದ ॥ ಪಲ್ಲ

ಆನೆ ನುಂಗಿತು ಆಡ ಮರಿಯುನು
ಶ್ವಾನ ನುಂಗಿತು ಸುರಲೋಕವೆಲ್ಲ
ಹೇನು ನುಂಗಿತು ವಿಡಿ ಕಪ್ಪೆಯು
ಮೀನು ನುಂಗಿತು ಬೆಸ್ತರ ಬಲೆಯುನೆಲ್ಲ ೧

ಹದ್ದು ನುಂಗಿತು ಆನೆಮರಿಯುನು
ಗೊದ್ದ ನುಂಗಿತು ಕೋಡಗ ಹಿಂಡನು
ಎದ್ದು ಹಾರುವ ಗುಬ್ಬಿ ಏಳೂರ ನುಂಗಿತು
ಶುದ್ಧ ಮೂಡಲವ್ಯಾಗ ನರಿಯು ನುಂಗಿಹುದು ೨

ಇರುವೆ ನುಂಗಿತು ಇಲಿ ಹೆಗ್ಗಣಮರಿಯುನು
ಕುರಿಯು ನುಂಗಿತು ತೋಳ ಹಿಂಡುಗಳ
ಪರಿಯುನೆಲ್ಲವ ನೋಡಿ ಬಲ್ಲಂತ ಪುರುಷರು
ಗುರುಲಿಂಗಸಂಗನ ಕುರುಹು ಗೂಢಾರ್ಥ ೩

## ಶಾಂತ ಕಂಬಾಳೇಶ ಅಂಕಿತದ ಸ್ವರವಚನಗಳು

೬೨

ಬೇಡ ಸಾರಿದೆನಾತ್ಮ ನೋಡಿ ಶಿವಮಾರ್ಗವನು
ಕೂಡಿನಡಿನೀತನೀತಿಗಳ ನೀನರಿದು ॥ ಪಲ್ಲ

ಕಾಡದಿರು ಸುಜನರನು ಕೂಡದಿರು ಮೂರ್ಖರನು
ಬೇಡದಿರು ಲೋಭಿಯನು ಅನ್ಯಧನವ
ನೋಡದಿರು ಪರನುತಿಯ ಪಾಡದಿರು ಪಾತಕರೊ
ಳಾಡದಿರು ಕಡುದುಃಖವಹುದು ನಿನಗಾತ್ಮ ೧

ಜರಿಯದಿರು ಸತ್ಯರನು ಮರೆಯದಿರು ಪ್ರಣವವನು
ತೊರೆಯದಿರು ಅಪಜಯದೊಳಾದವರನು
ಬೆರೆಯದಿರು ಕುಲವಳಿದು ಕಂಡ ಜಾತಿಗಳೊಡನೆ
ನೆರೆಯದಿರು ಪರರೊನಿತೆಯರಿಗೆ ಮನವೆಳಸಿ ೨

ಹಂಬಲಿಸದಿರು ಹಲವ ನಂಬಿಗಿಲ್ಲದನೊಡನೆ
ತುಂಬಿಕೊಂಡಿರು ತನುವಿನಿರವಗೊಡದೆ
ಬೆಂಬಿಡದೆ ಶಾಂತಕಂಬಾಳೇಶನಂ ಭಜಿಸಿ
ಇಂಬೆಸೆವ ಪದವಿಗಳ ಪಡೆದು ನೀ ಸುಖಿಸ ೩

೬೩

ರಾಗ : ದೇಶಿ

ಪ್ರಾಣಲಿಂಗವ ಪೂಜಿಸುವ ಪರಿಗಳೆಂತೆನಲು
ಕ್ಷೋಣಿಯೊಳು ಬಿಡದೆ ಬಲ್ಲಂತೆ ಪೇಳುವೆನು ॥ ಪಲ್ಲ

ತನ್ನ ದೇಹದ ದೇಗುಲದಿ ಲಿಂಗವನು ನಿಲಿಸಿ
ಉನ್ನತದ ಶಿರವೆಂಬ ಕಳಸವಿರಿಸಿ
ಮುನ್ನ ಮನವೆನಿಪ ವಾರಿಯೊಳು ಮಜ್ಜನಕೆರದು
ಇನ್ನು ನಾಲಿಗೆಯೆಂಬ ಘಂಟೆಯಿಂದ ೧

ಎಸೆವ ನಯನವೆ ಜ್ಯೋತಿ ಅತಿಪ್ರಾಣ ಬೀಸಣಿಗೆ
ಅಸಮೆರಡುತೋಳುಗಳು ನಂದಿಧ್ವಜವು
ಪ್ರೊಸತೆನಿಪ ತನ್ನ ಕರ್ಣವೆ ಗವಾಕ್ಷಿಗಳಾಗಿ
ಕುಶಲದೊಳು ಕೊನರಿ ಕೋವಿದರು ಬಿಡದೆ ೨

ಮನದ ಸದ್ಧರ್ಮಗಳು ಮಿಗೆ ನಂದಿಕೇಶ್ವರನು
ಘನವೆನಿಪ ಕರಣ ಮಣಿತಿಂಥಿಣಿಗಳು
ವಿನುಗುತಿಪ್ಪಷ್ಟಭೋಗಗಳಷ್ಟವಿಧಪೂಜೆ
ತನುಗಲಿಯ ಷೋಡಶುಪಚಾರದಿಂದ ೩

ಮೂರು ಗುಣವೆಂಬುವತಿಮೂರು ಕಾಲಡ್ಡಣಿಗಿ
ಮೀರಿದ ಸುಪರಿಪೂರ್ಣ ಪರಿಯಾಣವು
ಭೋರೆನಿಪ ನಿರ್ಮಲಲಿಂಗವೆ ಭೋಜನಗಳಾಗಿ
ಸಾರಭಕ್ತಿಯು ರಾಗರಸವೆ ತಾಂಬೂಲ ೪

ಈ ಪರಿಯೊಳಿಂತಪ್ಪ ಪೂಜೆಯಿಂ ಪಗಲಿರುಳು
ನೇಪಕದಿ ಶಾಂತಕಂಬಾಳೇಶನಾ
ಶ್ರೀಪಾದಪಂಕಜವ ಬಿಡದೆ ಭಜಿಸಲು ಮುಂದೆ
ಸೋಪಾನ ಉಂಟು ಮುಕ್ತಿಯ ಮೂಲಕೆ ೫

೬೪

ಮಾಡಿದುಪಕಾರವನು ಮನದೊಳರಿಯದೆ ಮುನಿದು
ಕಾಡಿ ಕೆಡುವನ ಸಂಗ ಬ್ಯಾಡವೆಲೆ ಮನವೆ ॥ ಪಲ್ಲ

ಜೀವಿತೇಶನ ಸತಿಯು ಉರದ ಮೇಲ್ವಿಷ ಬೀಳೆ
ಸಾವಳೆನುತಲಿ ಮಂತ್ರಿ ತೆಗೆಯೆ ಕೊಲಿಸಿದನು
ಹಾವು ಕಚ್ಚಿದ ಹಣ್ಣ ಸವಿದು ಜನ ಸಾಯೆ ಸಂ
ಜೀವನಿಯ ತಂದ ಗಿಳಿಯನು ಕೊಂದ ಮುನಿಪ ೧

ಶುನಿಯ ಸಾಲಕ್ಕಡಹನಿಕ್ಕಿ ಪೋಗಲುಬೇಡ
ಮನೆಗೆ ಕಳುಹಿಸಿಕೊಂಡು ಬರೆ ಕಡಿದನು
ವನದೊಳು ಕಿರಾತ ಜಲನೀಂಟಿ ಕೆಡಿಸಲು ಗಿಡುಗ
ತನಗೆ ಹಿತವೆನುತ ತಿಳಿಯದೆ ಕೊಂದನದನು ೨

ಶೋಕ ಮುಂಗುಲಿಯು ಸರ್ಪನ ಕಡಿದು ಬರಲಾಗ
ಹಾಕಿ ಕೊಂದಳು ಕೊಡನ ಒಕ್ಕಲಗಿತ್ತಿಯು
ಬೇಕೆಂಬ ಪದವಿಗಳನಿತ್ತ ಬ್ರಹ್ಮನ ಬಡಿದು
ಕಾಕುಮಾಡಿದರು ಮುಪ್ಪುರದ ನಾಯಕರು ೩

ಭಲ್ಲುಕನು ಭೂರವಣನೊಳು ನಂಬಿ ನಿದ್ರಿಸಲು
ಅಲ್ಲಿ ಹುಲಿಗದ ನೂಕಿ ಕೊಲ್ಲಿಸಿದನು
ಬಲ್ಲಿದವನೀಶ ಕಟ್ಟಿದ ಕೇರಿಯು ನಿಲ್ಲದಿರೆ
ಸೊಲ್ಲು ಹಿತಗಳ ಹೇಳಿ ಮಡಿದ ಗೋರಾಂಟ ೪

ಹಾದಿಯೊಳು ಬೇಡ ಬಾಯಾರಿ ಬರೆ ಕಪಿ ಜಲವ
ಭೇದವಿಲ್ಲದೆ ತೋರಲದನೆಸೆದನು
ಈ ಧರೆಯೊಳಗೆ ಶಾಂತಕಂಬಾಳೇಶನಂಘ್ರಿಗೆ ಬೇ
ಕಾದ ಹಿತಗಳ ಮಾಡಿ ಹಗೆಯಾದರುಂಟೆ ೫

೬೫

ಅಂಗ ಮಾಸಿದಡಷ್ಟವರಣದಿಂ ತೊಳೆಯದೆ
ಗಂಗೆಯೊಳು ಮುಳುಗಿ ಮೀಯಲು ಮುಕ್ತಿಯುಂಟೆ ॥ ಪಲ್ಲ

ಹಲವು ಜನ್ಮದಿ ಹುಟ್ಟಿ ನೆಲೆಗಳಿಲ್ಲದೆ ನೊಂದು
ಸಲೆ ದುಃಖ ಸುಖಗಳನನುಭವಿಸುತ
ಕೆಲವು ಕಾಲದೊಳಿಪ್ಪ ಮಲಭಾಂಡ್ಯದೇಹವನು
ಬಲುನೀರೊಳನುದಿನವು ತೊಳೆಯೆ ಶುದ್ಧವಹುದೆ ೧

ಮಂಡುಕಂಗಳು ಮತ್ಸ್ಯ ಕಮಟಂಗಳುದಕದಿಂ
ತಂಡತಂಡದ ಜೀವಿಗಳು ನಿತ್ಯ ಮುಳುಗಿ
ಕೊಂಡೇಳುತದರೊಳು ಸತ್ತು ಹುಟ್ಟಿಯು ಮುನ್ನ
ಕಂಡಪ ಕೈಲಾಸದಿರವ ಕೇಳ್ಮನುಜ ೨

ಎಸೆವಷ್ಟಮದ ಸಪ್ತವ್ಯಸನದಿಂ ತನುವೆಲ್ಲ
ಮಸುಳಿಸಿ ಮಲಿನಗೊಂಡಿರ್ಪುದನರಿದು
ಕುಶಲದಿಂ ಶಾಂತಕಂಬಾಳೇಶನಂಘ್ರಿಯು
ಮಿಸುಪ ಜಲಗಳ ಮೀಂಟಿ ಮೀಯಬೇಕೆಲವೊ ೩

೬೬

ಸಶಿಯುಳಿಲ್ಲದ ಬಳಿಕ ಸಕಲ ಯೋಗಗಳೇಕೆ
ಅತಿಹಿತದೊಳೊಲಿದು ಸಮರಸ ಸುಖವ ಮಾಳ್ಪ ॥ ಪಲ್ಲ

ಮಂಟಪಾಲಯವ್ಯಾಕೆ ಮೋಹದನ್ನೆಗಳ್ಯಾಕೆ
ಘಂಟೆ ಉಂಗುರಾಭರಣವ್ಯಾಕೆ
ನೆಂಟುಬಂಧುಗಳ್ಯಾಕೆ ನಿಜಕಳೆಗಳಿನ್ಯಾಕೆ
ಉಂಟೆನಿಪ ರಾಜಮನ್ನಣೆಗಳ್ಯಾಕೆ ೧

ಸಣ್ಣಬಣ್ಣಗಳ್ಯಾಕೆ ಸೊಕ್ಕುಜವ್ವನವ್ಯಾಕೆ
ನುಣ್ಣಿಸುವ ನೀಟ ಲಾವಣ್ಯವ್ಯಾಕೆ
ಎಣ್ಣೆಮೊಯಗಳ್ಯಾಕೆ ಎಸೆವ ತಾಂಬುಲವ್ಯಾಕೆ ೨
ಕಣ್ಣೆನಲಿ ಮಾಳ್ಪುತ್ಸಹಂಗಳ್ಯಾಕೆ

ಹಾಸುಮಂಚಗಳ್ಯಾಕೆ ಹಣಧಾನ್ಯವಿರಲ್ಯಾಕೆ
ಹೊಸುತಿಹ ಪರಿಮಳೈಶ್ವರಿಗಳ್ಯಾಕೆ
ಈಶ ಗುರು ಶಾಂತಕಂಬಾಳೇಶನಿತ್ತನುಗಾಲ ೩
ಬ್ಯಾಸರಿಲ್ಲದೆ ನೆರೆದು ಭೇದವಳಿದಿರುವ

## ಹುಚ್ಚನಂಜೇಶ ಅಂಕಿತದ ಸ್ವರವಚನಗಳು

೬೭

ರಾಗ : ಶಂಕರಾಭರಣ

ನಿನ್ನ ನಾನೇನುವಂ ಬಯಸೆ ಬಳಲಿ ಏ ಗುರುವೆ
ಬೆನ್ನೊಳು ನೀನಿಹನಂತಚೋದ್ಯಪದ ಸಾಕು ॥ ಪಲ್ಲ

ಅರಸುತನವು ಬೇಡ ಅದಕೆ ಖುರದ ಶಲ್ಯ
ಧರೆಯನಾಳುವ ರಾಯನಾನೆ ಮುನ್ನ ಬೇಡ
ಸುರಪತಿಯ ಭೋಗತಿಶಯ ಬೇಡ ನೀಯೆನ್ನ
ಶರಿರದೊಳಹೊರಗಿಪ್ಪ ಸುಖವ ಕಾಣ್ಬುದೆ ಸಾಕು ೧

ಅಣಿಮಾದಿ ಅಷ್ಟಸಿದ್ಧಿಯು ಬೇಡ ನೀ ನಿಕ್ಕ
ಅಣುರೇಣು ತೃಣಕಾಷ್ಠ ಭರಿತವಾದ ಆ
ಗಣನೆಯಿಲ್ಲದ ಸುಖದಣೆಯ ತೋರಿಸಿ ನಿ
ರ್ಗುಣ ಸಾಮ್ರಾಜ್ಯವಿತ್ತೀಶನಯ್ಯ ಗುರುವೆ ೨

ಅಷ್ಟದಿಕ್ಪಾಲಕರ ಅಧಿಕಾರಿತನ ಬೇಡ
ದಿಟ್ಟ ಮುನಿಗಳ ಶ್ರೇಷ್ಠಜೀವವು ಬೇಡ
ಬಿಟ್ಟಿರದೆನ್ನ ನೀ ಕೂಡಿರ್ಪ ಸುಖದ ಸಂ
ತುಷ್ಟಿಯದನೆ ಕೊಟ್ಟು ಸಲಹೆನ್ನ ಸದ್ಗುರುವೆ ೩

ಶರೀರವಿಡಿದು ಬಾಳ್ವ ಹರಿಬ್ರಹ್ಮಪದ ಬೇಡ
ಪರ ಪ್ರಮಥರುದ್ರಗಣಪದ ಮುನ್ನ ಬೇಡ
ಪರಮ ಗುರುವೆ ನಿನ್ನ ನಿಜ ಶರೀರದೊಳೆನ್ನ
ಬೆರಸಿಕೊಂಡಿರ್ಪ ಸುಖವ ಕಾಣ್ಬುದೆ ಸಾಕು ೪

ತುಚ್ಛವಗಳಿಗೆ ಸೊಲ್ಲಿಸದೆನ್ನ ನಿನ್ನೊಳ
ಗಚ್ಚೊತ್ತಿದಂತಿರ್ದೆರಡಿಲ್ಲದ
ಹೆಚ್ಚಿನ ಪದವಿತ್ತು ಸಲಹುವ ವಿರಕ್ತ
ಹುಚ್ಚನಂಜೇಶ ಶ್ರೀ ಗುರುರಾಯ ಶಂಭುವೆ ೫

೭೮

ರಾಗ : ಸೌರಾಷ್ಟ್ರ

ಗುರುವೆ ನಿನ್ನೊಳಗೈಕ್ಯಪದವಲ್ಲದೆ ಬೇರೊಂ
ದೊರಬೇಡೆಂಬವರ ಸಂಗದೊಳಿರಿಸಯ್ಯ ॥ ಪಲ್ಲ

ನೆನೆವುತ್ತ ನಿನ್ನನೆ ಮನದೊಳಿರಡಿಲ್ಲದೆ
ವನಿತೆ ವಾಹನ ವಸ್ತ್ರಾಭರಣ ಭ್ರಾಂತಿಗಳ
ನೆನಹು ನಿಷ್ಪತ್ತಿಯಾದ ಮಹಾನುಭಾವದ
ಘನಸು....ರೆಗಳ ಸಂಗದೊಳಿರಿಸಯ್ಯ ೧

ನೀಡಿ ಮಾಡುತ ನಿನ್ನವರದೊಂದರ್ತಿಯ
ನೋಡುತಾನಂದಸುಖದೊಳು
ಆಡುತ ಅತಿಹರುಷದಿಂದಲಲಸಿನೊಳು
ಕೂಡಿಪ್ಪವರ ಸಂಗದೊಳಿರಿಸಯ್ಯ ೨

ಸತ್ಯ ಸದ್ಧರ್ಮ ಸದ್ಗುಣ ಸೈರಣೆ ಶಾಂತಿ
ಯುಕ್ತಿಯೊಳಗೆ ಬಾಳುತ ಮತ್ತತ್ಯುತ್ತಮರ
ಯುಕ್ತಿಯ ಮೋಹದ ಚಿತ್ತದ ಬಲ್ಲು ಹೊಳೆವ
ರೊತ್ತಿಲಿರಿಸಿ ರಕ್ಷಿಸು ರಕ್ಷಿಸಯ್ಯ ೩

ಒಂದು ದಿವ ಒಂದು ಹಗಲೊಂದು ಜಾವ ಮ
ತ್ತೊಂದು ಗಳಿಗೆ ಮನಸಂದು ಲಿಂಗದೊಳು
ಒಂದಲ್ಲದೆರಡರಿಯದ ಲಿಂಗೈಕ್ಯ
ಕಂದನ ಮಾಡಿ ಸಲಹು ಸಲಹಯ್ಯ ೪

ಇಂತು ಏಕಾರ್ಥವಲ್ಲದೆ ಬೇರ್ಬೇರೆ ನೀನಾನೆಂ
ಬಂತದರಿವದಂತಿರಲಿ....ರೊಳಗೆ
ಯಂತ್ರ ವಾ[ಹಕ] ಹುಚ್ಚನಂಜೇಶ ನಿನ್ನ ಕೂಡು
ವಂತುಟಿಲ್ಲದೆ ಬೇರೊಂದಿಲ್ಲ ನಿಮ್ಮಾಣೆ ೫

೭೯

ಕಾಕ ತೇಲೋದು ಕಾಂಬಾ ಮನವೆ
ಏಕೆ ಸುಮ್ಮಗೆ ಅವಿವೇಕದೊಳು ಬಾಳ್ವೆಯತಿ
ಕಾಕುಬುದ್ಧಿಯನತಿಗಳೆದು ಮನವೆ ಆಗ
ವೇಕ ಶ್ರೀ ಪರಮ ಗುರುವಿನೊಳೈಕ್ಯವಾಗಿರುವ
ಜೋಕೆಯೊಳು ನಿಲು ನೀ ಮನವೆ ॥ ಪಲ್ಲ

ಮನವೆ ಹುಟ್ಟಿದಂದಿಂದ ಕರ್ಮದ ಪಾಸದೊಳಗೆ
[ಮನವೆ]ನೀ ಕಷ್ಟಪಡದೆ ಯಾನ ಭಾ....
ಮನವೆ ಕಷ್ಟವನು ತಿಳಿದು ಹಿಮ್ಮೆಟ್ಟದೆ
ಮನದರುದುಗಟ್ಟಿಗೊಂಡು ನೀಗಿಲ್ಲಲೊಡವೆ
ಮನವೆ ಹುಟ್ಟಳಿದು ಹೊ .......ಯನು
ಮನವೆ ದಿಟ್ಟತನದಲ್ಲಿ ನಡಯಲೊಡನೆ
ಮನವೆ ಕಟ್ಟಳೆಯಿಲ್ಲದ ಗುರುವು ತನ್ನ ನಿಜದ ಸುಖವ
ಸೂರೆಬಿಟ್ಟು ಕೂಡಿಹ ನಿನಗೆ ಮನವೆ ೧

ಮನವೆ ವೇಷದ ಮರೆಯ ಬಹುರೂಪಿಯಾ
ವನ ಹೊರವೇಷವನು ಕಂಡು ನೋಟಕರು
ಮನವೆ ದೂಷಣೆ ಭೂಷಣೆಗಳಿಂ ನುಡಿಯಲು
ಕೇಳಿ ಕ್ಲೇಶ ಹರುಷವಿಲ್ಲದಿಪ್ಪಂತೆ ಮನವೆ
ಈಶನೊಬ್ಬನೆ ವಿಶ್ವರೂಪು ನಿನದ....ಪದದಲ್ಲಿ ನೀ ನಿಲಲು
ಮನವೆ ಮೊಸಲಾದ ಘನಸುಖದರಾಶಿ
ನಿನಗಹುದದ ನೀ ಲೇಸಾಗಿ ನಂಬಿರಲೊ ಮನವೆ ೨

ಮನವೆ ಐಶ್ವರಿಯುವಹ ಗುರುವಿನ
ಪೆಚ್ಚಿನಾಟವ ಕಂಡು ಬೆಚ್ಚಿ ಬೆದರದೆ ನೀ ನಿಲಲು
ಮನವೆ ನಿಚ್ಚ ಕೇಡಿಲ್ಲದಿಹ....ಹುದದ
ವಿನಚ್ಚಿನಿಂದಿರು ಕಂಡಾ ಮನವೆ ೩

ಮನವೆ ಪಚ್ಚೆವಿಲ್ಲನ ವೈರಿ ಪರಮ ಕಾರು
ಣ್ಯನ ಹುಚ್ಚ ನಂಜೇಶ್ವರನು ನಿನ್ನ....
....ಯಿಚ್ಚೆಯರಿತು....ನಂತಿರುವ
ಶುಕವ ಮುಚ್ಚಿನಿಂದಿರು ಕಂಡ ಮನವೆ ೪

## ನಿರ್ವಯಲಲಿಂಗ ಅಂಕಿತದ ಸ್ವರವಚನಗಳು

೭೦

ಆಯಿತಾಯಿತು ಆಯಿತಾಯಿತು ಎನಗೆ ಶ್ರೀ ಗುರುಕೃಪೆ ॥ ಪಲ್ಲ

ಅನಾದಿಸಂಸಿದ್ಧವಾಗೆನ್ನ ಕೂಡಿರ್ದ
ಹೀನ ಮಾಯ ಮೋಹದ ಶಶಿ
ತಾ ನೋಡಿ ಕಡೆಗೆ ಪಾರಿದಳೆನ್ನಿ [ರ]ವ ಕಂಡು
ನಾನಿರ್ದ ನಿಜ ಒಟ್ಟಬಯಲೊಳು ೧

ತಾನು ತಾನೆಂಬ ಅಜ್ಞಾನಸಖಿಸುವಾ ಸು
ಜ್ಞಾನಮಿತ್ರನ ಕೂಡಾಡಲು ಕಂಡು
ತಾ ಮುನಿದು ಕಡೆಗೆ ಸಾರಲು ಮೋಘವಿಲ್ಲದ
ಭಾನುವಿನಂತಿರ್ದೆ ಸುಖದಿಂದ ೨

ಒಳಹೊರಗೆನ್ನದೆನ್ನನು [ತೀ]ವಿಕೊಂಡಿರ್ದ ಕರುಣ
ಒಳಗ ಸುಳುಹನಾರನು ಕಾಣೆ
ಥಳಥಳಿಸುವ ನಿರ್ವಯಲಲಿಂಗದಾಶ್ರಯ
ಬೆಳಗ ನೋಡುತ [ನಿರ್ವಯಲ] ಮುಟ್ಟಿದೆನು ೩

೭೧

ರಾಗ : ದೇಶಿ

ಚಿಂತೆಯುಳಿದು ನಿಶ್ಚಿಂತೆಯೊಳಗೆ ಬಾಳ್ವ ಮ
ಹಂತರೆನಗೊಮ್ಮೆ ತೋರಿರೆನಗೆ ಸದ್ಗುರುವೆ ॥ ಪಲ್ಲ

ಹಸು ತೃಷೆ ನಿದ್ರೆ ನೀರಡಿಕೆ ವಿಷಯಗಳರತು
ಕುಸುಮ ತಾಂಬೂಲ ವಸನ ಜಲಭೋಗವ
ಹಸನಾಗಿ ಬಿಟ್ಟು ನಿರಾಶೆಯೆಂಬೀ ರಾಜ್ಯಪದ
ದೊಸಗೆಯೊಳು ಬಾಳ್ವ ಮಹಿಮರ ತೋರು ಸದ್ಗುರುವೆ ೧

೭೨

ಅರಿಷಡ್ವರ್ಗಷ್ಟಮದ ನವಪೆಸನಗಳು
ಮರಿತ ರಾಗದ್ವೇಷರಹಿತವಾ
ಹರಿದರಿಯ ಪರದೇಶ ರಾಜ್ಯವನಾಳ್ವ
ಅರಸುಮಗನನು ತೋರಿಸೆನಗೆ ಸದ್ಗುರುವೆ ೨

ಒಂದೇ ವಸ್ತುವೆ ಹಲವೆನಿಸಿ ರಜನೆಗೆ ಬಂದು
ಅಂದರಿಯೊಳು ಹಲವು ವೇದವ
ಚಂದದಿಂದರಿದು ನಿರ್ವಯಲಲಿಂಗವನಪ್ಪಿ
ಒಂದಾದವರ ತೋರಿಸೆನಗೆ ಸದ್ಗುರುವೆ ೩

೭೨

ಬಲ್ಲೆ ಬಲ್ಲೆನೆಂದು ನೀ ಬರಿದೆ ನುಡಿಯಲು [ಬೇಡ]
ಎಲ್ಲವ ಬಲ್ಲಂತ ಶಿವನೆಂದು ಸುಮ್ಮನೆ ಬಲ್ಲವನು ॥ ಪಲ್ಲ

ಶರಧಿಯೊಳು ಪುಟ್ಟಿದ ತೆರೆ ನೊರೆ ಬುದ್ಬುದಂಗಳು
... ....ವಗಿ ಸುಮ್ಮನಿರು ನೀ ಬಲ್ಲವನು ॥ ೧

ಮುಯಿ ಸಿಲ್ಲು ಅಶಮಧ್ಯದಿನಾ ಚೆಲುವಿಂದೊಗೆದು
ತೋರುವ ಕೇಡಿಲ್ಲದಂದದಿ ತೋರುವ
ಆ ಬಗೆಯ ಬಯಲೊಳಡಗುವ ಪರಿ ನೀನಿರಲು
ನೋಡಿ ನಗುತ ಬೇಗದೊಳಗಲದಿರ ನೀ ಬಲ್ಲವನು ೨

ಎಲ್ಲೆಲ್ಲಿ ನೋಡಿ....ಶಿವನಲ್ಲದೆ ಮತ್ತೆ
ಬೇರಿಲ್ಲಯೆಂದೆ ಬರಲು ಕರಿಗೊಂಡು
ಎಲ್ಲ ತಾನಾದ ನಿರ್ವಯಲಲಿಂಗವನಪ್ಪಿ
ಬಲ್ಲೆನೆಂಬ ಸೊಲ್ಲುಡುಗಿ ಸುಮ್ಮನಿರು ನೀ ಬಲ್ಲವನು ॥ ೩

೭೩

ವ್ಯಕ್ತದತಿಶಯಗಳನು ವಿರತಿಯಿಂದಲೆ ಗೆಲಿದು
ಮುಕ್ತಿ ತಾ ರೂಪುವೆತ್ತಂತೆ ಸುಳಿ ಸುಳಿವ ದೇಶಿಕನ ಬೆಡಗ ॥ ಪಲ್ಲ

ಆಗ ಮುಸುಕಿದ ಮಾಯಾಜಾಲೆಗೆ ಸಿಕ್ಕದೆ
ಲಿಂಗದೊಳಗಲದಿಪ್ಪರಿವಿನಾನಂದವು ಹೆಚ್ಚಿ
ಬಗೆಬಗೆಯಲ್ಲಿ ಸುಳಿದಾಡುತಾ ಬರುವ
ವಿಗಡಮೂರ್ತಿಯ ವಿನೋದದ ಬೆಡಗ ॥ ೩

ಎಂದೆಂದು ಕೆಡದೊಪ್ಪುತಿಪ್ಪ ಭ್ರಮದಿ ಮನ
ಸಂದು ಸಂದಳಿದು ಸಹಜಜ್ಞಾನಸುಖದೊಳು
ನಿಂದುವಮಪ್ಪಡೆ ಪ್ರೊದರಿಲ್ಲದ ನಿತ್ಯ
ಸಂದ ಪದದರಿಗೈಕ್ಯನ ಬೆಡಗ ೪

ಎಂತಿರ್ದುದಂತೆ ಸಹಜವೆ ದೂತರನೊಳಗ
ರಿಂತೆಂಬಹವನತಿಗಳೆದು
ಭ್ರಾಂತುರಹಿತ ನಿರ್ವಯಲಲಿಂಗದೊಳೋ
ರಂತೆ ಕೂಡಿಪ್ಪ ಏಕಾಂಗಿಯೆಾ ಬೆಡಗ ೫

೭೪

ರಾಗ : ಸಾಳಗ
ಎನ್ನ[ವರೆ]ನಬಹುದು ನೋಡೆಲ್ಲರಂತಾಡುವ ಮ
ಹಾನುಭಾವದಿ ನಿಂದ ಜ್ಞಾನಸಿದ್ಧನಮಾ ॥ ಪಲ್ಲ

ಜೀವ ಪರಮರೆಂದೆಂಬ ಸಂಧಾನವ
ಭಾವಿಸಿ ತಿಳಿದು ಬಟ್ಟಬಯಲು ಬಗೆಗೊಂಡು
ದೇವರಿಗೆ ದೇಗುಲವನೆ ತಾನೊಳಕೊಂಡು
ಪಾವನಮೂರ್ತಿ ಆನಂದಸಿದ್ಧನಮಾ ೧

ಸಕಲ ನಿಃಕಲವೆಂದೆಂಬುದುಭಯವ ತಿಳಿದು ಘನ
ಸುಖವಾದ ನಿಶ್ಚಲಪದದೊಳಗೊಂದೆ
ಮುಕುರದೊಳಗೆ ತೋರ್ಪ ಮುಖವ ತಾನೆಂದು ಲಿಂಗ
ಮುಖವ ತಿಳಿದು ನಿಂದ ಮುಕ್ತಿಸಿದ್ಧನನು ೨

ನಕ್ಕವರೊಳು ನಕ್ಕು ನಗಿಸುತಿರಲು ಕೂಡೆ
ಮುಚ್ಚಿಪರೊಡನೆಯುದ ಜಪ್ಪದೊ
ಛುಕ್ಕಿದಂತಪರವಿಂಗಿತಗಳಿಗೆ ತಾ
ಸಿಕ್ಕದೋಡುವ ಶಿವಯೋಗಿಸಿದ್ಧನನು ೩

ಇದ್ದು ಇಲ್ಲದ ಜಗದೊಳು ಹೊದ್ದಿ ಹೊಂ
ದದೆ ಬಾಳ್ವ ವಿದ್ಯ ಕರಿಗೊಂಡು ಭೂಭಾಗ
ಮಧ್ಯದೊಳು ಇಂತಿರ್ದು ವಿಶುದ್ಧಮುದ್ರಿತನಾದ
ನಿರ್ಧರ ಗುರುವಿನ ಬುದ್ಧಿಸಿದ್ಧನನು ೪

ಆಡುತ ಎಲ್ಲಪ ಏಕವೆಂದರಿದ ಮಾ
ತಾಡುತ್ತ ಮಹದರಿವಿನ ಬೆಳಗ
ನೋಡುತ ನಿರ್ವಯಲಲಿಂಗವು ತಾನಾದ
ಆರೂಢವಿಧದಿ ನಿಂದಜಾತಸಿದ್ಧನನು ೫

೭೫

ರಾಗ : ನಾಟಿ

ಮಾಡು ಸುಜ್ಞಾನಿಗಳ ಸಂಗವದು ನಿನಗೆ
ಕೂಡೆ ಕೃಪಾಲ[ಸ ಪ]ದವಿಯನ್ನೈದಿಸುವದು
ಮಾಡದಿರು ಅರಿತು ಅರಿಯದ ಮೂರ್ಖಜೀವರೊಡೆ
ನಾಡಿದರೆ ಕೇಡು ದುಃಖವದೆ ಆತ್ಮ ॥ ಪಲ್ಲ

ನಡೆ ಮಾತುತ್ಮಸಯುಗೆದೋರುತ ಶಿವಯೋಗಿಗಳು
ನಡೆವ್ರತಿಹರದಕದೆ ಸಾಕ್ಷಿ ನೀ ನೋಡು
ನಡೆ ಬೇರೆ ನುಡಿ ಬೇರೆಯಾಗಿ ತೋರಿಸಿ ಬಾಳ್ವ
ಜಡರ ಸಂಗವ ಸಾಕುಮಾಡು ಬೇಗ ಆತ್ಮ ೧

ಧರ್ಮಸ್ವರೂಪರೊಡನಾಡಿದರೆ ನಿನ್ನ ಪ್ರಾಣ
ಧರ್ಮಾಧರ್ಮವನು ತೋರು ನಿಮ್ಮ ....
.............. ಡುವರು
ಕರ್ಮಕುಟಿಲ ವೃಹತ ಕುಟಿಲತರ ಸಂಸರ್ಗದ
ಪೆರ್ಮೆಯನುನ್ಮನಿಮಾಣೆ ನಿಷ್ಕರ್ಮಿನೀಹಡೆ ೨

ಆವಾವ ತೆರದಿ ಬಾಳುತಿರ್ಪ....
ಭಾವಬುದ್ಧಿಯು ಕೇಳಿ ಬಾಳ
ಸಾವು ಹುಟ್ಟು ಸುಖದುಃಖಕೊಳಗಾದವರ ಸಂಗ
ಸೋವು ತಪ್ಪದು ಮುಂದೆ ಬಿಡು ಸಾರಿದಾತ್ಮಾ ೩

ಮುಂದನರಿದು...ದೆ ಮುರಿದು ಸಲೆ ಬಾಳುವದ
ರಂದವನು ತಿಳಿದು ನಿಶ್ಚಯಿಸಿ ನೀ ನಿಲ್ಲು
ಒಂದೊಂದು ಹೊತ್ತಿಗೊಂದೊಂದು ಬುದ್ಧಿಯ ನೆನೆವ
ಮುಂದಮತಿಗಳ ಸಂಗ ಸಾಕು ಸಾಕಾತ್ಮಾ ೪

ಇದು ನಿತ್ಯವಿದು ಸತ್ಯವೆಂದು ಬೇಗದಿ ನಿನ್ನ
ಹೃದಯದೊಳು ತಿಳಿದು ನಿರ್ವಯಲಲಿಂಗದೊಳು
ಹುದಿ[ಗಿ]ಕೊಂಡಿರೆ ನಿನ್ನ ಪುಣ್ಯಪಾಪದ ಘನ
ವಿಧಿವಿಕ್ಕಿ ಬರಲು ತಪ್ಪದೆಲೆಯಾತ್ಮಾ ೫

೭೬

ರಾಗ : ನಾಟಿ

ಅರಿದರಿದು ಶಿವಭಕ್ತಿ ಮೂರುಲೋಕದೊಳರಿದು
ಅರಿದರಿದು ಬಸವ ಜಯಿಸುವ ಬಗೆಯರಿದು
ಅರಿದರಿದು ಜವನ ಥಾಳಿಯ ಗೆಲುವುದರಿದು
ಅರಿದರಿದು ಶಿವಭಕ್ತರೊಡನಾಟವರಿದು ॥ ಪಲ್ಲ

ಅರಿದರಿದು ಸರ್ವಜನಸೇವ್ಯನಾಗೂದರಿದು
ಅರಿದರಿದು ಸರ್ವಪದವಳಿದುಳಿವುದರಿದು
[ಅರಿದ]ರಿದು ಸ್ವರತಿಯಾಡಿ ವಿರತನಾಗುವದರಿದು
ಅರಿದರಿದು ಸರ್ವ ವ್ಯಸ[ನ]ಮನವಳಿವುದರಿದು ೧

ಅರಿ[ದರಿ]ದು ತನ್ನಾತ್ಮವರಿತು ಬಾಳುವದರಿದು
ಅರಿದರಿದು ಅನ್ನದಾನವ ಮಾಳ್ಪುದರಿದು
ಅರಿದರಿದು ಚೆನ್ನೆಯರ ನುಡಿಗೆ ಸೋಲದಿಹುದರಿದು
ಅರಿದರಿದು ಶಿವನಂದಮಯನಾಹದರಿದು ೨

ಅರಿದರಿದು ನುಡಿದಂತೆ ನಡೆದು ತೋರುವದರಿದು
ಅರಿದರಿದು ಬಡವರನು ರಕ್ಷಿಸುವುದರಿದು
ಅರಿದರಿದು ಕೇಡಿಗನೊಳಿಡೆಯಾಂತುಕೊಂಬುದರಿದು
ಅರಿದರಿದು ಪ್ರುಢಶರಣನ ಸೇವೆಯರಿದು ೩

ಅರಿದರಿದು ತ್ಯಾಗಶೀಲವಾಗಿ ಬಾಳುವುದರಿದು
ಅರಿದರಿದು ಭೋಗದೊಳು ಮೈಮರೆಯದಿಹುದರಿದು
ಅರಿದರಿದು ರಾಗಸ್ವರಹಿತನಾಗುವುದರಿದು
ಅರಿದರಿದು ಮುಕ್ತಿಯ[ಪಡೆವುದರಿದ]ರಿದು ೪

ಅರಿದರಿದು....ದುರದಿ ಪೈದೋರದಿಹದರಿದು
ಅರಿದರಿದು ಮರೆಹೊಕ್ಕವರ ಕಾಯುವುದರಿದು
ಆರಿದರಿದು ನಿರ್ವಯಲಲಿಂಗದಿ ಜರೆದು ಬಾಳ್ವ
ಪರವೇಶಿಯರ....ಉದರಿದು ೫

## ಗಂಗೇಶ ಅಂಕಿತ ಸ್ವರವಚನ

೭೭

ಏಕಮುಖರುದ್ರಾಕ್ಷಿತಂಗಳಿರಲು
ಏಕಮುಖರುದ್ರಾಕ್ಷಿದೋರೆಯೆನಲೇಕೊ ॥ ಪಲ್ಲ

ಮನವೆಳಸಿದಂತೆ ಪರಿದಾಡುವಗೆ ಪಲವು ಮುಖ
ಘನವರಿಯದಿರುವ ಮರುಳಗೆ ಪಲವು ಮುಖ
ತ[ನು]ಮರಣಕಂಜಿ ಕಳವಳಿಸುವಗೆ ಪಲವು ಮುಖ
ಆನುವರ್ಗಕೆಲ್ಲ.... . ದಿರಲದೇಕಮುಖ ೧

ಪಶುಭಾವದಿಂ ತನ್ನ ತಾನರಿಯದಿರೆ ಪಲವು ಮುಖ
ವಿಸವುದೆಲ್ಲವ ಬಯಸಲು ಪಲವು ಮುಖ
ವಿಷಯಡೊಳು ಬಿದ್ದು ಮೈಮರೆದಿರಲು ಪಲವು ಮುಖ
ಕುಶಲ ತಾನಾಗಿ ಗುರುಪಾದವಿಡಿವುದೇಕಮುಖ ೨

ನೆರೆ ಹಮ್ಮು ಮಮಗೊಳಗಾಗಿರಲು ಪಲವು ಮುಖ
ತರುಣಿಯರ ಬಲೆಗೆ ಬೀಳಲು ಪಲವು ಮುಖ
ತಿರುಗಿ ಬರುವ ತವಕವ ಮಾಡಲದು ಪಲವು ಮುಖ
ಪರ ಗಂಗೇಶನೊಳು ಏಕವಾಗಿರಲೊಲ್ಲದೇಕಮುಖ ೩

## ಸಿದ್ಧಲಿಂಗ ಅಂಕಿತದ ಸ್ವರವಚನಗಳು

೭೮

ರಾಗ : ಮಧು
ಗೋವಿಂದಾ ಎನ್ನಿ ಬಲ್ಲವರೆಲ್ಲರು
ಗೋಕುಲಪತಿ ಬಸವಣ್ಣನೆಂದು ॥ ಪಲ್ಲ

ಕಾಡದಿರು ಸಜ್ಜನರನು ಕೂಡದಿರು ಮೂರ್ಖರನು
ಬೇಡದಿರು ಲೋಭಿಯನು ಅನ್ಯಧನವ
ನೋಡದಿರು ಪರಸತಿಯ ಪಾಡದಿರು ಪಾತಕರೊ
ಳಾಡದಿರು ಕಡುದುಃಖವಹುದು ನಿನಗಾತ್ಮ ೧

ಜರಿಯದಿರು ಸತ್ಯರನು ಮರೆಯದಿರು ಪ್ರಣಮವನು
ತೊರೆಯದಿರು ಅಪಜಯದೊಳಾದವರನು
ಬೆರೆಯದಿರು ಕುಲವಳಿದು ಕಂಡ ಜಾತಿಗಳೊಡನೆ
ನೆರೆಯದಿರು ಪರರೊನಿತೆಯರಿಗೆ ಮನವೆಳಸಿ ೨

ಹಂಬಲಿಸದಿರು ಹಲವ ನಂಬಿಗಿಲ್ಲದನೊಡನೆ
ತುಂಬಿಕೊಂಡಿರು ತನುವಿನಿರವಗೊಡದೆ
ಬೆಂಬಿಡದೆ ಶಾಂತಕಂಬಾಳೇಶನಂ ಭಜಿಸಿ
ಇಂಬೆಸೆವ ಪದವಿಗಳ ಪಡೆದು ನೀ ಸುಖಿಸ ೩

೬೩

ರಾಗ : ದೇಶಿ

ಪ್ರಾಣಲಿಂಗವ ಪೂಜಿಸುವ ಪರಿಗಳಿಂತೆನಲು
ಕ್ಷೋಣಿಯೊಳು ಬಿಡದೆ ಬಲ್ಲಂತೆ ಪೇಳುವೆನು ॥ ಪಲ್ಲ

ತನ್ನ ದೇಹದ ದೇಗುಲದಿ ಲಿಂಗವನು ನಿಲಿಸಿ
ಉನ್ನತದ ಶಿರವೆಂಬ ಕಳಸವಿರಿಸಿ
ಮುನ್ನ ಮನವೆನಿಪ ವಾರಿಯೊಳು ಮಜ್ಜನಕೆರದು
ಇನ್ನು ನಾಲಿಗೆಯೆಂಬ ಘಂಟೆಯಿಂದ ೧

ಎಸೆವ ನಯನವೆ ಜ್ಯೋತಿ ಅತಿಪ್ರಾಣ ಬೀಸಣಿಗೆ
ಅಸಮೆರಡುತೋಳುಗಳು ನಂದಿಧ್ವಜವು
ಪೊಸತೆನಿಪ ತನ್ನ ಕರ್ಣವೆ ಗವಾಕ್ಷಿಗಳಾಗಿ
ಕುಶಲದೊಳು ಕೊನರಿ ಕೋವಿದರು ಬಿಡದೆ ೨

ಮನದ ಸದ್ಧರ್ಮಗಳು ಮಿಗೆ ನಂದಿಕೇಶ್ವರನು
ಘನವೆನಿಪ ಕರಣ ಮಣಿತಿಂಥಿಣಿಗಳು
ವಿನುಗುತಿಪ್ಪಷ್ಟಭೋಗಗಳಷ್ಟವಿಧಪೂಜೆ
ತನುಗಲಿಯ ಷೋಡಶುಪಚಾರದಿಂದ ೩

ಮೂರು ಗುಣವೆಂಬುವತಿಮೂರು ಕಾಲಡ್ಡಣಿಗಿ
ವಿೂರಿದ ಸುಪರಿಪೂರ್ಣ ಪರಿಯಾಣವು
ಭೋರೆನಿಪ ನಿರ್ಮಲಲಿಂಗವೆ ಭೋಜನಗಳಾಗಿ
ಸಾರಭಕ್ತಿಯ ರಾಗರಸವೆ ತಾಂಬೂಲ ೪

ಈ ಪರಿಯೊಳಿಂತಪ್ಪ ಪೂಜೆಯಿಂ ಪಗಲಿರುಳು
ನೇಪಕದಿ ಶಾಂತಕಂಬಾಳೇಶನಾ
ಶ್ರೀಪಾದಪಂಕಜವ ಬಿಡದೆ ಭಜಿಸಲು ಮುಂದೆ
ಸೋಪಾನ ಉಂಟು ಮುಕ್ತಿಯ ಮೂಲಕೆ ೫

೭೪

ಮಾಡಿದುಪಕಾರವನು ಮನದೊಳರಿಯದೆ ಮುನಿದು
ಕಾಡಿ ಕೆಡುವವನ ಸಂಗ ಬ್ಯಾಡವೆಲೆ ಮನವೆ ॥ ಪಲ್ಲ

ಜೀವಿತೇಶನ ಸತಿಯು ಉರದ ಮೇಲ್ವಿಷ ಬೀಳೆ
ಸಾವಳೆನುತಲಿ ಮಂತ್ರಿ ತೆಗೆಯೆ ಕೊಲಿಸಿದನು
ಹಾವು ಕಚ್ಚಿದ ಹಣ್ಣ ಸವಿದು ಜನ ಸಾಯೆ ಸಂ
ಜೀವಿನಿಯ ತಂದ ಗಿಳಿಯನು ಕೊಂದ ಮುನಿಪ ೧

ಶುನಿಯ ಸಾಲಕ್ಕಡಹನಿಕ್ಕಿ ಪೋಗಲುಬೇಡ
ಮನೆಗೆ ಕಳುಹಿಸಿಕೊಂಡು ಬರೆ ಕಡಿದನು
ವನದೊಳು ಕಿರಾತ ಜಲನೀಂಟಿ ಕೆಡಿಸಲು ಗಿಡುಗ
ತನಗೆ ಹಿತವೆನುತ ತಿಳಿಯದೆ ಕೊಂದನದನು ೨

ಶೋಕ ಮುಂಗುಲಿಯು ಸರ್ಪನ ಕಡಿದು ಬರಲಾಗ
ಹಾಕಿ ಕೊಂದಳು ಕೊಡನ ಒಕ್ಕಲಗಿತ್ತಿಯು
ಬೇಕೆಂಬ ಪದವಿಗಳನಿತ್ತ ಬ್ರಹ್ಮನ ಬಡಿದು
ಕಾಕುಮಾಡಿದರು ಮುಪ್ಪುರದ ನಾಯಕರು ೩

ಭಲ್ಲುಕನು ಭೂರವಣನೊಳು ನಂಬಿ ನಿದ್ರಿಸಲು
ಅಲ್ಲಿ ಹುಲಿಗದ ನೂಕಿ ಕೊಲ್ಲಿಸಿದನು
ಬಲ್ಲಿದವನೀಶ ಕಟ್ಟಿದ ಕೇರಿಯು ನಿಲ್ಲದಿರೆ
ಸೊಲ್ಲು ಹಿತಗಳ ಹೇಳಿ ಮಡಿದ ಗೋರಾಂಟ ೪

ಹಾದಿಯೊಳು ಬೇಡ ಬಾಯಾರಿ ಬರೆ ಕಪಿ ಜಲವ
ಭೇದವಿಲ್ಲದೆ ತೋರಲದನೆಸೆದನು
ಈ ಧರೆಯೊಳಗೆ ಶಾಂತಕಂಬಾಳೇಶನಂಘ್ರಿಗೆ ಬೇ
ಕಾದ ಹಿತಗಳ ಮಾಡಿ ಹಗೆಯಾದರುಂಟೆ ೫

೭೫

ಅಂಗ ಮಾಸಿದಡಷ್ಟವರಣದಿಂ ತೊಳೆಯದೆ
ಗಂಗೆಯೊಳು ಮುಳುಗಿ ಮಿಯಲು ಮುಕ್ತಿಯುಂಟೆ ॥ ಪಲ್ಲ

ಹಲವು ಜನ್ಮದಿ ಹುಟ್ಟಿ ನೆಲೆಗಳಿಲ್ಲದೆ ನೊಂದು
ಸಲೆ ದುಃಖ ಸುಖಗಳನನುಭವಿಸುತ
ಕೆಲವು ಕಾಲದೊಳಿಪ್ಪ ಮಲಭಾಂಡ್ಯದೇಪವನು
ಬಲುನೀರೊಳನುದಿನವು ತೊಳೆಯೆ ಶುದ್ಧವಹುದೆ ೧

ಮಂಡುಕಂಗಳು ಮತ್ಸ್ಯ ಕಮಟಂಗಳುದಕದಿಂ
ತಂಡತಂಡದ ಜೀವಿಗಳು ನಿತ್ಯ ಮುಳುಗಿ
ಕೊಂಡೇಳುತದರೊಳು ಸತ್ತು ಹುಟ್ಟಿಯೆ ಮುನ್ನ
ಕಂಡವೆ ಕೈಲಾಸದಿರವ ಕೇಳ್ಮನುಜ ೨

ಎಸೆವಷ್ಟಮದ ಸಪ್ತವ್ಯಸನದಿಂ ತನುವೆಲ್ಲ
ಮುಸುಳಿಸಿ ಮಲಿನಗೊಂಡಿರ್ಪುದನರಿದು
ಕುಶಲದಿಂ ಶಾಂತಕಂಬಾಳೇಶನಂಘ್ರಿಯು
ಮಿಸುಪ ಜಲಗಳ ಮೀಟಿ ಮಿಯಬೇಕೆಲವೊ ೩

೭೬

ಸಶಿಯುಳಿಲ್ಲದ ಬಳಿಕ ಸಕಲ ಯೋಗಗಳೇಕೆ
ಆತಿಹಿತದೊಳೊಲಿದು ಸಮರಸ ಸುಖವ ಮಾಳ್ಪ ॥ ಪಲ್ಲ

ಮಂಟಪಾಲಯವ್ಯಾಕೆ ಮೋಹದನ್ನೆಗಳ್ಯಾಕೆ
ಘಂಟಿ ಉಂಗುರಾಭರಣವ್ಯಾಕೆ
ನಂಟುಬಂಧುಗಳ್ಯಾಕೆ ನಿಜಕಳೆಗಳಿನ್ಯಾಕೆ
ಉಂಟೆನಿಪ ರಾಜಮನ್ನಣೆಗಳ್ಯಾಕೆ ೧

ಸಣ್ಣಬಣ್ಣಗಳ್ಯಾಕೆ ಸೊಕ್ಕುಜವ್ವನವ್ಯಾಕೆ
ನುಣ್ಣಿಸುವ ನೀಟ ಲಾವಣ್ಯವ್ಯಾಕೆ
ಎಣ್ಣೆಮಿಯಗಳ್ಯಾಕೆ ಎಸೆವ ತಾಂಬೂಲವ್ಯಾಕೆ
ಕಣ್ಣೆಸಲಿ ಮಾಳ್ಪುತ್ಸಹಂಗಳ್ಯಾಕೆ ೨

ಹಾಸುಮಂಚಗಳ್ಯಾಕೆ ಹಣಧಾನ್ಯವಿರಲ್ಯಾಕೆ
ಹೊಸತೆಹ ಪರಿಮಳೈಶ್ವರಿಗಳ್ಯಾಕೆ
ಈಶ ಗುರು ಶಾಂತಕಂಬಾಳೇಶನಿತ್ತನುಗಾಲ
ಬ್ಯಾಸರಿಲ್ಲದೆ ನೆರೆದು ಭೇದವಳಿದಿರುವ ೩

## ಹುಚ್ಚನಂಜೇಶ ಅಂಕಿತದ ಸ್ವರವಚನಗಳು

೬೭

ರಾಗ : ಶಂಕರಾಭರಣ

ನಿನ್ನ ನಾನೇನುವಂ ಬಯಸೆ ಬಳಲಿ ಏ ಗುರುವೆ
ಬೆನ್ನೊಳು ನೀನಿಹನಂತಜೋದ್ಯಪದ ಸಾಕು ॥ ಪಲ್ಲ

ಅರಸುತನವು ಬೇಡ ಅದಕೆ ಖುರದ ಶಲ್ಯ
ಧರೆಯನಾಳುವ ರಾಯನಾನೆ ಮುನ್ನ ಬೇಡ
ಸುರಪತಿಯ ಭೋಗತಿಶಯು ಬೇಡ ನೀಯೆನ್ನ
ಶರಿರದೊಳಹೊರಗಿಪ್ಪ ಸುಖವ ಕಾಣ್ಬುದೆ ಸಾಕು ೧

ಅಣಿಮಾದಿ ಅಷ್ಟಸಿದ್ಧಿಯು ಬೇಡ ನೀ ನಿಕ್ಷ್ಟ
ಅಣುರೇಣು ತೃಣಕಾಷ್ಠ ಭರಿತವಾದ ಅ
ಗಣನೆಯಿಲ್ಲದ ಸುಖದಣಿಯ ತೋರಿಸಿ ನಿ
ರ್ಗುಣ ಸಾಮ್ರಾಜ್ಯವಿತ್ತೀಶನೆಮ್ಮ ಗುರುವೆ ೨

ಅಷ್ಟದಿಕ್ಪಾಲಕರ ಅಧಿಕಾರಿತನ ಬೇಡ
ದಿಟ್ಟ ಮುನಿಗಳ ಶ್ರೇಷ್ಠಜೀವವು ಬೇಡ
ಬಿಟ್ಟಿರದೆನ್ನ ನೀ ಕೂಡಿರ್ಪ ಸುಖದ ಸಂ
ತುಷ್ಟಿಯದನೆ ಕೊಟ್ಟು ಸಲಹೆನ್ನ ಸದ್ಗುರುವೆ ೩

ಶರೀರವಿಡಿದು ಬಾಳ್ವ ಪರಿಬ್ರಹ್ಮಪದ ಬೇಡ
ವರ ಪ್ರಮಥರುದ್ರಗಣಪದ ಮುನ್ನ ಬೇಡ
ಪರಮ ಗುರುವೆ ನಿನ್ನ ನಿಜ ಶರೀರದೊಳೆನ್ನ
ವೆರಸಿಕೊಂಡಿರ್ಪ ಸುಖವ ಕಾಣ್ಬುದೆ ಸಾಕು ೪

ತುಚ್ಛವಗಳಿಗೆ ಸೊಲ್ಲಿಸದೆನ್ನ ನಿನ್ನೊಳ
ಗಚ್ಚೊತ್ತಿದಂತಿರ್ದೆರಡಿಲ್ಲದ
ಪೆಚ್ಚಿನ ಪದವಿತ್ತು ಸಲಹುವ ವಿರಕ್ತ
ಹುಚ್ಚನಂಜೇಶ ಶ್ರೀ ಗುರುರಾಯ ಶಂಭುವೆ ೫

೬೮

ರಾಗ : ಸೌರಾಷ್ಟ್ರ

ಗುರುವೆ ನಿನ್ನೊಳಗೈಕ್ಯಪದವಲ್ಲದೆ ಬೇರೊಂ
ದೊರಬೇಡೆಂಬವರ ಸಂಗದೊಳಿರಿಸಯ್ಯ ॥ ಪಲ್ಲ

ನೆನೆವೃತ್ತ ನಿನ್ನನೆ ಮನದೊಳಿರಡಿಲ್ಲದೆ
ವನಿತೆ ವಾಹನ ವಸ್ತ್ರಾಭರಣ ಭ್ರಾಂತಿಗಳ
ನೆನಹು ನಿಷ್ಪತ್ತಿಯಾದ ಮಹಾನುಭಾವದ
ಘನಸು....ರೆಗಳ ಸಂಗದೊಳಿರಿಸಯ್ಯ ೧

ನೀಡಿ ಮಾಡುತ ನಿನ್ನಪರದೊಂದರ್ಶಿಯು
ನೋಡುತಾನಂದಸುಖದೊಳು
ಆಡುತ ಅತಿಹರುಷದಿಂದಲಲಸಿನೊಳು
ಕೂಡಿಪ್ಪವರ ಸಂಗದೊಳಿರಿಸಯ್ಯ ೨

ಸತ್ಯ ಸದ್ಧರ್ಮ ಸದ್ಗುಣ ಸೈರಣೆ ಶಾಂತಿ
ಯುಕ್ತಿಯೊಳಗೆ ಬಾಳುತ ಮತ್ತತ್ಯುತ್ತಮರ
ಯುಕ್ತಿಯ ಮೋಹದ ಚಿತ್ತದ ಬಲ್ಲು ಹೊಳೆವ
ರೊತ್ತಿಲಿರಿಸಿ ರಕ್ಷಿಸು ರಕ್ಷಿಸಯ್ಯ ೩

ಒಂದು ದಿವ ಒಂದು ಹಗಲೊಂದು ಜಾವ ಮ
ತ್ತೊಂದು ಗಳಿಗೆ ಮನಸಂದು ಲಿಂಗದೊಳು
ಒಂದಲ್ಲದೆರಡರಿಯದ ಲಿಂಗೈಕ್ಯ
ಕಂದನ ಮಾಡಿ ಸಲಹು ಸಲಹಯ್ಯ ೪

ಇಂತು ಏಕಾರ್ಥವಲ್ಲದೆ ಬೇರ್ಬೇರೆ ನೀನಾನೆಂ
ಬಂತದರಿವದಂತಿರಲಿ....ರೊಳಗೆ
ಯಂತ್ರ ವಾ[ಹಕ] ಹುಚ್ಚನಂಜೇಶ ನಿನ್ನ ಕೂಡು
ವಂತುಟಿಲ್ಲದೆ ಬೇರೊಂದಿಲ್ಲ ನಿಮ್ಮಾಣೆ ೫

೬೯

ಕಾಕ ತೇಲೋದು ಕಾಂಬಾ ಮನವೆ
ಏಕೆ ಸುಮ್ಮಗೆ ಅವಿವೇಕದೊಳು ಬಾಳ್ವೆಯತಿ
ಕಾಕುಬುದ್ಧಿಯನತಿಗಳೆದು ಮನವೆ ಆಗ
ವೇಕ ಶ್ರೀ ಪರಮ ಗುರುವಿನೊಳೈಕ್ಯವಾಗಿರುವ
ಜೋಕೆಯೊಳು ನಿಲು ನೀ ಮನವೆ ॥ ಪಲ್ಲ

ಮನವೆ ಹುಟ್ಟಿದಂದಿಂದ ಕರ್ಮದ ವಾಸದೊಳಗೆ
[ಮನವೆ]ನೀ ಕಷ್ಟಪಡದೆ ಯಾನ ಭಾ....
ಮನವೆ ಕಷ್ಟವನು ತಿಳಿದು ಹಿಮ್ಮೆಟ್ಟಿದೆ
ಮನದರುದುಗಟ್ಟಿಗೊಂಡು ನೀಗಿಲ್ಲಲೊಡವೆ
ಮನವೆ ಹುಟ್ಟಿಳಿದು ಹೊ........ಯನು
ಮನವೆ ದಿಟ್ಟತನದಲ್ಲಿ ನಡಯಲೊಡನೆ
ಮನವೆ ಕಟ್ಟಳೆಯಿಲ್ಲದ ಗುರುವು ತನ್ನ ನಿಜದ ಸುಖವ
ಸೂರೆಬಿಟ್ಟು ಕೂಡಿಹ ನಿನಗೆ ಮನವೆ ೧

ಮನವೆ ವೇಷದ ಮರೆಯು ಬಹುರೂಪಿಯಾ
ವನ ಹೊರವೇಷವನು ಕಂಡು ನೋಟಕರು
ಮನವೆ ದೂಷಣೆ ಭೂಷಣೆಗಳಿಂ ನುಡಿಯನು
ಕೇಳಿ ಕ್ಲೇಶ ಹರುಷವಿಲ್ಲದಿಪ್ಪಂತೆ ಮನವೆ
ಈಶನೊಬ್ಬನೆ ವಿಶ್ವರೂಪು ನಿನದ....ಪದದಲ್ಲಿ ನೀ ನಿಲಲು
ಮನವೆ ಮೊಸಲಾದ ಘನಸುಖದರಾಶಿ
ನಿನಗಹುದದ ನೀ ಲೇಸಾಗಿ ನಂಬಿರಲೊ ಮನವೆ ೨

ಮನವೆ ಐಶ್ವರಿಯವಹ ಗುರುವಿನ
ಹೆಚ್ಚಿನಾಟವ ಕಂಡು ಬೆಚ್ಚಿ ಬೆದರದೆ ನೀ ನಿಲಲು
ಮನವೆ ನಿಚ್ಚ ಕೇಡಿಲ್ಲದಿಹ....ಹುದದ
ವಿನಚ್ಚಿನಿಂದಿರು ಕಂಡಾ ಮನವೆ ೩

ಮನವೆ ಪಚ್ಚೆವಿಲ್ಲಸ ವೈರಿ ಪರಮ ಕಾರು
ಙ್ಞಾನ ಹುಚ್ಚ ಸಂಜೀಶ್ವರನು ನಿನ್ನ....
....ಯಿಚ್ಚೆಯರಿತು....ನಂತಿರುವ
ಶುಕವ ಮುಚ್ಚಿನಿಂದಿರು ಕಂಡ ಮನವೆ ೪

## ನಿರ್ವಯಲಲಿಂಗ ಅಂಕಿತದ ಸ್ವರವಚನಗಳು

೭೦

ಆಯಿತಾಯಿತು ಆಯಿತಾಯಿತು ಎನಗೆ ಶ್ರೀ ಗುರುಕೃಪೆ ॥ ಪಲ್ಲ

ಅನಾದಿಸಂಸಿದ್ಧವಾಗೆನ್ನ ಕೂಡಿರ್ದ
ಹೀನ ಮಾಯ ಮೋಹದ ಶಶಿ
ತಾ ನೋಡಿ ಕಡೆಗೆ ಪಾರಿದಳೆನ್ನಿ [ರ]ವ ಕಂಡು
ನಾನಿರ್ದ ನಿಜ ಬಟ್ಟಬಯಲೊಳು ೧

ತಾನು ತಾನೆಂಬ ಅಜ್ಞಾನಸಖಸುವಾ ಸು
ಜ್ಞಾನಮಿತ್ರನ ಕೂಡಾಡಲು ಕಂಡು
ತಾ ಮುನಿದು ಕಡೆಗೆ ಸಾರಲು ಮೋಘವಿಲ್ಲದ
ಭಾನುವಿನಂತಿರ್ದೆ ಸುಖದಿಂದ ೨

ಒಳಹೊರಗೆನ್ನದೆನ್ನನು [ತೀ]ವಿಕೊಂಡಿರ್ದ ಕರುಣ
ಬಳಗ ಸುಳುಹನಾರನು ಕಾಣೆ
ಥಳಥಳಿಸುವ ನಿರ್ವಯಲಲಿಂಗದಾಶ್ರಯ
ಬೆಳಗ ನೋಡುತ [ನಿರ್ವಯಲ] ಮುಟ್ಟಿದೆನು ೩

೭೧

ರಾಗ : ದೇಶಿ

ಚಿಂತೆಯುಳಿದು ನಿಶ್ಚಿಂತೆಯೊಳಗೆ ಬಾಳ್ವ ಮ
ಹಂತರೆನಗೊಮ್ಮೆ ತೋರಿರೆನಗೆ ಸದ್ಗುರುವೆ ॥ ಪಲ್ಲ

ಹಸು ತೃಷೆ ನಿದ್ರೆ ನೀರಡಿಕೆ ವಿಷಯಗಳರತು
ಕುಸುಮ ತಾಂಬೂಲ ವಸನ ಜಲಭೋಗವ
ಹಸನಾಗಿ ಬಿಟ್ಟು ನಿರಾಶೆಯೆಂಬೀ ರಾಜ್ಯಪದ
ದೊಸಗೆಯೊಳು ಬಾಳ್ವ ಮಹಿಮರ ತೋರು ಸದ್ಗುರುವೆ ೧

ಅರಿಷಡ್ವರ್ಗಾಷ್ಟಮದ ಸಪ್ತವ್ಯಸನಗಳು
ದುರಿತ ರಾಗದ್ವೇಷರಹಿತವಾ
ಪರಮರಿಪು ಪರದೇಶ ರಾಜ್ಯವನಾಳ್ವ
ಅರಸುಮಗನನು ತೋರಿಸೆನಗೆ ಸದ್ಗುರುವೆ ೨

ಒಂದೇ ವಸ್ತುವೆ ಹಲವೆನಿಸಿ ರಚನೆಗೆ ಬಂದು
ಅಂದರಿಯೊಳು ಹಲವು ಮಾದವು
ಚಂದದಿಂದರಿದು ನಿರ್ವಯಲಲಿಂಗವನಪ್ಪಿ
ಒಂದಾದವರ ತೋರಿಸೆನಗೆ ಸದ್ಗುರುವೆ ೩

೭೨

· ಬಲ್ಲೆ ಬಲ್ಲೆನೆಂದು ನೀ ಬರಿದೆ ನುಡಿಯಲು [ಬೇಡ]
ಎಲ್ಲವ ಬಲ್ಲಂತ ಶಿವನೆಂದು ಸುಮ್ಮನೆ ಬಲ್ಲವನು ॥ ಪಲ್ಲ

ಶರಧಿಯೊಳು ಪುಟ್ಟಿದ ತೆರೆ ನೊರೆ ಬುದ್ಬುದಂಗಳು
........ವಗಿ ಸುಮ್ಮನಿರು ನೀ ಬಲ್ಲವನು ॥ ೧

ಮುಟ್ಟಿ ನಿಲ್ಲು ಆಶಮಧ್ಯದಿನಾ ಚೆಲುವಿಂದೊಗೆದು
ತೋರುವ ಕೇಡಿಲ್ಲದಂದದಿ ತೋರುವ
ಆ ಬಗೆಯ ಬಯಲೊಳಡಗುವ ಪರಿ ನೀನಿರಲು
ನೋಡಿ ನಗುತ ಬೇಗದೊಳಗಲದಿರ ನೀ ಬಲ್ಲವನು ೨

ಎಲ್ಲೆಲ್ಲಿ ನೋಡಿ....ಶಿವನಲ್ಲದೆ ಮತ್ತೆ
ಬೇರಿಲ್ಲಯೆಂದೆ ಬರಲು ಕರಿಗೊಂಡು
ಎಲ್ಲ ತಾನಾದ ನಿರ್ವಯಲಲಿಂಗವನಪ್ಪಿ
ಬಲ್ಲೆನೆಂಬ ಸೊಲ್ಲುಡುಗಿ ಸುಮ್ಮನಿರು ನೀ ಬಲ್ಲವನು ॥ ೩

೭೩

ವ್ಯಕ್ತದತಿಶಯಗಳನು ವಿರತಿಯಿಂದಲೆ ಗೆಲಿದು
ಮುಕ್ತಿ ತಾ ರೂಪುವೆತ್ತಂತೆ ಸುಳಿ ಸುಳಿವ ದೇಶಿಕನ ಬೆಡಗ ॥ ಪಲ್ಲ

ಆಗ ಮುಸುಕಿದ ಮಾಯಾಬಲೆಗೆ ಸಿಕ್ಕದೆ
ಲಿಂಗದೊಳಗಲದಿಪ್ಪರಿವಿನಾನಂದವು ಹೆಚ್ಚಿ
ಬಗೆಬಗೆಯಲ್ಲಿ ಸುಳಿದಾಡುತಾ ಬರುವ
ವಿಗಡಮೂರ್ತಿಯ ವಿನೋದವ ಬೆಡಗ ॥ ೩

ಎಂದೆಂದು ಕೆಡದೊಪ್ಪುತಿಪ್ಪ ಭ್ರಮದಿ ಮನ
ಸಂದು ಸಂದಳಿದು ಸಹಜಜ್ಞಾನಸುಖದೊಳು
ನಿಂದುದಮುಷ್ಪಡೆ ಪೊದರಿಲ್ಲದ ನಿತ್ಯ
ಸಂದ ಪದದರಿಗೈಕ್ಯನ ಬೆಡಗ ೪

ಎಂತಿರ್ದುದಂತೆ ಸಹಜವೆ ದೂತರನೊಳಗ
ರಿಂತೆಂಬಹಪವನತಿಗಳಿದು
ಭ್ರಾಂತುರಹಿತ ನಿರ್ವಯಲಲಿಂಗದೊಳೋ
ರಂತೆ ಕೂಡಿಪ್ಪ ಏಕಾಂಗಿಯಾ ಬೆಡಗ ೫

೭೪

ರಾಗ : ಸಾಳಗ
ಎನ್ನ[ವರೆ]ನಬಹುದು ನೋಡೆಲ್ಲರಂತಾಡುವ ಮ
ಹಾನುಭಾವದಿ ನಿಂದ ಜ್ಞಾನಸಿದ್ಧನಮಾ ॥ ಪಲ್ಲ

ಜೀವ ಪರಮರೆಂದೆಂಬ ಸಂಧಾನವ
ಭಾವಿಸಿ ತಿಳಿದು ಬಟ್ಟಬಯಲು ಬಗೆಗೊಂಡು
ದೇವರಿಗೆ ದೇಗುಲವನೆ ತಾನೊಳಕೊಂಡು
ಪಾವನಮೂರ್ತಿ ಆನಂದಸಿದ್ಧನಮಾ ೧

ಸಕಲ ನಿಃಕಲವೆಂದೆಂಬುದುಭಯವ ತಿಳಿದು ಘನ
ಸುಖವಾದ ನಿಶ್ಚಲಪದದೊಳಗೊಂದೆ
ಮುಕುರದೊಳಗೆ ತೋರ್ಪ ಮುಖವ ತಾನೆಂದು ಲಿಂಗ
ಮುಖವ ತಿಳಿದು ನಿಂದ ಮುಕ್ತಿಸಿದ್ಧನನು ೨

ನಕ್ಕವರೊಳು ನಕ್ಕು ನಗಿಸುತಿರಲು ಕೂಡೆ
ದುಃಖಿಪರೊಡನೆಯುದ ಜಿಹ್ವದೊ
ಳುಕ್ಕಿದಂತವರವಿಂಗಿತಗಳಿಗೆ ತಾ
ಸಿಕ್ಕದೋಡುವ ಶಿವಯೋಗಿಸಿದ್ಧನನು ೩

ಇದ್ದು ಇಲ್ಲದ ಜಗದೊಳು ಹೊದ್ದಿ ಹೊಂ
ದದೆ ಬಾಳ್ವ ವಿದ್ಯ ಕರಿಗೊಂಡು ಭೂಭಾಗ
ಮಧ್ಯದೊಳು ಇಂತಿರ್ದು ವಿಶುದ್ಧಮುದ್ರಿತನಾದ
ನಿರ್ಧರ ಗುರುವಿನ ಬುದ್ಧಿಸಿದ್ಧನನು ೪

ಆಡುತ ಎಲ್ಲಿಪ ಏಕವೆಂದರಿದ ಮಾ
ತಾಡುತ್ತ ಮಹದರಿವಿನ ಬೆಳಗ
ನೋಡುತ ನಿರ್ವಯಲಲಿಂಗವು ತಾನಾದ
ಆರೂಢವಿಧದಿ ನಿಂದಜಾತಸಿದ್ಧನನು ೫

೭೫

ರಾಗ : ನಾಟಿ

ಮಾಡು ಸುಜ್ಞಾನಿಗಳ ಸಂಗವದು ನಿನಗೆ
ಕೂಡೆ ಕೃಪಾಲ[ನ ಪ]ದವಿಯನ್ನೈದಿಸುವದು
ಮಾಡದಿರು ಅರಿತು ಅರಿಯದ ಮೂರ್ಖಜೀವರೊಡ
ನಾಡಿದರೆ ಕೇಡು ದುಃಖವದೆ ಆತ್ಮ ॥ ಪಲ್ಲ

ನಡೆ ಮಾತುತ್ಮಸಯುಗೆದೋರುತ ಶಿವಯೋಗಿಗಳು
ನಡೆಪ್ರತಿಹರದಕದೆ ಸಾಕ್ಷಿ ನೀ ನೋಡು
ನಡೆ ಬೇರೆ ನುಡಿ ಬೇರೆಯಾಗಿ ತೋರಿಸಿ ಬಾಳ್ವ
ಜಡರ ಸಂಗವ ಸಾಕುಮಾಡು ಬೇಗ ಆತ್ಮ ೧

ಧರ್ಮಸ್ವರೂಪರೊಡನಾಡಿದರೆ ನಿನ್ನ ಪ್ರಾಣ
ಧರ್ಮಾಧರ್ಮವನು ತೋರು ನಿಮ್ಮ ....
............... ಡುವರು
ಕರ್ಮಕುಟಿಲ ವೃಹತ ಕುಟಿಲತರ ಸಂಸರ್ಗದ
ಪೆರ್ಮೆಯನುನ್ಮನಿಮಾಣೆ ನಿಷ್ಕರ್ಮಿನೀಹಡೆ ೨

ಆವಾವ ತೆರದಿ ಬಾಳುತಿರ್ಪ....
ಭಾವಬುದ್ಧಿಯ ಕೇಳಿ ಬಾಳ
ಸಾವು ಹುಟ್ಟು ಸುಖದುಃಖಕೊಳಗಾದವರ ಸಂಗ
ನೋವು ತಪ್ಪದು ಮುಂದೆ ಬಿಡು ಸಾರಿದಾತ್ಮಾ ೩

ಮುಂದನರಿದು....ದೆ ಮುರಿದು ಸಲೆ ಬಾಳುವದ
ರಂದವನು ತಿಳಿದು ನಿಶ್ಚಯಿಸಿ ನೀ ನಿಲ್ಲು
ಒಂದೊಂದು ಹೊತ್ತಿಗೊಂದೊಂದು ಬುದ್ಧಿಯ ನೆನೆವ
ಮಂದಮತಿಗಳ ಸಂಗ ಸಾಕು ಸಾಕಾತ್ಮಾ ೪

ಇದು ನಿತ್ಯವಿದು ಸತ್ಯವೆಂದು ಬೇಗದಿ ನಿನ್ನ
ಹೃದಯದೊಳು ತಿಳಿದು ನಿರ್ವಯಲಲಿಂಗದೊಳು
ಹುದಿ[ಗಿ]ಕೊಂಡಿರೆ ನಿನ್ನ ಪುಣ್ಯಪಾಪದ ಘನ
ವಿಧಿವಿಕ್ಕಿ ಬರಲು ತಪ್ಪದೆಲೆಯಾತ್ಮಾ ೫

೭೬

ರಾಗ : ನಾಟಿ

ಅರಿದರಿದು ಶಿವಭಕ್ತಿ ಮೂರುಲೋಕದೊಳರಿದು
ಅರಿದರಿದು ಬಸವ ಜಯಿಸುವ ಬಗೆಯರಿದು
ಅರಿದರಿದು ಜವನ ಧಾಳಿಯ ಗೆಲುವುದರಿದು
ಅರಿದರಿದು ಶಿವಭಕ್ತರೊಡನಾಟವರಿದು ॥ ಪಲ್ಲ

ಅರಿದರಿದು ಸರ್ವಜನಸೇವ್ಯನಾಗೂದರಿದು
ಅರಿದರಿದು ಸರ್ವಪದವಳಿದುಳಿವುದರಿದು
[ಅರಿದ]ರಿದು ಸ್ವರತಿಯಾಡಿ ವಿರತನಾಗುವವರಿದು
ಅರಿದರಿದು ಸರ್ವ ವ್ಯಸ[ನ]ಮನವಳಿವುದರಿದು ೧

ಅರಿ[ದರಿ]ದು ತನ್ನಾತ್ಮವರಿತು ಬಾಳುವವರಿದು
ಅರಿದರಿದು ಅನ್ನದಾನವ ಮಾಳ್ಪುದರಿದು
ಅರಿದರಿದು ಚೆನ್ನೆಯರ ನುಡಿಗೆ ಸೋಲದಿಹುದರಿದು
ಅರಿದರಿದು ಶಿವನಂದಮಯನಾಹದರಿದು ೨

ಅರಿದರಿದು ನುಡಿದಂತೆ ನಡೆದು ತೋರುವದರಿದು
ಅರಿದರಿದು ಬಡವರನು ರಕ್ಷಿಸುವುದರಿದು
ಅರಿದರಿದು ಕೇಡಿಗನೊಳೆಡೆಯಾಂತುಕೊಂಬುದರಿದು
ಅರಿದರಿದು ಮೃಡಶರಣನ ಸೇವೆಯರಿದು ೩

ಅರಿದರಿದು ತ್ಯಾಗಶೀಲವಾಗಿ ಬಾಳುವುದರಿದು
ಅರಿದರಿದು ಭೋಗದೊಳು ಮೈಮರೆಯದಿಹುದರಿದು
ಅರಿದರಿದು ರಾಗಸ್ವರಹಿತನಾಗುವುದರಿದು
ಅರಿದರಿದು ಮುಕ್ತಿಯ[ಪಡೆವುದರಿದ]ರಿದು ೪

ಅರಿದರಿದು....ಮರೆದಿ ಪ್ಪೈಮೋರದಿಹದರಿದು
ಅರಿದರಿದು ಮರೆಹೊಕ್ಕವರ ಕಾಯುವುದರಿದು
ಆರಿದರಿದು ನಿರ್ವಂಚಲಲಿಂಗದಿ ಜರೆದು ಬಾಳ್ವ
ಪರವೇಶಿಯರ....ಉದರಿದು ೫

## ಗಂಗೇಶ ಅಂಕಿತ ಸ್ವರವಚನ

೭೭

ಏಕಮುಖರುದ್ರಾಕ್ಷಿತಂಗಳಿರಲು
ಏಕಮುಖರುದ್ರಾಕ್ಷಿದೋರೆಯೆನಲೇಕೊ ॥ ಪಲ್ಲ

ಮನವೆಳಸಿದಂತೆ ಪರಿದಾಡುವಗೆ ಪಲವು ಮುಖ
ಘನವರಿಯದಿರುವ ಮರುಳಗೆ ಪಲವು ಮುಖ
ತ[ನು]ಮರಣಕಂಜಿ ಕಳವಳಿಸುವಗೆ ಪಲವು ಮುಖ
ಅನುವರ್ಗಕೆಲ್ಲ.... . ದಿರಲದೇಕಮುಖ ೧

ಪಶುಭಾವದಿಂ ತನ್ನ ತಾನರಿಯದಿರೆ ಪಲವು ಮುಖ
ವಸವುದೆಲ್ಲವ ಬಯಸಲು ಪಲವು ಮುಖ
ವಿಷಯಡೊಳು ಬಿದ್ದು ಮೈಮರೆದಿರಲು ಪಲವು ಮುಖ
ಕುಶಲ ತಾನಾಗಿ ಗುರುಪಾದವಿಡಿವುದೇಕಮುಖ ೨

ನೆರೆ ಹಮ್ಮು ಮಮಗೊಳಗಾಗಿರಲು ಪಲವು ಮುಖ
ತರುಣಿಯರ ಬಲೆಗೆ ಬೀಳಲು ಪಲವು ಮುಖ
ತಿರುಗಿ ಬರುವ ತವಕವ ಮಾಡಲದು ಪಲವು ಮುಖ
ಪರ ಗಂಗೇಶನೊಳು ಏಕವಾಗಿರಲೊಲ್ಲದೇಕಮುಖ ೩

## ಸಿದ್ಧಲಿಂಗ ಅಂಕಿತದ ಸ್ವರವಚನಗಳು

೭೮

ರಾಗ : ಮಧು
ಗೋವಿಂದಾ ಎನ್ನಿ ಬಲ್ಲವರೆಲ್ಲರು
ಗೋಕುಲಪತಿ ಬಸವಣ್ಣನೆಂದು ॥ ಪಲ್ಲ

ಪಂಚಮುಖನ ಪೊನ್ನ ನಳಿನದಮೃತವುಯು
ಪಂಚಧಾರೆಯೆಂಬ ಮಂತ್ರದಲಿ
ಪಂಚಗೋವು ಪುಟಯಿರಲಾವಗಂ ಪತ್ರಿ
ಪಂಚಮುಖನ ಧರ್ಮವಾಹನ ಗೋವು ೧

ಚಿಕ್ಕಂದು ಎಲ್ಲರ ಸಲಹಿದ ಗೋವು
ಸಕ್ಕರೆಯಂ ಸವಿಯುವದು ಗೋವು
ಮುಕ್ಕಣ್ಣ ಮೊದಲಾದ ಸಕಲ ದೇವರ ಮಜ್ಜ
ನಕ್ಕೆ ಪಂಚಾಮೃತವನುಯಿಕ್ಕಿದ ಗೋವು ೨

ಧಾತ್ರಿಯೊಳೆಲ್ಲದೇವರ ಗೋವು
ಮೂತ್ರದೊಳಗೆ ಸಿದ್ಧಿ ಮಾಡಿತು ಗೋವು
ಕ್ಷೇತ್ರಕ್ಕೆ ಭಸ್ಮವ ನೀಡಿತು ಗೋವು ಅಪ
ಮೃತ್ಯುವ... ಮಾಳ್ಪುದು ಗೋವು ೩

ವ್ಯಾಸ ಪರಾಶರ ಗೌತಮ ಭೃಗು ಶುಕ
ವಾಸಿಷ್ಟ ಮುನಿಮುಖ್ಯರೆಲ್ಲರು
ಭೋಗಿಗಳಾಗಿಹರೆಂದು ವೇದಾಗಮ....ಈ
ಜಗವರಿಪೆ ಗೋವಿಂದಂ ನೀ ೪

ಸಿದ್ಧರಸವು ಸಿದ್ಧಿ ಗೋವಿಂದಾ ಸರ್ವ
ಸಿದ್ಧಿಯ ಪಡೆವುದು ಗೋವಿಂದಾ
ಸಿದ್ಧಲಿಂಗನೆ ಕ್ರೀದಣಿದು ಪಾಡಿದು ಸ
ಮೃದ್ಧಿಯಾಗಿಪ್ಪುದು ಗೋವಿಂದಾ ೬

೭೯

ರಾಗ : ನಾದರಾಮಕ್ರಿಯಾ
ನಟಿಸಿ ನಟನಾಟಕದ ಪರಿಯ ನೋಡುತ
ನಿಟಿಲಾಕ್ಷ ಜಗವ ಸೃಷ್ಟಿಸಿ ವಿನೋದಿಸುತ ॥ ಪಲ್ಲ

ಯೌವನದ ಪೆಣ್ಣ[ಕರೆತಂದು] ಮಾರಿದವಗೆ
ಕೈವಿಡಿಸಿ ತಾಯ ತಂದೆಯ ಬಯಿದು ಹಣೆಗೆ
ಕೈವೆರಳನಿಟ್ಟು ವಿಧಿಬರಹವೆಂತೆನಗೆ
ಅಯ್ಯೊ ಎಂದು ಸುಯಿವಳಾ ಮುನಿಸಿನೊಳಗೆ ೧

ತುಂಬುಜವ್ವನದ ಸೊಬಗಿನ ಚೆಲ್ವೆ ತಾನೂ
ಅಂಬರಾಭರಣವನು ತೊಟ್ಟುಟ್ಟಾದೆನು
ಲಂಬತನದಿನಹೋದ ಪುರುಷದೊಡವೆರೆದೆನು
ಎಂಬ ಹೆಣ್ಣಿನ ಮನಸಿಗಿಂಬಿಲ್ಲವವನು ೨

ಗುಣವುಳ್ಳ ಸತಿಯು ಕೈವಿಡಿದಿಹನ ಪ್ರಾಣ
ಗುಣಹೀನ ಪತಿ ಮುಪ್ಪಿನಣಕಿಸದೆ ಮಾಣ
ಹಣದಾಸೆಗಾಗಿ ಮಾರುವ್ರದು ಬಲುಕ್ಷೀಣ
ಎಣಿಕೆ ಅರಿತು ಹೆಣ್ಣ ಗಂಡಿಗೆ ಕೊಡುವವ ಜಾಣ ೩

ಪುರುಷನಿರವ ನೋಡಿ ಶಿರವನಲುಗುತ್ತ
ನೆರೆಕರೆಯು ನೋಡಿ ನಗುತಿಪದವಳ ಚಿತ್ತ
ಹರುಷದಿಂದವನ ಅಡಿಗಡಿಗೂ ನೋಡುತಾ
ಇರೆ ನಾರಿ ಪುರುಷರಿಬ್ಬರೆವಶವಾಗಿ ೪

ಕೆಲರ ನಗಿಸುತೆ ಕೆಲರನಳಿಸಿ ಜಗದೊಳಗೆ
ಬಲುವಿನೋದವ ಮಾಡಿ ನಗುತಡಿಗಡಿಗೆ
ಸಲೆ ತನ್ನ ನೆನೆದ ಭಕ್ತರ ಹೃದಯದೊಳಗೆ
ನೆಲಸಿ ಗುರು ಸಿದ್ಧಲಿಂಗನ ಲೀಲೆ ಹೀಗೆ ೫

೮೦

ರಾಗ : ಸೌರಾಷ್ಟ್ರ

ತಲ್ಲಣಿಸದಿರು ಹಾಗೆ ತಾಳು ಮನವೆ ಶಿವ
ನೆಲ್ಲಿರ್ದಡೆ ರಕ್ಷಿಸುವ ನೀನಿದಕೆ ಸಂದೇಹ ಬೇಡ ॥ ಪಲ್ಲ

ಬೆಟ್ಟದಾ ತುದಿಯು ಮೇಲೆ ಬೆಳೆದಿರ್ದ ವೃಕ್ಷಗಳಿಗೆ
ಕಟ್ಟೆ ಕಟ್ಟೆ ನೀರನೆರೆದು ಕಾಯುವವರ್ಯಾರೊ
ಹುಟ್ಟಿಸಿದ ಶಿವ ತಾನು ಹೊಣೆಗಾರನಾಗಿ ಹೋಗಿ
ಕೊಟ್ಟು ಸಲಹುವನಿನ್ನಿದಕೆ ಸಂದೇಹ ಬೇಡ ೧

ಅಡವಿಯೊಳಗೆ ತಿರುಗಾಡುವ ಮೃಗಪಕ್ಕಿಗೆ
ಅಡಿಗಡಿಗೆ ಆಹಾರವನಿತ್ತವರ್ಯಾರೊ
ಪಡೆದ ಜನನಿಯಂತೆ ಪ್ರಾಪ್ತಿಯೆಂಬುದು ತಾ
ನೆಡೆಗೆ ತಂದುಣಿಸುವದಿದಕೆ ಸಂಶಯು ಬೇಡ ೨

ಕಲ್ಲೊಳು ಜನಿಸಿ ಪ್ಯೆಗಾಣಿಸದಿಹ ವದ್ದುರಗೆ
ಇಲ್ಲದಂದಿಗೆ ತುತ್ತನಿತ್ತವನ್ಯಾರೊ
ಬಲ್ಲಿದ ಗದುಗಿನ ತ್ರಿಯುಬಕನಿರ್ವಾಗ ತಾನು ತಾ
ನೆಲ್ಲಿ...ರಕ್ಷಿಪನಿದಕೆ ಸಂದೇಹವೇಕೆ ೩

೮೧

ರಾಗ : ಮುಖಾರಿ

ಏಳು ಮುಖದ [ಏಳು] ಜಿಹ್ವೆಗಳ ತೆರೆದು ನುಂಗುತಿಪೆ
ಭಾಳಾಕ್ಷ ಇದರ ಬಲುಹೆಂತೊ ಅಕಟಕಟ ॥ ಪಲ್ಲ

ಕರಗಳಾರು ಕಾಲ್ಗಳು ಮೂರು ತನುವೆರಡು
ಪರಿಯಲ್ಲಿ ಕಪ್ಪು ಬಿಳಿದೊಪ್ಪುತಿಹದು
ದೊರೆ ಸುಭಟರತಿರಥರ ಮುರಿದು ನುಂಗುತ ಮುಂದೆ
ಒರುತಿಹರಿಗಿದಿರಾಗಿ ಬಾಯ ತೆರದಿಹುದು ೧

ಅರವತ್ತು ನಾಮದಲಿ ಕರಸಿಕೊಂಬುದು ಮುನ್ನೂ
ರರವತ್ತು ಅಂಗುಲಗಳಕ್ಷಿಗಳೆರಡು
ತರತರದ ಚಪ್ರಬಿರಿಯಲ್ಲಿ ಮೂರುಜಂಗೆಟ್ಟು
ಉರವಣಿಸಿ ಚವುಸೀತಿ ಲಕ್ಷವನೆ ಭಕ್ಷಿಸಿ ೨

ಪ್ರಾಯ ಕಾಣಿಸದು ಮುಪ್ಪರಿಯಬಾರದು ಇದಕೆ
ಬಾಯೊಳಗೆ ದಂತ ಅರವತ್ತುನಾಲ್ಕುವೆನೆ
ಸಾಯಲರಿಯದು ಸಕಲರೂಳಕೊಂಬುತಿದೆಯದನ
ಮಾಯುಮರ್ದನ ಸಿದ್ಧಲಿಂಗ ತಾ ಗೆಲ್ಲಿದ ೩

೮೨

ಉದಯರಾಗ :
ಏನಹುದು ಮುಂದೆ ಸಂಸಾರದಲ್ಲಿ ಮ್ಯೆಮರೆದು
ಮುಗನಿಗೆ ಮಕ್ಕಳಿಗೆ ಕುದಿದು ಕೋಟಲೆಗೊಂಡು
ಕಿನಸಕೀಡಾಗಿ ಕೆಡುತಿಹದು ಶಿವಲಿಂಗ ಧ್ಯಾನ [ವ] ಮಾ[ಡೆಡ] ಬಿಡದೆ ॥ ಪಲ್ಲ

ಅಂಬೆಗಾಲದಿವಿಡಿದು ಒಂದು ಶಿಶು ತವಕಪವು
ತುಂಬಿ ಪೊರವುತ್ತೆ ಉಗ್ಗುಗ್ಗೆಂಬ ಶಿಶುವೆರಡು
ಉಂಬ ಬಟ್ಟಲವಿಡಿದು ಯಾಕ್ಕೆಂಬ ಶಿಶುಮೂರು ವಂಚಿಸುತ ಅಸವಳಿವುತ
ತುಂಬೆ ನವಮಾಸಗರ್ಭವೊಂದು ಶಿಶು ನಾಲ್ಕಕೆ
ಯೆಂಬಾವುದೆಂದು ಸತಿ ಪತಿಯು ಚಿಂತಿಸುವರಲು
ಹಂಬಲಿಪ ವೇಳೆಯೊಳು ಶಂಭುಶಿವ ಬಂದಿರಲು ನಂಬಿ ಚರಣಕೆರಗಲು ೧

ಸಾಲದಟ್ಟುಳಿ ಘನವು ಹಾಲಲಿ ಶಿಶುವಿಗೆ ಮೆಲು
...........ಉದೆಂದು ಸತಿಯುಂ ಕೇಳೆ
ಪೊಲಪಾಪಿ ನಿನ್ನ ಕೈವಿಡಿದು ಮೊದಲಾಗಿ ಅಲ್ಲಿ ಪರುವುದ ಬಿಡಿಸೆ
ಪೊಲನಹುದುಂಪೆನಗೆ ಬಾಲಕನ ಸಲಹುವಕೆ
ಏನು ಹದನೆಂದೆನಲು ಪೋಲೆಯಿದೆ ಬೆಲೆಗಟ್ಟಿ ಮಾರಬೇಕೆಂದೆಂಬ
ಹೊ ಗಾಜವಳದೊಳಶ .. ವಿ ಬಂದನರಿಯರು ೨

ಒಂದು ದೊರಕಿದರೊಂದು ಬವಸಿದರೆ ದಿನದಿನದಲ್ಲಿ
ಬಿಂದುವಿನ ತೆರೆಯಂತೆ ಸಂಸಾರಬೇಗೆಯೊಳು
ಕೊಂದಿ ಕುಸಿದುಸುರಿ ಪಚ್ಚಿ ಮುಕಡರಿ ರವಿಯಡರಿ
ಮಂದಮತಿಯಾಗಿ ಸಿದ್ಧಲಿಂಗನ ಮರೆದು ದಂದುಗಕ್ಕೊಳಗಾದರು ೩

೮೩

ನಚ್ಚಿದಿರು ಬೆಕ್ಕು ಬೇವ ನೋಡುತಲಿದೆ
ಎಚ್ಚತ್ತಿರು ಎಚ್ಚತ್ತಿರು ಎಲೋ ರಾಮುಗಾ ॥ ಪಲ್ಲ

ಒಂಬತ್ತು ಬಾಗಿಲ ಪಂಜರದೊಳಗೊಂದು
ಕಂಬವಿಲ್ಲ ಕದವು ತಾ ಮೊದಲಿಲ್ಲ
ಎಂಬತ್ತುಸಾವಿರ ಸಂದುಕಟ್ಟಿನ ಗೂಡ
ನಂಬಿ ನೀ ಕೆಡಬೇಡಲೆ ರಾಮುಗಾ ೧

ಸತಿ ಸುತಾದಿಗೆ ಭೂತ ಪಿತರಿಗೆ ಬೇಕೆಂಬ
ಅತಿ ಲುಬ್ಧತನ ಬೇಡಲೊ ರಾಮುಗಾ
ಕ್ಷಿತಿಸುರರಿಗೆ ಧರ್ಮವ ಬಿತ್ತಿ ಮುಂದಣ
ಪಥಕೆ ಸಂಬಳವನು ಮಾಡಿಕೊ ರಾಮುಗಾ ೨

ಹೊನ್ನು ಹೆಣ್ಣು ಮಣ್ಣುಯೆಂಬ ಮಹಾಪರೊಳಗೆ ನೀನು
ಉಣ್ಣದುರಿದು ಮುಂದುವರಿಯದಿರು ರಾಮುಗಾ
ಸುಣ್ಣವ ಸುಡುವಂತೆ ಸುಡುತಲಿದೆ ಬೆಕ್ಕು
ಕಣ್ಣುದೆರದೆಚ್ಚತ್ತಿರು ಎಲೊ ರಾಮುಗಾ ೩

ಮುನಿವರ್ಯೆವರು ಕೊಬ್ಬಿಸುವರಾರುಮಂದಿಯು
ಮನ ಕೆತ್ತುಗೊಂಬನರೆಂಟು ಮಂದಿ
ತೊನೆಯದೆ ಹಿಂದುಮುಂದನೆ ವಿಚಾರಿಸಿ
ಇನಿತು ನೀ ಕೆಡದಿರೆಲೊ ರಾಮುಗಾ ೪

ಸ್ಥಿರವೆಂದು ನೆಚ್ಚಲು ಪಂಜರವನು ಗಿಣಿ
ಉರವಣಿಸಿ ಎಚ್ಚೆತ್ತು ಮುರಿವುತ್ತಿದೆ
ಗುರುವರಾಧೀಶ ಶಂಕರ ಸಿದ್ಧಲಿಂಗವ
ನೆರೆ ನಂಬಿ ಸುಖಿಯಾಗಿರು ರಾಮುಗಾ ೫

## ಚನ್ನವೀರೇಶ ಅಂಕಿತದ ಸ್ವರವಚನ

೮೪

ಬಾರೋ ಮನೆಗೆ ಹೋಗುವ ಸುಜಾ[ಣರ]
ರಾಯ ನಡೆಯೋ ಮನೆಗೆ ಹೋಗುವ ॥ ಪಲ್ಲ

ಕಳವೇಳುದಿನವೆಲ್ಲ ಸಕಲವ ಭೇದಿಸ ಬಂದೆ ನಿನ್ನ
ಹೊಳೆವ ಚಿನ್ನದ ಕೀಲುವಳೆಯನಾರಿಗೆ ಕೊಟ್ಟೆ ೧

ನಕ್ಕು ಉಂಡುಟ್ಟು ನಾ ನಿನ್ನ ಕಂಡೆನೊ ಕನಸಿನೊಳು
ನಿನ್ನ ಮಡದಿಗೊಪ್ಪುವ ತೋಳದುಂಡನಾರಿಗೆ ಕೊಟ್ಟೆ ೨

ಸಕ್ಕರೆಚಂದುಟಿಯ ಮೇಲೆ ಒಪ್ಪುವ ಮುಂಬಲರೇಕೆ
ಕರ್ಪೂರ ವೀಳ್ಯವು ಸೋಂಕಿನೆಲೆ ಮಾಜಲಿಲ್ಲವಯ್ಯ ೩

ಸಲಿಗೆ ಸಾವಿರವ ಕೊಟ್ಟೆವೊಂದುತ್ತಮದ ಮಾತ ಕೊಟ್ಟೆ
ಮತ್ತೆ ಕೊರಳಾಗಳ ಮುತ್ತನಾರಿಗೆ ಕೊಟ್ಟೆ ೪

ಏರುವ ಅಂದಳ ಕೊಟ್ಟೆ ಮಿಡಿವ ಬೀಸಣಿಗೆ ಕೊಟ್ಟೆ
ಎಚ್ಚರವಂತನೆಂಬ ತೇಜಿನಾ[ರಿಗೆ]ಕೊಟ್ಟೆ ೫

ಹಾಸುಮಂಚ ಹಾಸಿದೆನು ಪತಿಗೆ ಸುಪ್ಪತ್ತಿಗೆ ಒರಗಿಕೊಂಡು
ಪನ್ನೀರ ಮಿಂದು ಪರಪೆಣ್ಣಿನ ಸಂಗವು ಬೇಡ ೬

ನಲ್ಲ ನಿನ್ನ ಎದೆಯ ಮೇಲೆ ಸಣ್ಣ ಚೆಳ್ಳುಗುರರೇಖೆ
ಉರಿವ ಗಾಯಕೆ ಮದ್ದನರವರಿನ್ನಾರಯ್ಯ ೭

ಅಪರಿವರ ಹಾಗೆ ನಾನು ವಿವರಿಸಿ ಬೇಡುವಳಲ್ಲ
ನಿನ್ನ ದಯದುಂಗುರವ ತೋರೊ ಹರಳೋಲೆಗಾಗಬೇಕು ೮

ರೊಕ್ಕ ಬೇಡುವಳಲ್ಲ ಒಡವೆ ಹೋಗೆಂಬಳಲ್ಲ
ನಿನ್ನ ಸೊಂಟದ ಬೆಳ್ಳಿಯ ತಾರೊ ಶಿವದಾರಕಾಗಬೇಕು ೯

ಗುಡಿಯೊಳು ನೆಲಸಿಡಿಗುಡಿಯೊ ಲಾಲೈಸಿದೆ
ಸಾವಂದಿ ನಡುಪೇಟೆಯೊಳು ನಿಂದು ನೆರದೆ ಚೆನ್ನವೀರೇಶ ೧೦

## ಶ್ರೀಗಿರಿ ಮಲ್ಲಿಕಾರ್ಜುನ ಅಂಕಿತದ ಸ್ವರವಚನಗಳು

೮೩

ರಾಗ : ಧನ್ಯಾಸಿ

ಬೆಳಗಾಯಿತೇಳಯ್ಯ ಕಳೆಜೂಟ ಕಾಲಹರ
ಇಳೆಯ ಬ್ರಹ್ಮಾಂಡ ಈರೇಳುಲೋಕಗಳೊಡೆಯ
ಪ್ರಳಯಾಂತಕನೆ ಪಾರ್ವತೀಶಾ ಗಿರಿಮೂಲಚೆಲುವ ನೀನುಪ್ಪವಡಿಸಾ ॥ ಪಲ್ಲ

ವಸುಧೆಯೊಳು ಮೂಡಣಾದ್ರಿಯೊಳು ರವಿ ರಥವೇರಿ
ಬಿಸಿಲು ಹಗಲರಳಿ ಕುಮುದವು ಮುಗಿದು ಕೊಣದೊಳಗೆ
ಮುಸುಕುತವೆ ತುಂಬಿಗಳು ವನದೊಳಗೆ ಪಕ್ಷಿಗಳು ಪಸರಿ ನಲಿದಾಡುತಿವೆಕೊ
ಶಶಿಕಳೆಯ ತಾರೆಗಳು ಮಸುಳಿಹವು ತಿಮಿರ[ವದ]
ದೆಸೆದೆಸೆಗೆ ಹರಿದು ಕುಕ್ಕುಟ ಕೂಗಲಾಕ್ಷಣದಿ
ಕುಸುಮೇಶ ತಿರುಗಿದನು ಕುಂಭಿನಿಯ ಜನರ ತಾಮಸ ನಿದ್ರೆಗಳು ಹರೆದವು ೧

ಓಲಗದ ಮಂಟಪದೊಳು ಸತಿಯರು ಶೃಂಗರಿಸೆ
ಮೇಲುಕಟ್ಟಿಗೆ ಮುತ್ತಿನ ಕುಚ್ಚು ಸರ ಜಲ್ಲಿ
ಮೇಲೆ ನವರತ್ನ ಹೊಂಗಳಸ ಕನ್ನಡಿಗಟ್ಟಿ ಡಾಳಯಿಸಿ ಬೀಸುತ್ತಿದೆ
ಲೀಲೆಯಿಂದಲಿ ಅಮರಗಣರು ದಿಕ್ಪಾಲಕರು
ಓಲಯಿಸಿ ನಿಮ್ಮ ಚರಣವ ಹಾರಯಿಸುವರೆ
ಬಾಲೇಂದುಮೌಳೀಶ ಭಕ್ತಚಿಂತಾಮಣಿಯೆ ಶೂಲಿಧರನುಪ್ಪವಡಿಸಾ ೨

ಕಮಲಜ ಕಮಲನಾಭನಾ ಸತಿಯರೀರ್ವರೂ
ಅಮರೇಂದ್ರ ಕರ್ನಿಕೆಯರಾರತಿಯ ಪಿಡಿದಿಹರೆ
ದ್ಯುಮಣಿ ಶತಕೋಟಿದೀಪ್ತ ಕಾಯಕಾ...ರಿ ಸುಮನಸಾಗರಜೂಟನೆ
ಕ್ರಮ ಬಂದ ಭೃಂಗಿ ನಾಟ್ಯವನಾಡೆ ನಂದೀಶ
ಧಿಮಿ ಧಿಮಿಕ್ಕೆಂದು ಮದ್ದಳೆಯನಾರ್ಭಡಿಸುತಿರೆ
ಭ್ರಮರಕುಂತಳೆಯರೊಡ್ಡೋಲಗದಿ ನಿಂದಿಹರೆ ಉಮೆಯರಸನುಪ್ಪವಡಿಸಾ ೩

ಕಿನ್ನರರು ಗಾಂಧರ್ವ ಗೀರ್ವಾಣಿ ಯಕ್ಷರು
ಸನ್ನುತದಿ ತುಂಬುರರು ನಾರಂದ ನವಬ್ರಹ್ಮ
ಹನ್ನೊಂದು ರುದ್ರಗಣ ಆದಿತ್ಯರುಗಳು ಸಹ ಸನ್ಮಾನದಿಂದೊಪ್ಪುತ
ಮನ್ನಣೆಯೊಳಿಂದೆಸೆವರಾ ಉಗ್ರಗೊಮಾರರು
ಷಣ್ಮುಖನು ವೀರೇಶ ಗಜಮುಖನು ಭೈರವನು
ಉನ್ನತದಿ ನಿಮ್ಮ ಚರಣವನು ಸ್ತುತಿಸುವರೆ ಪ್ರಸನ್ನ ನೀನುಪ್ಪವಡಿಸಾ ೪

ಅತ್ರಿ ವಶಿಷ್ಟ ಕಶ್ಯಪ ಭರಧ್ವಜ ವಿಶ್ವಾ
ಮಿತ್ರ ಗೌತಮಮುನಿಯು ರಾಮಾನುಜಗಸ್ತ್ಯನು
ನೇತ್ರಚರಣದಿ ಮೆರೆವ ಭೃಗುಮುನಿಯು ಮಾಂಡವ್ಯ ವಾಮದೇವನು ಗಾರ್ಗ್ಯನು
ಮತ್ತೆ.... ..ಯು ಶಾಪಲ ಶಾಂಡ್ಯ ಜಮದಗ್ನಿಯು ತನ್ನೊಡಿ
ದತ್ತೆ ಮುನಿಕುಲ ಶತ ಕೊ ....
ಮೊತ್ತ ಮೊತ್ತದಲಿ ಘೋರ್ಗರವುತಿದೆ ದೇವೋತ್ತಮನೆ [ನೀನು] ಉಪ್ಪವಡಿಸಾ ೫

ಕಲ್ಲಯು ಕಕ್ಕಯ್ಯ ಕಲಕೇತ ಬ್ರಹ್ಮಯ್ಯ
ಹಳ್ಳಯ್ಯ ಮಧುವಯ್ಯ ಮಡಿಗೆಯ ಮಾದಿರಾಜ
ಬಲ್ಲಿದನು .. ರಾಯ ಚೇರಮನು ಮೊದಲಾದ ಬಲ್ಲಾಳರಾಯರುಗಳು
ಭಿಲ್ಲಮನು ಹಡಪದಪ್ಪಣ್ಣ ಕಲಿಗಣನಾಥ
ಮೊಲ್ಲೆಯ ಬ್ರಹ್ಮಯ್ಯ ಜಗದೇವ ಮಡಿವಾಳ
ಸಲ್ಲೀಲೆಯಿಂ ಸಕಲ ಪುರಾತನರು ಪ್ರಮಥರುಗಳೆಲ್ಲರು ಬಂದಹರೆ ೬

ಗಂಗೆ ಗೋದಾವರಿಯು ಗೌತಮಿ ಕೃಷ್ಣವೇಣಿ
ತುಂಗಭದ್ರೆಯು ಭಾಗೀರಥಿ ವಾರಣಾಸಿಯೆಂರು
ಹೊಂಗುತಿಹ ಕಾವೇರಿ ಪೊಳೆವ ಕಪಿನಿಯರು ವರಾಂಗನೆಯರುಗಳೆಲ್ಲರು
ಪೊಂಗೊಡನ ತಂದವರೆ ಅವರು ಪನ್ನೀರಕೊಡ
ಅಂಗಜನ ಭಸಿತಾಂಗ ಆದಿವಸ್ತುವೆ ಶಂಭು
ಮಂಗಳಾತ್ಮಕನೆ ಜ್ಯೋತಿರ್ಮಯನೆ ಮಹಾಘನಲಿಂಗ ನೀನುಪ್ಪವಡಿಸಾ ೭

ಇರುವಂತಿ ಸೇವಂತಿ ಮೊಲ್ಲೆ ಮಲ್ಲಿಗೆ ಜಾಜಿ
ಸುರಹೊನ್ನೆ ಸೌಗಂಧಿ ಪಾರಿಜಾತವು ಪಚ್ಚೆ
ಮರುಗ ಮುಡಿವಾಳಂಗಳುಂ ಬಿಲ್ವಪತ್ರೆಯುಂ ತರತರದಲೊಪ್ಪುತಿವೆಕೊ
ಪರಿಮಳದ ಗಂಧ ಚಂದನದ ಉಲಿವ ಕಸ್ತೂರಿಯು
ಪರಿಯಲಷ್ಟವಿಧಾರ್ಚನಂಗಳು ಸುರರು
ನಿಮ್ಮಂಘ್ರಿಗಳ ಪೂಜಿರ್ಪ ಬಂದಹರೆ...ರೆ ಮೂರ್ತಿಯುಪ್ಪವಡಿಸಾ ೮

ಬಿನ್ನಯಿಸಿ ಸುರರು ಕೈಮುಗಿದು ನಿಂದಿರಲಾಗ
ಪನ್ನಗಾಧರನುಪ್ಪವಡ ತಿಳಿದ ಹರುಷದಲಿ
ಪನ್ನೀರು ಮುಖಮಜ್ಜನ ಮಾಡೆ ಪೊರಮಡೆ ಕನ್ನೆಯರಾರತಿಯು ಬೆಳಗೆ
ಸನ್ಮಾನದಿಂದ ಕಂಚುಕರು ಉಪ್ಪಡಿಸುತಿರೆ
ಚಿನ್ಮಯನೆ ಉಘೆ ಚಾಂಗು ಭಲರೆನಲುವೊಪ್ಪಿರ್ದ
ಚೆನ್ನಿಗನೆ ಶ್ರೀಗಿರಿಯ ಮಲ್ಲಿಕಾರ್ಜುನ ಶರಣು ಎನ್ನಯ್ಯನುಪ್ಪವಡಿಸಾ ೯

೮೭

ಬೆಳಗಾಯಿತ್ತು ಬಿಡೊ ಬೆಳಗಾಯಿತ್ತು ಬಿಡೊ ಎನ್ನ ಒಂದು
ಗಳಿಗೆಯ ಮೋಹಕ್ಕೆ ಒಳಗಾದಳೆನಬೇಡ
ಕಳೆಯ ಉಳ್ಳಯ್ಯ ಬಿಡೊ ॥ ಪಲ್ಲ

ರಂಗುದುಟಿಯ ಮೇಲೆ ರತ್ನದ ಕಡುಗೆಂಪು
ಹಿಂಗಿರಲಾರೆ ಬಿಡೊ ನಿನ್ನ
ಅಂಗದ ಭಾವಕ್ಕೆ ಅತಿಮನಸೋತೆನು
ಜಂಗಮಪ್ರೇಮಿ ಬಿಡೊ ೧

ಬಿಗಿದಪ್ಪಿಕೊಳಲು ಬೆವತು ತಲ್ಲಣಿಸಿದೆ
ಅಘಹರನೆ ಬಿಡೊ ನಿನ್ನ
ಅಗಲಿದ ಕಾಲಕ್ಕೆ ಶೃಂಗಾರವಾಗಿರ್ದೆ
ನಗೆಮೊಗದಯ್ಯ ಬಿಡೊ ೨

ಬಟ್ಟಕುಚದ ಮೇಲೆ ಇಟ್ಟವು ನಖರೇಖೆ
ಪಟ್ಟದ ಪ್ರಭುವೆ ಬಿಡೊ
ಸಿಟ್ಟಲಿ ನುಡಿದರೆ ಶ್ರೀಗಿರಿಮಲ್ಲನಾಣೆ
ಕೊಟ್ಟದ ರಾಜ ಬಿಡೊ ೩

# ಶಂಕರ ಅಂಕಿತದ ಸ್ವರವಚನಗಳು

೮೭

ಅಂಗೈಸಿ ಪರಬ್ರಹ್ಮವ ಗೆಲಿದರು ಶಿವ
ಲಿಂಗೈಕ್ಯರು ನೋಡೆವ್ಮುವರಣ್ಣ ॥ ಪಲ್ಲ

ಕಾಲನ ಗಲಿದರು ಲೀಲೆಯಿಂದಾಡುವ
ಶೂಲಧರನ ಭಕ್ತರೆವ್ಮುವರು
ಹಾಳುನಾಡಿ ಹುಲಿಗೆರೆಯಲ್ಲಿ ಜೈನರ
ಗೋಳುಗುಟ್ಟಿಸಿದವರೆವ್ಮುವರಣ್ಣ ೧

ಕಂಡಿರೆ ಶರಣರ ಗಂಡುತನಂಗಳ
ಕೊಂಡ ಶೂಲಗಳು ಕೊನರಿದವು
ಕೆಂಡಗಣ್ಣನ ಸಾಯುಜ್ಯವ ಪಡೆದರು
ಗುಂಡಬ್ರಹ್ಮಯ್ಯಗಳೆವ್ಮುವರಣ್ಣ ೨

ಭೋಗವನಿಕ್ಕರು ಮಾಘವ ಮಿಾಯರು
ಮೂಗ ಮುಟ್ಟರು ನೋಡವ್ಮುವರು
ಲೋಗರ ಒದವಿಗೆ ಬಾಗರು ಬಯಸರು
ಯೋಗಿ ಮಹಾತ್ಮರೆವ್ಮುವರಣ್ಣ ೩

ಹೋತನ ಕೊಲ್ಲರು ಹೋಮವನಿಕ್ಕರು
ಯಾತಕೆ ಶರಣೆನ್ನರೆವ್ಮುವರು ಒಂದು
ಮಾತಿನ ಮಾತಿಡೆ ಶ್ವಾನನ ಕೈಯಲ್ಲಿ
ವೇದವನೋದಿಸಿದರೆವ್ಮುವರಣ್ಣ ೪

ಹೊತ್ತಲ್ಲ ಹೊಗಸಲ್ಲ ಮತ್ತೊಂದು ದಿನವಲ್ಲ
ಬತ್ತವ ಹರಡಿದರೆವ್ಮುವರು
ಬತ್ತವ ಕುಟ್ಟಿಸಿ ಮಾರಿಯ ಕೈಯಲ್ಲಿ
ಅಕ್ಕಿಯ ಹೊರಿಸಿದರೆವ್ಮುವರಣ್ಣ ೫

ಕಟ್ಟಿನ ಬಳ್ಳವ ನೆಟ್ಟು ಲಿಂಗವ ಮಾಡಿ
ಮುಟ್ಟಿ ಪೂಜಿಸಿದವರೆವ್ಮುವರು
ಕೆಟ್ಟಿತು ವ್ರತವೆಂದು ಭ್ರಷ್ಟರು ನುಡಿಯಲು
ದೃಷ್ಟವ ತೋರಿದರೆವ್ಮುವರಣ್ಣ ೬

ಅಘಧರೆ ಇಳಿಯಿತು ಮಿಗಿಲೇಳಾಳುದ್ದ
ಜಗವ ಕಂಡರು ನೋಡೆಮ್ಮವರು
ನಗುವ ದೂಷಕರೆಲ್ಲ ಮಿಗೆ ಲೆಂಕರಾದರು
ಅಘಹರನ ಭಕ್ತರೆಮ್ಮವರಣ್ಣ ೭

ಅಕ್ಕರಿಂದಲಿ ಗೊಲ್ಲಾಳ ಶರಣನು
ಹಿಕ್ಕಿಯನ್ನೊಲಿದು ಪೂಜಿಸಿ
ದುಃಖಗೇಡಿ ತಂದೆಯು ಬಂದೊದೆಯಲು
ಆ ಕ್ಷಣ ಕಡಿದವರೆಮ್ಮವರಣ್ಣ ೮

ಇಟ್ಟುಬಂದಲ್ಲದೆ ಮುಟ್ಟರು ಬೋನವ
ಅಟ್ಟಿ ಅಂಜರು ನೋಡೆಮ್ಮವರು
ಇಟ್ಟಿದ ಕಲ್ಲಿಗೆ ಸಿರಸವ ಸರಿಮಾಡಿ
ಕೊಟ್ಟು ಮೆರೆದ ಭಕ್ತರೆಮ್ಮವರಣ್ಣ ೯

ಪಾಕದ ವೀಳ್ಯವ ಸಾಕಿನ್ನು ಗುಡಿಯಲ್ಲಿ
ಹಾಕಿ ಹೊದ್ದರು ನೋಡೆಮ್ಮವರು
ಲೋಕವರಿಯೆ ಮೈಲಾರನ ಕೈಯಲ್ಲಿ
ಆಕ್ಷಣ ತೆಗಸಿದರೆಮ್ಮವರಣ್ಣ ೧೦

ಹರಕೆಯ ಕುರಿಯನ್ನು ಸರಸಕೆ ಬೆಲೆಮಾಡಿ
ಬರಸಿ ಬಿಟ್ಟರು ಲಿಂಗಮುದ್ರೆಯನು
ಹರಸಿದವರು ಬಂದು ವಿರಸವ ಮಾಡಲು
ಶಿರಸವ ಕೊಯ್ದಿಟ್ಟರೆಮ್ಮವರಣ್ಣ ೧೧

ಭೂಮಿಯಲ್ಲಿ ಶ್ವಪಚಯ್ಯ ಬೋನವ ಮಾಡಲು
ಸಾಮವೇದಿ ಪೋಲೆ ಬರುತಿರಲು
ವಾಮಭಾಗದ ಪಾದರಕ್ಷೆಯ ತೆಕ್ಕೊಂಡು
ಬೋನವ ಮುಚ್ಚಿದರೆಮ್ಮವರಣ್ಣ ೧೨

ಮಡುವಿನ ಹೆದೆಯನು ಹಿಡಿದು ಜಡಿಯಲಾಗ
ಸಡಿಲಿತು ಶಿವದಾರ ಚಂದಯ್ಯಗೆ
ಒಡೆಯನುಳ್ಳ ಬಂಟ ಕಿಡುವನೆಯೆನುತಲ್ಲಿ
ಕಡೆಗೆ ನಡೆದ ಭಕ್ತರೆಮ್ಮವರಣ್ಣ

ಗೊಬ್ಬೂರೊಳು ನಮ್ಮ ಬಿಬ್ಬಿಬಾಚಯ್ಯನು
ಉಬ್ಬಿ ಪ್ರಸಾದವ ತರುತಿರಲು
ಕೊಬ್ಬಿದ ವಿಪ್ರರು ಉಬ್ಬೆದ್ದು ಬೊಗಳಲು
ಗೊಬ್ಬೂರ ಸುಟ್ಟವರೆಮ್ಮವರಣ್ಣ ೧೪

ಹರಿಯೆಂದು ನುಡಿದರೆ ನರಿಯೆಂದು ನೋಡರು
ಮರಳಿ ನುಡಿಯದವರೆಮ್ಮವರು
ಹರನು ಭಿಕ್ಷಕೆ ಬಂದು ಹರಿಯೆಂದು ನುಡಿಯಲು
ಬೆರೆಸಿ ಹೂಡದವರಮ್ಮವರಣ್ಣ ೧೫

ಲೆಕ್ಕವಿಲ್ಲದ ಬಹುಸೇಸೆ ಭಾಗ್ಯವನಲ್ಲವ
ಲೆಕ್ಕಿಸದೆ ಕದಳಿಯ ಪೊಕ್ಕರು
ಮುಕ್ಕಣ್ಣ ಶಿವನನು ಬೆರೆಸಿದ ಮಹಾದೇವಿ
ಅಕ್ಕಗಳೆಂಬವರೆಮ್ಮವರಣ್ಣ ೧೬

ಕಂಚಿನಲಿ ಉಣ್ಣರು ವಂಚನೆಯರಿಯರು
ಮಿಂಚುವ ದಂತಕೆ ಎಲೆ ಮೆಲ್ಲರು
ಶಂಕರನೊಳು ಸಾಯುಜ್ಯವ ಪಡೆದರು ಶಿವ
ಲೆಂಕ ಮಂಚಣ್ಣಗಳೆಮ್ಮವರಣ್ಣ ೧೭

೮೮

ಹೆದರದಿರು ಮನವೆ ನೀ ಹೆದರಿ ಹಿಮ್ಮೆಟ್ಟದಿರು
ಮದನಾರಿ ಬರೆದ ಬರಹವು ಮೀರಲರಿದು ॥ ಪಲ್ಲ

ಆಯಾ ವಿದ್ಯದ ಕರ್ಮ ಮಾಯದ ಕರಣ ಭೂಮಿ
ಕಾಯಕಲ್ಪಿತ ಪಂಚಲಿಖಿತಂಗಳೆಲವೊ
ತಾಯ ಗರ್ಭದಲೊಂದು ಬರದಂಥ ಶಿವನಿರೆ ವ್ಯ
ಥಾ ಯಾಕೆ  ಚಿಂತಿಸಲೇಕೆ ನೀ ನುಡಿ ಮನವೆ ೧

ಹರಿ ಹತ್ತು ಭವ ಬಂದ ಸುರಪನೊಡಲ್ಭಗವಾಯ್ತು
ಧರೆಯ ಸೃಷ್ಟಿಪ ಅಜನ ಶಿರ ಹೋಯಿತೆಲವೊ
ಶಿರ ಹೋಗಿ ಸುರರೆಲ್ಲ ಮೃಗವಾಗಿ ಚರಿಸಿದರು
ಸೆರೆಗೆಡೆದರಮರರ ಸತಿಯರು ಮೂರು ಪುರಕೆ ೨

ಬೇಕೆಂದಡಾಗದು ಬೇಡವೆನೆ ಪೋಣದು
ನೀ ಕಂದಿಗುಂದಿ ಚಿಂತಿಸಲೇಕೆ ಮನವೆ
ನೂಕು ಭವಸಾಗರವ ಗುರುಶಂಕರೇಶ್ವರನ ಅ
ನೇಕ ಪರಿಯಿಂದಲರ್ಚಿಸು ಮರುಳು ಮನವೆ ೩

೮೯

ರಾಗ : ಭೂಪಾಳ

ಹರಪೂಜೆಯನು ಮಾಡು ಶರಿರವಿದು ಸ್ಥಿರವಲ್ಲ
ಗುರುಸೇವೆಗಲಸದಿರು ಜಂಗಮಾರ್ಚನೆ ಮಾಡು
ಪರಸತಿಗೆ ಪರಧನಕೆ ಹರಿಯಬಿಡದಿರು ಮನವ ಗುರಿಯಾಗದಿರು ಯಮನಿಗೆ ॥ ಪಲ್ಲ

ವರ ತಪಸ್ವಿಯಸತಿಗೆ ಸುರಪತಿಯು ಮನವೆಳಸಿ
ನಿರಿರಾತ್ರಿಯೊಳಗೆ ಕುಕ್ಕುಟನಾಗಿ ಕೂಗೆ ಮುನಿ
ಹರುಷದಿಂ ಬೆಳಗಾಯಿತೆಂದು ಪುಷ್ಪಕೆ ಪೋಗೆ ತರುಣಿಯೊರ್ವಳೆ ಮಲಗಿರೆ
ಪುರುಷನಾ ಅಂದದಿಂದೆಯಿತಂದು ದೇವೇಂದ್ರ
ಪರಸತಿಯ ಕೂಡಿರಲು ಮುನಿ ಕಂಡು ಕೋಪದಿಂ,
ಕರೆದು ಶಾಪವ ಕೊಡಲು ಶರಿರ ಭಗವಾದುದನು ಹೇಳುವದ ಕೇಳಿಯರಿಯ ೧

ಪತಿ ಬೇಂಟೆಯಂ ಪೋಗೆ ಸತಿಯೊಬ್ಬಳಿರೆ ಸೀತೆ
ಮತಿಗೆಟ್ಟ ರಾವಳನು ಲಂಕೆಯಿಂದೈತಂದು
ಪತಿವ್ರತೆಯರಿಯದೆಯವಳ ರೂಪಿಂಗೆ ಮನಸೋತು ರಥವನೇರಿಸಿ ಒಯ್ಯಲು
ಅತಿಕೋಪದಿಂ ರಾಮಲಕ್ಷ್ಮಣರು ದಂಡೆತ್ತಿ
ಕೃತಕದಿಂ ಲಂಕೆಯಂ ಮುತ್ತಿ ಪುರವಂ ಸುಟ್ಟು
ಸತಿಯ ತರಬಹುದೆಲವೊಯೆಂದು ದಶಶಿರನ ಕೊಂದ ಕಥನವ ಕೇಳಿಯರಿಯ ೨

ಪರಸತಿಗೆ ಅಳುಪಿದನ ಶಿರಹೋಯ್ತು ಜಗವರಿಯೆ
ಅರಮನೆಯೊಳಿರ್ದ ಸತಿಯರು ಸಿಲ್ಕಿ ಸೆರೆಹೋಗಿ
ಇರದೆ ಕೆಟ್ಟರು ಲಂಕೆ ಹಾಳಾಗಿಹೋಯ್ತವನ ಸಿರಿ ಧನವು ನಿಮಿಷದೊಳಗೆ
ಸುರಪತಿಯೆನಿಸುವಂಗೆ ಯೋನಿ ಮಾಡಿದೆವೆಂದು
ಬ್ಬರಿಸುತಿಹೆ ಶಂಗುರವು ಹೊಯಿದು ಲೋಕದೊಳಯಿವ
ಕೆಟ್ಟುದನು ಕೇಳಿಯರಿಯ ೩

ಪೊಡವಿಯೊಳು ದೇವರೆಂದೆನಿಸಿಕೊಂಡವರಿಂತು
ನಡೆದು ಕೆಟ್ಟರು ಪರರೊಡವೆ ಮಡದಿಯರಿಗಳುಪಿ
ಬಿಡು ಮನುಜ ಮುಂದೆಯೊ ಶರೀರವಿದು ಸ್ಥಿರವಲ್ಲ ನಡೆ ಪುಣ್ಯ ಪಾಪವರಿದು
ಬಿಡದಿರ್ದಡಂ ಮುಂದೆ ಬಲುಬಾಧೆಯನು ಮಾಡೆ
ಹಿಡಿದೊಯಿದು ಯಮನವರು
ಕಡು ಕಾದ ಕಂಭವನು ತರ್ಕೈಸು ನೀನೆಂದು ಬಿಡದೆ ಕೊಟ್ಟರು ದೂತರು ೪

ಶರೀರದೊಳು ಭಸಿತ ರುದ್ರಾಕ್ಷಿ ಲಿಂಗವ ಧರಿಸಿ
ಪರಸತಿಗೆ ಪರಧನಕೆ ಪರಿವೃತಿರ್ಪನ ಭಕ್ತಿ
ಸುರೆಯ ಕೊಡನಿಗೆ ಬೂದಿಯಂ ಪೂಸಿದಂತಕ್ಕು ಇರಿದು ಕೊಲ್ವರು ದೂತರು
ಪೆರೆಹಿಂಗದಂತಪ್ಪ ಪೇಚಸಂಗಳ ಬಿಟ್ಟು
ಗುರು ಲಿಂಗ ಜಂಗಮವನರ್ಚಿಸುವನಾದಂಗೆ
ಪುರಹರಂ ಶಿವನ ಪದವಿಯನಿತ್ತು ಪಾಲಿಪಂ ಗುರು ಶಂಕರೇಶನೊಲಿದು ೫

೯೦

ರಾಗ : ಶಂಕರಾಭರಣ

ಪೂರ್ವಾರ್ಜಿತಂಗಳನು ಆರು ಮೀರಲಿಬಹುದು
ಗೀರ್ವಾಣರಾದಡಂ ಬಿಡದು ಕಲ್ಪಿತವೆಂದು
ಸರ್ವ ಭವರೋಗ ಅಮರರ ಕಾಡುವದು ವಿಧಿಯನಾವ ದೇವರು ಗೆಲ್ಲರೊ ॥ ಪಲ್ಲ

ಹರ ಬರೆದ ಬರಹವನು ತೊಡೆಯಲಾರ್ಪವರುಂಟೆ
ಹರಿ ಹತ್ತುಭವ ಬಂದ ಸಿರಿ ತಿರಿಗಿದಳು ಕೂಡೆ
ಸುರಪತಿಯ ತನುವಿನೊಳು ಸಹಸ್ರಕಂಗಳು ಮೂಡೆ ಶುಕ್ರಂಗೆ ಒಂದು ನಯನ
ತರಣಿ ಶಶಿಗಳಿಗೆ ರಾಹುವಿನ ಹಗೆ ಹಿಂಗದದು
ಉರಗ ಗರುಡಗೆ ಬದ್ಧ ವೈರ ಮಾಣದು ಕಾಮ
ನುರಿದುಹೋದನು ವರುಣ ಹೆಳವನಾದನು ವಿಧಿಯನಾವ ದೇವರು ಗೆಲ್ವರೊ ೧

ಹುಲುಬೇಡನಂಬ ತಾಗದೆ ಕೃಷ್ಣನಂಗಾಲ
ಬಲಿ ಬಂಧನಕೆ ಬಂದ ಫಾಲ್ಗುಣನು ಹೆಣ್ಣಾದ
ಜಲದೊಳಗೆ ಸಿಲುಕಿದನು ಕೋರಾಂಟಕನು ವ್ಯಳುಡಿಳಿಯಲ್ಲಿ ಗುಂಡಾಗನೆ
ಥಲದಂಕ ವಾಲಿ ತಾನೊಂದೆ ಬಾಣದಿ ಮಡಿದ
ಶಿಲೆಯಾದಳಾಹಲ್ಯೆ ಸಹದೇವ ಕರುಗಾಯ್ದು
ನಳ ಧರ್ಮರು ರಾಜ್ಯದಿ ಭ್ರಷ್ಟರಾದರು ವಿಧಿಯನಾವ ದೇವರು ಗೆಲ್ವರೊ ೨

ವಾಣೀಪತಿಯು ಶಿರವ ಚಿವುಟನೇ ಶಿವ ಮುನಿದು
ರೇಣುಕಾದೇವಿಯರಸನ ಕೊರಳ ಕೊಯಿಸಳೇ
ಬಾಣಾಸುರನ ಹಲವು ತೋಳುಗಳ ಖಂಡಿಸನೆ ಚಕ್ರಧರನೊಪ್ಪದಿಂದ
ಕ್ಷೋಣಿಯೊಳು ಕಟ್ಟುಗರುವಾಯಿತು ಪುರುಷಮೃಗವು
ಬಾಣಸಿಗನಾದ ಭೀಮನು ವಿರಾಟನ ಮನೆಗೆ
ಪ್ರಾಣಹೋಯಿತು ಕೀಚಕನಿಗೆ ಪರಸತಿಗಾಗಿ ವಿಧಿಯನಾವ ದೇವರು ಗೆಲ್ವರೊ ೩

ದಶರಥನ ತೋಹಿನೊಳು ಅಸುಹೋಯ್ತು ಚೌಡಂಗೆ
ವಿಷದೊಳಳಿದನು ಪರೀಕ್ಷಿತರಾಯರಸಿಮಲ್ಲ
ಬಸುಗುತ್ತ ಭಟ್ಟಿ ಸತ್ತನು ಶೂದ್ರಿಕನ ತಲೆಯು ಕಾಂಚಿಯಾಲದಿ ಮೆರೆಯದ
ಕೆಸರೊಳಿಳಿದಾ ರಥವ ವಶಮಾಡಿ ಮಾಂಡ್ಯನುಪಿ
ಬಸಿದ ಶೂಲಕ್ಕೆ ಗುರಿಯಾಗಿ ಬಿದ್ದನು ತನ್ನ
ಸೊಸೆಯೆಂಬ ವಶಗೆ ಕಡಿದಾಡಿ ಸತ್ತನು ಪಕ್ಷಿ ವಿಧಿಯನಾವ ದೇವರು ಗೆಲ್ವರೊ ೪

ನಾಗಾರಿಯವ್ವೆ ಸವತಿಗೆ ದಾಸಿಯಾಗಳೇ
ಯಾಗವನು ಮಾಡೆ ದಕ್ಷನ ಶಿರವು ಹೋಗದೇ
ಭಾಗೀರಥಿಯು ಮಾನವಂಗೆ ಹೆಂಡತಿಯಾಗಿ ಅಷ್ಟಪುತ್ರರ ಪಡೆಯಳೆ
ಸಾಗರದೊಳಿರ್ದ ಗಂಭೀರವನು ಮುನಿ ಕುಡಿಯೆ
ನಾಗಾರ್ಜುನನು ತಲೆಯ ಹೋಗಾಡಿಕೊಳ್ಳನೇ
ಕಾಗೆಯಡಗಿಂಗೆ ಬಯಸಿದ ವಿಕ್ರಮನು ವಿಧಿಯನಾವ ದೇವರು ಗೆಲ್ವರೊ ೫

ಜಡೆಮುಡಿಯೊಳಿರ್ದಳಾ ದ್ರೌಪದಿಯು ದಮಯಂತಿ
ನಡುವಿರುಳು ಸಿಲುಕಿದಳು ಬೇಂಟೆಗಾರನ ಬಲೆಗೆ
ಮಡದಿ ಮಕ್ಕಳುಗಳಿಲ್ಲದೆ ಅಂಬುಗುರಿಯಾಗಿ ಮಡಿದ ರಣದಲಿ ಭೀಷ್ಮನು
ಸುಡುಗಾಡ ಕಾಯ್ದನಾ ಹರಿಶ್ಚಂದ್ರ ಚಂದ್ರಮತಿ
ಬಿಡದೆ ತೊತ್ತಾದಳಾಕೆಯ ಮಗನು ಹಾವಿಂದ
ಮಡಿದ....ವಿಧಿಯನಾವ ದೇವರು ಗೆಲ್ವರೊ ೬

ಜಡೆಗಟ್ಟಿ ಯತಿಯಾಗಿ ರಾಮರಾ ಸೀತೆಯಂ
ಬಿಡದೆ ರಾವಳನು ಕೊಂಡೊಯಲಾಗಿ ಹನುಮಂತ
ಹೆಡಗಟ್ಟಿಗೊಳಗಾಗಿ ಬಾಲಕ್ಕೆ ದೊಂದಿಯನು ಸುತ್ತಿ ಸಲೆ ಲಂಕೆಯೊಳಗೆ
ಮೃಡನ ವಶ ವಿಧಿ ತಾನು ವಿಧಿಯ ವಶವೀ ಲೋಕ
ಜಡಮತಿ ತಿಳಿಯಿನ್ನಾದಡು ಶಿವನ ಪೂಜಿಸಿರೊ
ಒಡೆಯರುಳ್ಳಾಳಿಂಗೆ ಭಯಬೇಡ ಶಂಕರನ ಭಜಿಸಿರೋ ಭವ ಬಿಡುವುದು ೭

೯೧

ರಾಗ : ಪಾಡಿ

ಎಮ್ಮಯ್ಯ ದಮ್ಮಯ್ಯ ನಾ ನಿಮ್ಮ
ಸೊಮ್ಮಯ್ಯ ಕರಪೀಠಕೆ ಬಾ ಬಾ ॥ ಪಲ್ಲ

ಅರವಿಂದದಮರ ಕಂದಮಾಲೆಯು
ಸುರಿಗೆಯು ನನೆ ಮರುಗದ ಕೊನೆಯೂ
ಇರವಂತಿಗೆ ಸೇವಂತಿಗೆ ಪೂವಿನ
ಪರಿಮಳವಿವೆ ಕರಪೀಠಕೆ ಬಾ ಬಾ ೧

ಸುಕರವೆನಿಪ ಕೆಂದಳಿರಂದಳದಿಂ
ಅಕುಳ ಬಕುಳ ಮಾದಳದರಳಿಂ
ಶಕು ಪಿಕ ಮಧುಕರನಿಕರದ ರವದಿಂ
ಅಕುಟಿಲ ಮುಮುಕರ ಪೀಠಕೆ ಬಾ ಬಾ ೨

ಆರತಿಯಂಗನೆ ಸಾರಥಿ ಪಾರ್ಥನೆ
ಆರತಿ ಮಾಣಿಕದಾರತಿಯಿಂ
ಈರತಿಯಿಂದಲಿ ಪಿಡಿದೈ ದಿನೇಶ್ವರು
ಶಾರತಿಯಿಂ ಕರಪೀಠಕೆ ಬಾ ಬಾ ೩

ಹರಿಯಜರೆಡಬಲದಲಿ ನಡೆಸಹೋ
ದರು ಕೇಳಿರದೆಯೆಂದುಗ್ಘಡಿಸೆ
ಸುರಪತಿ ಜಯ ಜಯ ನಮೊಯೆನೆ ಎನ್ನ
ಕರಪೀಠಕೆ ನೀನೊಲಿದು ಬಾ ಬಾ ೪

ಲಾಲಿಸಿ ಪಾಲಿಸಿ ಕರಕಮಲದೊಳೊ
ಡ್ಡೋಲಗವಿತ್ತು ಜಗತ್ರಯವಂ
ಆಳುತ ಬಾಳುತ ಶಂಕರಲಿಂಗವೆ
ಲೀಲಾ ನಿಜ ಸುಖಿಯಾಗಿರು ಬಾ ಬಾ ೫

೯೨

ರಾಗ : ಭೂಪಾಳಿ

ನಚ್ಚದಿರು ಕಾಯವನು ಎಚ್ಚರಾಗದ ಮುನ್ನ
ನಿಚ್ಚ ಭವಹರನ ಪೂಜೆಯ ಮಾಡಿರೊ ॥ ಪಲ್ಲ

ಕಸಮಲದ ಕಾಯವಿದು ಅಸನವೇಯಾಧಾರ
ಮಸಣದಲಿ ಮನೆ ತನಗೆ ಸಹವಪ್ಪುದು
ಬಸವಳಿವುದೀ ಕಾಯ ಬಯಲಭ್ರಮೆ ನಿಜವಿಲ್ಲ
ಬಿಸಿಗಣ್ಣ ಶಿವನ ಪೂಜೆಯ ಮಾಡಿರೋ ೧

ಸಿಡಿಲೊಡ್ಡಿ ಎರಗಿದಡೆ ಕೊಡೆ ಕಾಯ ಬಲ್ಲುದೇ
ಮೃಡನೊಲುಮೆ ತಪ್ಪಿದಡೆ ಕೊಡುವರುಂಟೇ
ಬಿಡದೆ ಕಾಲನ ಭಟರು ಎಳೆದು ಕೊಂಡೊಯಿವಾಗ
ತಡೆದುಕೊಂಬವರುಂಟೆ ಎಲೆ ಮಾನವಾ ೨

ತೊಗಲಬೊಂಬೆಯು ಕಾಯ ನೆಗನೆಗದು ಕುಣಿಕುಣಿದು
ಜಗವೆಲ್ಲ ತನಗೆ ಬೇಕೆಂದೆಂಬುದು
ಹಗೆ ತನ್ನ ಕೊಂದವನ ಹುಗಿದು ಮಣ್ಣಲಿ ತುಂಬಿ
ಹಗೆಯವನ ಕೊಡೇನು ನುಡಿ ಮಾನವಾ ೩

ಕುಲವು ಕುಲವೆಂಬ[ರಿ]ಬಿಡಿ ಕುಲ ಛಲಕೆ ಹೋರುವಿರಿ
ಕುಲದಲಧಿಕರಾರುಯೆಲೆ ಮಾನವಾ
ಹೊಲೆ ಮಾಂಸ ನರವಿರ್ಪ ತಾಯ ಗರ್ಭದಿ ಜನಿಸಿ
ಕುಲಕೆ ಹೋರುವ ಖೂಳರೆಲೆ ಮಾನವಾ ೪

ಕೆಲವು ದಿನದಲಿ ಪಕ್ಷಿ ಫಲವನುಂಡೆನುಯೆಂದು
ಹಲವು ಕೊಂಬೆಗೆ ಹಾರಿ ಬಳಲುವಂತೆ
ಹೊಲೆದೈವಕ್ಕೆರಗುವ ಮನುಜರಿಗಿನ್ನೇನೆಂಬೆ
ಕುಲವಿಲ್ಲದವನ ಪೂಜೆಯ ಮಾಡಿರೊ ೫

ಕಾಯವಿದು ಸ್ಥಿರವಲ್ಲ ಮಾಯೆ ಬಿತ್ತಿದ ಬೆಳೆಯು
ಕಾಯ ಹಣ್ಣಾಗಿ ತಾನುರುಳುವಂತೆ
ಸಾಯದವರಾರಿನ್ನು ಸಕಲ ಜೀವಂಗಳೊಳು
ಕಾಯವೆರವಿನ ಸೊಮ್ಮು ಎಲೆ ಮಾನವಾ ೬

ಡಂಭಕದ ಕಾಯವಿದು ಕೊಂಬದಿದು ಕೊಡುವದಿದು
ತುಂಬಿ ಕೆಡುತಿಹುದು ತನ್ನ ದಿನವ ಕಳೆದು
ಬೆಂಬಿಡದೆ ಪ್ರಾಣವನು ಕೊಂಬವರು ಬರುತಹರೆ
ಶಂಭುಶಂಕರನ ಪೂಜೆಯ ಮಾಡಿರೊ ೭

೯೩

ಎಂಥ ಕನಸ ಕಂಡೆ ಏಣಲೋಚನೆ.
ಕುಂತಳದೇಶವು ಸಿವುಳಿ ಬರುವದ ಕಂಡೆನು ॥ ಪಲ್ಲ

ಕೆಸರೊಳಗಿಹ ತಾವರೆ ಕೆಸರ ತಿಂಬುದ ಕಂಡೆ
ಶಶಿ ಗಗನವ ನುಂಗಿದುದನು ಕಂಡೆ
ಒಸರುವ ಮಳೆಹನಿ ಸೂಸಲಂಬುಧಿಯು ನುಂಗಿ
ಕಸ ಬೆಂಕಿಯನು ನುಂಗಿ ಕಳೆದೋರಿತಕ್ಕಯ್ಯ ೧

ಉಣಬಂದ ಐವರೆ ನೊಣ ನುಂಗಿದುದ ಕಂಡೆ
ಹೆಣನು ಜೀವವ ನುಂಗಿದುದನು ಕಂಡೆ
ಬಣಕಿಲುಬಹ ಶೂರನ ರಣ ನುಂಗಿ ಕೂಗುತಿವೆ
ಫಣಿಯು ಹೆಡೆಯು ಜ್ಯೋತಿ ರವಿ ನುಂಗಿತಕ್ಕಯ್ಯ ೨

ಇರುವೆ ಭೂಮಿಯು ನುಂಗಿ ಕರಿಯು ಕತ್ತಲೆ ನುಂಗಿ
ಮೊರೆವ ಗಾಳಿಯು ಹದ್ದು ನುಂಗಿತಕ್ಕಯ್ಯ
ಬರುವ ಮಾರಿಯು ಸಣ್ಣ ನೊರಜು ನುಂಗಿದುದ ಕಂಡೆ
ಬೆರಗಾಗೆ ಬಯಲಿಗೆ ಭಯಬಟ್ಟೆನಕ್ಕಯ್ಯ ೩

ಗಂಧ ಗಾಳಿಯು ನುಂಗಿ ನಿಂಬೆ ಕೊಡನ ನುಂಗಿ
ಮಂದರಗಿರಿಯು ವಾನರ ನುಂಗಿತು
ಅಂದವಿಲ್ಲದ ರೂಪು ಅಂಬರವ ಸಲೆ ನುಂಗಿ ನಂಬಿ
ಬಂದವನ ಬಯಲು ನುಂಗಿತಕ್ಕಯ್ಯ ೪

ಮಂಕು ಮರುಳ ನುಂಗಿ ಶಂಕು ಸಾಗ್ರವ ನುಂಗಿ
ಲೆಂಕಿಕನು ರಸ ಬೀಜವ ನುಂಗಿತೆ
ಝಂಕಿಸಿ ಹಾರುವ ಹಂಸನ ಗರಿ ಹೋಗಿ
ಶಂಕರನಂಘ್ರಿಯೊಳ್ ಸೇರಿತಲ್ಲಕ್ಕಯ್ಯ ೫

೯೪

ಓಂ ನಮೋ ಶಿವಾಯ ಎನ್ನಿ ಸಂತತ ॥ ಪಲ್ಲ

ಮ[ರು]ತೆ ಸಂಗದಿಂದ ಗಗನ ಗಂಗೆ
ಧರಣಿ ಗಿಳಿದು ಬಂದು
ಮರಳಿ ಭವಜಲವ ಬೆರಸಲಾರದಂದದಿಂ
ಕರಣಗಣ ಲಿಂಗವ ಬಂದು
ಪರಮನಕಟ ಜೀವನಾಗಿ
ಹಿರಿದು ರೂಪ ತಾಳ್ದು ಜನಿಸುತಿಪ....... ೧

ಆನೆ ಮದದೊಳುಕ್ಕಿ ಸೊಕ್ಕಿ ಮಿಕ್ಕಿ ಮೀರಿ ಕೆಸರ ಪೊಕ್ಕು
ಹೀನಸತ್ವನಾಗಿ ಏಳಲಾರದಂದದಿಂ
ತಾನೆ ತನ್ನ ಲೀಲೆಯಿಂದೆ ನಿರ್ಮಳಾತ್ಮನರಸರಿರ
ಕಾನನಕ್ಕೆ ಸಿಕ್ಕಿ ತೊಳಲಲಾರದಂದದಿಂ ತನ್ನ
ಸೇನೆ ತನ್ನ ಹಿಡಿದು ರಾಯಸಿಲ್ಕಿ ಮಹಿಮಗೆಟ್ಟು
ಮುನ್ನಿನಂತ....ನಾಳಲಾಂ.... ೨

ಹೊನ್ನು ಹೆಣ್ಣು ಮಣ್ಣು ಮೂರಂ
ತನ್ನೊಳಿರ್ದು ತನ್ನೊಳೆನಿಸಿ
ತನ್ನ....ಟಿದು ತನ್ನ ತೇಗುತಿರ್ಪ.... ೩

ಹಸುವಿನೊಳಗೆ ತೃಷೆಯದೊಳಗೆ
.... .... ............
ಮುಸುಕಿವ....ವಕಾಂಕ್ಷೆಯೊಳಗೆ ಸಂತತಂ
ಹಸಿಯು ಹುಸಿಯು ಮುಸಿಯು ಹಾಸಿ
ಹೊದ್ದು ನಿದ್ರೆಗೈವ ಹಗಲ
ಶಶಿಯವೊಲು ಮಹಾದಾರಿದ್ರನಾದ ಕಾರಣಂ.... ೪

ಮರನ ನೆಳಲ ಮರೆಯ....ನ ನೆಳಲನಿಂಬುಗೊಂಬ
ತರುವಿನಂತೆಯಂ....ನಸಿರೊಸರೂ ರಾಜ್ಯಕೆ
ಅರಸ ಶಂಕರೇಶ ತಂ....ಸಾರ್ದು ನೆನೆವ ಭಜಕರನ್ನು
ಮರಳಿ ಭವಕೆ ಬರಸದಿಪ್ಪಕಾರಣಂ ೫

೯೫

ಕಣಿಯ ಹೇಳಲಿ ಬಂದೆ ನಾನು
ತ್ರಿಣಯನಲ್ಲದಿಲ್ಲವೆಂಬ
ಬಣಗುದೈವದ ಭಜನೆಗಾಗಿ
ಒಣಗಿ ಸಾಯಬೇಡವೊ ॥ ಪಲ್ಲ ॥

ಎಕನಾತಿಯೆರ್ಕ್ಯಕಟಿ ಜಕ್ಕಿಣಿ ಕನ್ನೆಯರು
ನಾಪೆಯಾದ ಮೊದಲಾದ ಯಿತ ಚುಂಕ್ತಿದೈವದ ಭಜನೆಗಾಗಿ
ಸಿಕ್ಕಿ ಕೆಡಬೇಡವೊ ೧

ಹಳ್ಳದಟ್ಟ್ಯ ಬೀರ ಮಾರ ಸುಳಿದೈವವೆಲ್ಲಾ ಕೂಡಿ
ಬೆಳ್ಳಗಾದ ಬಾಳಿಗೆರೆಯ ನೀರ ತಡಿಯಲಿ
ಗುಳ್ಳೆ ಗೊರಜ ಕುದಿಸಿ ತಿಂದು ಕಳ್ಳಕೊಡನ ಬರಿತೆ ಮಡಿ
ಸುಳ್ಳಿದೈವದಸಂಗ ಬೇಡ ನರಕ ತಪ್ಪದು ೨

ಖೊಳದವಳ ಮಾತು ಕೇಳಿ ಕೀಳುದೈವದ ಭಜನೆಯಿಂದ
ಹಾಳುಮಾಡುತಿಪ್ಪ ಕೈಯ ತರ ಹಣಗಳ
ಬಾಳುತಿಪ್ಪ ಕೇಳಿ ಕುರಿಯ ಬೀಳ ಬೀಳ ಕೊರಳ ಕೊಯಿದು
ಬೀಳಬೇಡ ನರಕಕೆಯೆಂದು ಹೇಳಬಂದೆನು ೩

ಮುತ್ತಿಲ್ಲಳ ಮಾತ ಕೇಳಿ ಗುತ್ತಿಯಕ್ಕ ಜಾಣೆಯೆಂದು
ಬಾತ್ತಲ್ಲೆ ಬರುವ ದಸಿಯ ನೋಡಿರೊ
ಇತ್ತನಾಯಪಾಟಿಯಂತೆಪೆತ್ತಿ ಬಗುಳಿ ಕಚ್ಚುತಿಪ್ಪ
ದತ್ತಮಿ....ತಾಗನಾ ಹಿಂದೆ ಹತ್ತಬೇಡವೊ ೪

ಹೊನ್ನ ಹಣವ ಹೆಚ್ಚಿ ಮನೆಯ ಚಿನ್ನಘಟ್ಟಿ ಘನವೆಂದು
ಕನ್ನೆಯರ ತಾಳಿಯ ಮುಸ್ನೂರ ಮಾಡಿಸಿ
ಎನ್ನ ಮನೆದೇವಿ ತಾನು ಉನ್ನತವ ಕೊಟ್ಟಳೆಂದು
ತನ್ನ ಲಿಂಗವ ಒಡೆಯ ಬಿದ್ದು ಶರಣೆಂಬವರಿಗೆ ೫

ಆಷಾಢದ ಗಾಳಿ ಬೀಸಿದಾವಶಕಗೀ ಮರವಗ
ಅವಸರಕೆ ತಾಳಿಯನು ತಂದು ತೋರಿಸೆ ಕಾಸಿ ಕರಗಿಸಿ
ಬೀಸಿ ಹೊಯಿದು ತ್ರಾಸಿನೊಳಗೆ ತೂಗುವಗೆ
ದೇಶದೊಳಗೆ ಅವರ ದೈವಕಾಸೆಯಾದವೊ ೬

ಅಡಿಯ ನೋಡಿ ವಿಷ್ಣು ಕಾಣ ಮುಡಿಯ ನೋಡಿ ಬ್ರಹ್ಮ ಕಾಣ
ನುಡಿವ ವೇದ ನಾಲ್ಕು ಮರಣಕಾಣವು
ಗಡಿಯಂಕ ಭುವನೆಯೆನ್ನ ಒಡೆಯ ಶಂಕರೇಶ ನಿಮ್ಮ
ಪೊಡವಿಯೊಳಗೆ ಮುಂಡಿಗೆಯಿರೆ ಸಾರ ಬಂದೆನೊ ೭

## ಸಂಗಮೇಶ ಅಂಕಿತದ ಸ್ವರವಚನ

೯೭

ಹದುಳವಲ್ಲವೆ ನೋಡೆ
ಹದುಳವಲ್ಲವೆ
ಸದಮಲಾತ್ಮಕ ಲಿಂಗದಲ್ಲಿ
ಹುದುಗಿದಂಥ ಶರಣಜನಕೆ ॥ ಪಲ್ಲ

ಅಂಗ ಹಸ್ತ ಶಕ್ತಿ ಭಕ್ತಿ
ಲಿಂಗುತ್ಪತ್ತಿ ವರ್ಣಮುಖವು
ಕಂಗಳಲ್ಲಿ ಕಂಡು ವಿಶ್ವ
ಲಿಂಗದಲಿ ಬೆರೆದವರ್ಗೆ ೧

ಆದಿ ಅಂತ್ಯವಾದಿಯಂತ್ಯ
ವಾದಿ ಮಾಡಿಸೊಹ
ಪ್ಮೃಂದುಪಾನ ವರ್ಣವೆರಡುವಳಿದು
ನಾದಬ್ರಹ್ಮವಾದಗೆ ೨

ಕಂಗಳೆರೆಯು ಮುಗಿದು ಯಮುನೆ
ಗಂಗೆಯಜನ ರಮಣಿ ರವಿಯು
ತಿಂಗಳಾಗಿ ಕೂಡಿದಲ್ಲಿ
ಹೊಂಗೆ ವಾಯುಮಾನಲೈಸಿ ೩

ಚಕ್ರವಾರು ಚಕ್ರವೆರಡು
ಚಕ್ರವಂದೆಯಿಾದ ಬ್ರಹ್ಮ
ಚಕ್ರಜ್ಯೋತಿಯಲ್ಲಿ ಬೆರೆದು
ವಿಕ್ರಮಾಂಕರಾದವರ್ಗೆ ೪

ಆದಿಸಂಗಮೇಶನಿರವ
ವೇದಮಯುದಿ ತಿಳಿದು ನಿಜದ
ಹಾದಿ ಹಿಡಿದು ಹೋದವರ್ಗೆ ೫

## ನಂಜುಂಡ ಅಂಕಿತದ ಸ್ವರವಚನ

೯೭

ರಾಗ : ಭೈರವಿ

ಏಕೆ ಚಿಂತಿಸುವೆ ಬರಿದೆ ಶಿವ ಬರೆದ
ವಾಕು ತಪ್ಪದು ಪಣೆಯಲಿ ಮರುಳೆ ॥ ಪಲ್ಲ

ಉರಗ ವೃಶ್ಚಿಕ ಪಾವಕ ಕರಿ ನಂಜು
ಅರಸು ಹುಲಿ ಚೋರ ಭಯವ್ರ ಮರುಳೆ
ಹರನಾಜ್ಞೆಯಿಂದಲ್ಲದೆ ಮೀರಲದು
ಸರಸಿಯನು ಹೊಗಲು ಬಿಡದು ಮರುಳೆ ೧

ಹುಟ್ಟುವದಕಿಂದ ಮೊದಲು ತಾಯ ಮೊಲೆಯೊ
ಳಿಟ್ಟಿಹ ಕ್ಷೀರವನ್ನು ನೀನು ಮರುಳೆ
ತೊಟ್ಟಿಲೊಳು ಮಲಗಿರುತಾಗ ನೀ ತಂ
ದಿಟ್ಟುಕೊಂಡುಣುತಿರ್ದೆಯಾ ಮರುಳೆ ೨

ಇಂತು ಸುಖದುಃಖಗಳಿರೆ ಸೋತು ಮನ
ಭ್ರಾಂತುಗೊಂಡಿರಲಿಬೇಡಾ ಮರುಳೆ
ಸಂತೋಷದಿಂದರ್ಚಿಸು ಮನ [ಸಿ]
ಶಾಂತಕ ಗುರು ನಂಜುಂಡನ ಪದವ ಮರುಳೆ ೩

## ಇಮ್ಮಡಿ ಕರಿಬಸವೇಶ ಅಂಕಿತದ ಸ್ವರವಚನ

೯೮

ಸೈ ಶಾಭಾಸು ಗುರುವೆ ಎಂಥ ಒಳ್ಳೆಮಂತ್ರವ ಹೇಳಿದೆ
ತೈ ತೈ ಕುಣಿಸುತಲೆನ್ನ ನಿನ್ನಂತೆ ನೀ ಮಾಡಿದೆ ॥ ಪಲ್ಲ

ಬುದ್ಧಿಯನ್ನು ಕೆಡಿಸಿದೆ ಬುದ್ಧಿಯಲ್ಲಿ ನಿಲಿಸಿದೆ
ನಿದ್ರಾಹಾರಂಗಳನು ಯದ್ವತದ್ವ ಮಾಡಿದೆ ೧

ಸಿಟ್ಟು ಕೋಪವ ಬಿಡಿಸಿದೆ ನೀ ಹುಟ್ಟುವೊಂದನೆ ಕೆಡಿಸಿದೆ
ಅಷ್ಟಮದಂಗಳನು ಸುಟ್ಟು ಭಸ್ಮವ ಮಾಡಿದೆ ೨

ಆರು ಅಂಗನೆಯರನಳಿಸಿದೆ ನೀ ವೀರಶೈವದಿ ನಿಲಿಸಿದೆ
ಆರು ಮೂರು ಮನೆಗಳನು ಬೇರೆ ಸೂರೆಗಳ ಮಾಡಿದೆ ೩

ಹೆಂಡರುಮಕ್ಕಳ ಬಿಡಿಸಿದೆ ಅಖಂಡದಲಿ ನಿಲಿಸಿದೆ
ಚಂಡಿಕಾಗ್ರಂಗಳನು ಚರಿಸಿ ಸಂಹರ ಮಾಡಿದೆ ೪

ಬೊಮ್ಮಬಳಗವ ಬಿಡಿಸಿದೆ ಭೂಮಂಡಲದಲಿ ನಿಲಿಸಿದೆ ತಂದೆ
ಇಮ್ಮಡಿ ಕರಿಬಸವೇಶನ ಪಾದದಲಿ ನಿಲಿಸಿದೆ ೫

೯೯

ಎಂಥ ಕನಸ ಕಂಡೆನೆ ಕೇಳೆಲೆ ಸಖಿ ಎಂಥ ಕನಸ ಕಂಡೆನೆ
ಕುಂತಣದೇಶದಿ ಕುರುಕ್ಷೇತ್ರದೊಳಗೊಬ್ಬ ನಿಂತಂದಗಾಯಿತಲ್ಲೆ ॥ ಪಲ್ಲ

ಕಪ್ಪೆ ಗೋಚರಿಸಲಾಗಿ ಅಪ್ಪ ನೀ ಕೇಳೆ ಘಟಸರ್ಪ ಹೆಡೆಯೆತ್ತಲು
ಮುಪ್ಪುರವ ಗೆದ್ದು ಮೂರು ರತ್ನವ ನುಂಗಿ ಮಿಗಿಲು ಹಣ್ಣನೆ ಕಚ್ಚಿತು ೧

ಚಪ್ಪರಮಾಲೆಯಲ್ಲಿ ಬಪ್ಪು ಸಾದ....ದ ಕೋಣನ ಕಂಡೆ
ಒಪ್ಪುವ ಕಮಲಪಾತ್ರೆಯಿದ್ದು ಗೊರವತಿ ಒಡಲುಂಬುದ ಕಂಡೆನೆ ೨

ಅಸವಲ್ಲದಾನೆ ನೂಕಿ ಮೇಲ್ಮದವೇರೊಂದೋಣಿ ಬರುತಿರಲು
ಹಸುಳೆ ಒರ್ವಳು ಕಂಡು ಸೊಂಡಿಲ ಪಿಡಿಯಲು ...... ೩

## ಕೂಡಲ ಚೆನ್ನಸಂಗಮ ಅಂಕಿತದ ಸ್ವರವಚನಗಳು

೧೦೦

ರಾಗ : ಶಂಕರಾಭರಣ

ಜೋ ಜೋ ಜೋ ಎನ್ನ ಹರನೆ
ಜೋ ಜೋ ಜೋ ಎನ್ನ ಪರಮ
ಜೋ ಜೋ ಜೋ ಎನ್ನ ಸತ್ಯರ ಸಂಗ
ಜೋ ಜೋ ಜೋ ಶ್ರೀ ಗುರುಲಿಂಗ ಜೋ ಜೋ ॥ ಪಲ್ಲ

ಪೃಥ್ವಿಯೆಂಬ ತೊಟ್ಟಿಲೊಳಗೆ ಸುಜ್ಞಾನದ ಅರಿವೆ
ಹಾಸಿ ಸೂನುಮೆರಡು ಪವನ ನೇಣ ಮಾಡಿ
ಶ್ರುತಿಯೆರಡರೊಳು ಪಂಚ..........ವ ಕೇಳಿ ೧

ಗುದವ ಬಿಗಿದಗ್ನಿಯ ಜ್ವಾಲೆ ಘನವಾಗಿ
ಮುದುಡಿಕೊಂಡಿಹ ಸರ್ಪನ ಹೆಡೆಯೆತ್ತುತ
ಗದಗದಿಸುವ ಪವನ ಗ್ರಂಥಿಯನೊಡೆದು ಪಶ್ಚಿಮದ
ಕದವ ತೆಗೆದೊಳಗಣ ಜ್ಯೋತಿಯನು ನೋಡಿ ೨

ಅಂಬೆಗಾಲಿಕ್ಕುತ ಶಿಶುವಂಬರವ ನೋಡಿ
ತುಂಬಿ ನಿತ್ರಾಣದೊಳಗಲ್ಲಿ ನಿಂದು
ಕಂಬವ ಪಿಡಿದು ಮುಂದಣ ಬಾಗಿಲ ದಾಂಟಿ ನೀಂ
ಕುಂಭಿನಿ ನೊರೆವಾಲನುಂಬುವ ಶಿಶುವೆ ಜೋ ಜೋ ೩

ಓಂಕಾರದ ಹಂಸೆ ಊರ್ಧ್ವಕ್ಕೆ ಅಡರಿ ಲಿಂಗದೊಳಗೆ
ಪೊಕ್ಕು ಅವಿರಳವಾಗಿ ಸಾಸಿರದಳದಮೃತವ
ಮಿಗಿಲುಂಡು ಸುಖಿಯಾಗಿ ನೀ ಬಾಲಬ್ರಹ್ಮದ
ಲಿಪಿಯನೋದುವ ಶಿಶುವೆ ಜೋ ಜೋ ೪

ಸೋಮಸೂರ್ಯರ ನಾಳದೊಳು ನಿಂದು
ತೋರುವ ಸುಷುಮ್ನದ ಪ್ರಭೆಯು
ಸೀಮೆಯ ದಾಂಟಿ ಸೋಮೇಶನ ಕೂಡಿ ನಿ
ಸ್ಸೀಮ ಕೂಡಲ ಚೆನ್ನಸಂಗಯ್ಯ ಶಿಶುವೆ ಜೋ ಜೋ ೫

೧೭೧

ಉದಯರಾಗ :

ಬೆಳಗಾಯಿತೇಳು ಸಾಸಿರದಳದ ಮಧ್ಯದಲಿ
ಬೆಳಗು ಪಸರಿಸಿ ಹೊಳೆವ ಥಳಥಳಿಸುವ ಪ್ರಭೆಯು
ಬೆಳಗು ಬೀರಿತು ಪರಂಜ್ಯೋತಿ ಉದ್ಭವಿಸಿ ಮಹಬೆಳಗಿನೊಳು ಬೆಳಗಾಯಿತು ॥ ಪಲ್ಲ

ಮೇರುಗಿರಿಪರ್ವತವನೋರಂತೆ ಬಲಗೊಂಡು
ಸೂರಿಜನು ಸುತ್ತುತಿಹನಾತಂಗೆ ಅದು ಸಹಜ
ಧಾರಿಣಿಯ ಮನುಜರಾತನ ಕಾಣದುದೆ ಅಸ್ತಮಯವು...
ಮೇರು ಮರೆಯಾಗಿ ತಿರುಗಲು ಸೂರ್ಯ ಜಗಕೆಲ್ಲ
ಕಾರಿರುಳು ಕವಿದು ಕಡುನಿದ್ರೆಯೊಳು ಮೈಮರೆದು
ಗೋರಿಗೊಳಿಸುವ ತ್ರಿವಿಧಾವಸ್ಥೆಯೊಳಗೊಂಡು ಮರೆದು ಮಲಗಿದರೆಲ್ಲರು ೧

ಜಗಕೆ ಜಾಗರವಾಗಿ ಹಗಲಾಗಿ ತೋರುತಿದೆ
ಜಗಕೆ ಜಾಗರವಡಗಿ ಇರುಳಾಗಿ ತೋರುತಿದೆ
ಜಗವು ಹಗಲಿರುಳಿಂದ ಸತ್ತು ಪುಟ್ಟುವದು ಜಾಗ್ರತ್ಸ್ವಪ್ನಸುಷುಪ್ತಿಗಳಿಂ
ಜಗವು ದಿನ ಕಾಲ ಸಂವತ್ಸರಂಗಳ ಮಾಡಿ
ಯುಗ ಜಗವನೆಣಿಸುವರೆ ಅಳೆವ ಕೊಳಗಗಳಾಗಿ
ಹಗಲು ರವಿ ಇರುಳು ಶಶಿ ತೊಳಲುತಿಹುದದರಿಂದ ಹಗಲಿರುಳು ಅವರಿಗಿಲ್ಲ ೨

ಅಷ್ಟದಳದೆಸಳ ತುದಿಯಲಿ ನಡೆವ ಗತಿ ಜಾಗ್ರತ್
ಮೆಟ್ಟಿ ಕರ್ಣಿಕೆಗಾಗಿ ಇಳಿವ ಗತಿ ಅದು ಸ್ವಪ್ನ
ನಟ್ಟನಡು ಮಧ್ಯದಲಿ ಗತಿಯುನಡರುವ ಹಂಸ ಸುಷುಪ್ತಿಕವೆಂದೆನಿಸಿತು
ಮೆಟ್ಟಿ ಜಾಗ್ರತ್ಸ್ವಪ್ನ ಸುಷುಪ್ತಿಗಳನೊಳಗೊಂಡು
ತುಟ್ಟತುದಿಪದಕೈದುವಾ ತುರೀಯಾವಸ್ಥೆಯೊ
ನೆಟ್ಟನೆಯು ಅಧೋಮುಖ ಕಮಲವೆಲ್ಲವು ಊರ್ಧ್ವಮುಖವಾಗಿ ನೋಡುತಿರಲು ೩

ಎಪ್ಪತ್ತು ಎರಡು ಸಾವಿರ ನಾಡಿಯೆಲ್ಲವಕೆ
ಒಪ್ಪುವ ಸುಷುಮ್ನದ ಮುಖನಾಡಿ ತಾನಾಗಿ
ಅಪ್ಪುವದೇ [ಪರ]ಬ್ರಹ್ಮರಂಧ್ರಕ್ಕೆ ನಡೆವ ತಪದಿಂದ ಪ್ರಾಣಾರ್ಥಮಾಗಿ
ತಪ್ಪದುದರಸ್ಥಿತಿಯು ಊರ್ಧ್ವ ಶಿವನಲಿ ಕೂಡಿ
ಅಪ್ಪಿ ಕೇಳುವ ಜೀವನುನ್ನಂತ ಪ್ರಾಣವನು
ಅಪ್ಪಿ ಕಿವಿಗಳ ಕೇಳಿ ಲಾಲಿಸುತ ಜ್ಯೋತಿರ್ಲಿಂಗವ ಕಾಣುತ ೪

ಅಡಿಯ ಮಡದಿುದೊತ್ತಿ ದೃಢವಿಡಿದು ಬಂಧದಿ
ನ್ನಡರಿಸಿದ ನಳಕಳೆಯು ತೇಜಪ್ಪ....
ಅಡಿಯಿಡುವ ಶೂಲಿಯಾ ನಾಭಿಮಂಡಲದಿಂದ ಚಂದ್ರಮಂಡಲವನಡರಿ
ಎಡಬಲನ ತಡೆದು ನಡುಮಧ್ಯಮಾರ್ಗದಿ ನಿಂದು
ಸಡಗರದಿ ಮನ ಪವನ ರವಿ ಶಶಿಯು ಒಡಗೂಡಿ
ಸಮರಸಸಮಾಧಿಯೊಳು ಎಡೆಯಿಡದೆ ನೋಡುತ್ತಿರಲು ೫

ಮನದ ಚಂಚಲವಡಗಿ ಮರುತನುಲ್ಲಾಸದಿಂ
....ವ್ವಲನ ಕಲೆ ಚಂದ್ರ ಕಲೆಗಳ ಕೂಡಿ
ಅನಲ ಕಲೆ ಅಮೃತಕಲೆಗಳನುಂಡು ಕೃಪೆಯುರಿದು ಪರಿಣಾಮಕಲೆದೋರಲು
ಅನಿಮಿಷದೃಷ್ಟಿ ಆನಂದದಿಂ ನೋಡುತ್ತ
ಅನುಭಾವ ವಿರಹ ಸಂಧಾನವನು ಮಾಡುತ್ತ
ಮನಕೆ ಮಂಗಲವಾಗಿ ತೊಲಗುತಿಹ ಪರತತ್ವ ಪರ[ಮ] ಪ್ರಕಾಶದಿಂದ ೬

ನಾದವೇ ಶಬ್ದ ನಿಃಶಬ್ದವೇ [ಪರ]ಬ್ರಹ್ಮ
ನಾದದೊಳಗಣ ಸುನಾದ ಧ್ವನಿಯ
ನಾದವಡಗಲು ತಾ ಪ್ರಜ್ವಲಿಸಿ ಪ್ರಭೆಯಾಗಿ ನಿರುತಮಾಕಾಶದಿಂದ
ನಾದ ಬಿಂದೂ ಕಲಾತೀತದೊಳು ಮೈಮರೆದು
ಭೇದವಿಲ್ಲದೆ ಮಹಾಬೆಳಗಿನೊಳು ಬೆಳಗಾದ
ಆದಿಗುರುವು ಕೂಡಲ ಚೆನ್ನಸಂಗಮನೊಳು ಬೆಳಗು ಪರಿಪೂರ್ಣವಾಯ್ತು ೭

## ಘನಲಿಂಗ ಅಂಕಿತದ ಸ್ವರವಚನ

೧೦೨

ಲಿಂಗವಂತನಾಗಿ ನೀನು ಅಂಗದ ಮೇಲಿಚ್ಛೆಯಾಕೆ
ಲಿಂಗವನ್ನೆ ಕೂಡಿ ನೀನಾ ಲಿಂಗವಾಗದೆ ॥ ಪಲ್ಲ

ಹಲವು ಮಾತನಾಡಲೇಕೆ ಹಲವು ಪದವ ಪಾಡಲೇಕೆ
ಕೆಲವು ನಿಂದೆ ಮಾಡಲೇಕೆ ಕೆಲವು ಮತಗಳ
ಗೆಲುವಿನಿಂದ ನೋಡಲೇಕೆ ಒಲಿದು ಬಂದ ಲಿಂಗವಿರಲು
ಹಲವು ಕಡೆಗೆ ಹರಿದು ನೀನು ಹಲವು ಬಾಳೇತಕ್ಕೆ ೧

ಶೂಲಧರನ ಉಳಿದು ಬಹಳ ಕಾಲ ತಪವ ಮಾಡಲೇಕೆ
ಕಾಲನರಿಯದಿಲ್ಲಿ ತಗುಲಿ ಕಾಲಪಾಶಕೆ
ಕಾಲ ತಗುಲಿಸಿಲ್ಲಿ ಬಹಳ ಕಾಲ ಜಪವ ಮಾಡಲೇಕೆ
ಬಾಲಚಂದ್ರಧರನು ನಿನ್ನ ಮೂಲೆಯಲ್ಲಿರೆ ೨

ಅಂಗದ ಮೇಲಿರಲು ಲಿಂಗಸಂಗವ ಮರೆದು ನೀನು
ಮಂಗನಂತೆ ಕುಣಿದು ಮಣಿದು ಹಿಂಗಲೇತಕ್ಕೆ
ಅಂಗಲಿಂಗಯೇಕವಾದ ಗಂಗೆ ಯಮುನೆ ಸಂಗಮದಲೆ
ಮಂಗಳಾಂಗವಾದಾಗ ಘನಲಿಂಗವೊಪ್ಪಿರೆ ೩

## ರಾಚೋಟಿಸ್ವಾಮಿ ಅಂಕಿತದ ಸ್ವರವಚನ

೧೦೩

ಬ್ರಹ್ಮಾನಂದದ ಮಾರ್ಗವ ತಿಳಿದರೆ ಸುಷ್ಮನೆ ಇರಬೇಕಲಾ
ಹಮ್ಮಿನಿಂದ ಹರಿಬ್ರಹ್ಮರು ಕೆಟ್ಟರು ಇನ್ನಿದು ಪುಸಿಯಲ್ಲೆಲಾ ॥ ಪಲ್ಲ

ಸಪ್ತವ್ಯಸನವೆಂಬೊ ಕುದುರೆ ಈಗ ಕಟ್ಟಿಹಾಕಬೇಕೆಲಾ
ಅಷ್ಟಮದಗಜವೆಂಬೊ ಆನೆಗೆ ಅಂಕುಶ ಹಾಕಿ ನಿಲ್ಲಿಸಬೇಕೆಲಾ
ನಿಷ್ಠೆಯಿಂದ ಷಡ್ವರ್ಗವನ್ನು ಮೆಟ್ಟಿ ನಿಲ್ಲಬೇಕೆಲಾ
ಮತ್ತೆ ಮೂರು ಮೂರ್ತಿಗಳ ಸುಖಯಿಕಕೆ ಸಿಕ್ಕಿಸಿ ಕೆಡಬೇಡೆಲಾ ೧

ಮೇದಿನಿಶಿಖರದ ಮೇಲೆ ಇರುತಿಹ ಚಂದ್ರಜ್ಯೋತಿ ನೋಡೆಲಾ
ಆಲೆಯುತ ಬೆಳಕಾಗಿಯಿರುವುದು ಅಷ್ಟದಿಕ್ಕಿನೊಳಗೆಲಾ
ಕೀಲಿಸಿ ಬಿಗಿದ ಕುಂಡಲಿಸರ್ಪನ ಮೇಲಕೆ ನೀಯೆತ್ತಲಾ
ಮೂಲಾಧಾರವ ಬಲಿದು ವೃಕ್ಕಿನ ಠಾವಿಲಿ ನಿಲಬೇಕೆಲಾ ೨

ಕಾಣಬಾರದ ಕಣ್ಣಿನೊಳಗಣ ಮಾಣಿಕಜ್ಯೋತಿ ನೋಡೆಲಾ
ಜ್ಞಾನಮಾರ್ಗದಿಂದೊಳಯಿಕೆ ಪೊಕ್ಕು ಜ್ಯೋತಿಯ ಒಡಗೂಡೆಲಾ
ಕಾಣದೆ ಅಜ ಹರಿ ಸುರ ಮುನಿಗಳಿಗದು ಕಾಣದಂತಾದೆಲಾ
ಪ್ರಾಣಲಿಂಗನ ನೆಲೆಯನು ತಿಳಿದರೆ ನೀನೆ ಶಿವ ನೋಡೆಲಾ ೩

ಮಂಗಳ ಮಾರುತ ಯೋಗದ ಸಾಧನೆ ಚಂದದಿಂದಲೆ ಮಾಡೆಲಾ
ಚಂದ್ರ ಸೂರ್ಯರನು ಒಂದೇ ಮಾರ್ಗದಿ ಆನಂದದಿಂದಲೆ ನಡೆಸೆಲಾ
ಮಂದಗಮನೆಯರ ವ್ಯಾಮೋಹಕೆ ನೀನು ಸಿಕ್ಕಿಸಿ ಕೆಡಬೇಡೆಲಾ
ಹಿಂದಣ ಮುಂದಣ ಬೇರನು ಕಿತ್ತು ಭವಬಂಧವ ಪರಿಹರಿಸೆಲಾ ೪

ಭಕ್ತಿ ಜ್ಞಾನ ವೈರಾಗ್ಯದ ಮಾರ್ಗವಿರಕ್ತಿಯಿಂದ ತಿಳಿಯದಾ
ಸತ್ಯಜ್ಞಾನ ಜಪವು ಮನವು ನವ ಆರ್ತಿಯಿಂದ ನಡೆಸೆಲಾ
ಭಕ್ತಿಯಿಂದ ಗುರುಮಂತ್ರವನ್ನು ನಿತ್ಯದಿಂದಲೆ ಜಪಿಸೆಲಾ
ಕರ್ತುವ ಅಲ್ಲಮ ರಾಜಕೋಟಿಸ್ವಾಮಿಯ ಭೃತ್ಯನಾಗಬೇಕೆಲಾ ೫

## ಗುರುಸಿದ್ಧ ಅಂಕಿತದ ಸ್ವರವಚನ

೧೦೪

ನಿಲ್ಲದಾಡಿತು ಉಯ್ಯಾಲೆ ನಾಮರೂ
ಪಿಲ್ಲದಿಹ ನಿರ್ಮಾಯಲೊಳು ॥ ಪಲ್ಲ

ಶಶಿರವಿಗಳೆರಡು ಕಂಬ ಮ[ಧ್ಯ] ದೊ
ಳೆಸೆವ ಗಗನವೆ ಮಂಟಪ
ದಶವಾಯು ಮಣಿಸರ ಫಣಿ ಪೃಥ್ವೀಮಣಿ
ಅಸಮಸಂಯೋಗವಿಡಿದು ೧

ನಿಗಮ ಪೌರಾಣಶಾಸ್ತ್ರ ಆಗಮದ
ಜಗಗಳುಪೆ ಮಿಗೆ ನಿಲುಕ....
ಹಗಲಿರುಳು ಹಂಗಿಲ್ಲದ ಆನಂದ
ಸಗುಣ ನಿರ್ಗುಣದೊಳೊಲಿದು ೨

ಉತ್ಪತ್ತಿ ಸ್ಥಿತಿ ಲಯಗಳ ಕಲ್ಪಿತದ
ಸತ್ವರಜತಮದೊಳಿಟ್ಟು
ಉತ್ಸವ ನಿಷ್ಪದ ತೊ....
ತ್ರಿಪುಟಿಯಿಂದತ್ತ ತತ್ವಾದಿ ಸ್ವರದಿ ೩

ಮಂತ್ರ ಹಟ ಲಯ ಯೋಗದಾ ಗಜಬಜ
....ಗಳ ಮೆಟ್ಟಿ ನಿಂದು
ಅಂತ್ಯ ಮಧ್ಯ ವಿರಹಿತ ಅವಿರಳ
ಜಂತ್ರ ಸೂತ್ರಗಳ ಬಲಿದು ೪

ಚತುರ್ವಿಧದ ಮುಕ್ತಿಯೆಂಬ ವಾಕ್ಯವನು
ಅತಿಮಾಡಿ ಕಳೆದು ಬಿಸುಟು
ಗತಿಯೆನಗೆ ತಾನೆಯೆನಿಪ ಓಂಕಾರ
ಪ್ರಥಮ ಪ್ರಣಮನ ಪ್ರಭೆಯೊಳು ೫

ಷಡುಶಕ್ತಿ ಷಡುವರ್ಣದ ಷಡುಚಕ್ರ
ಷಡುದರುಶನಾದಿಗಳನು
ಬಿಡದೇಕನಿಷ್ಠೆಯಿಂದಾ ತೂಗುತಿಹ
ನುಡಿಗಗೋಚರದೊಳಿಡಿದು ೬

ಅರಿವು ಮರಹಂಗಳ ಜರೆದು ತೂಗುತಿಹ
ಗುರುಸಿದ್ಧಪಾದವಿಡಿದು
ಸ್ಥಿರವಾಗಿ ಮೂರ್ತಿ [ತಾ] ಚರಿಸಿದ
ಚ್ಚರಿಮಹಾತ್ಮದ ಉಯ್ಯಾಲೆ ೭

## ಅಮ್ಮವ್ವೆ ಸ್ವರವಚನ

೧೦೫

ಕರುಣಿಸಯ್ಯ ಎನ್ನ ಕರಸ್ಥಲದ ಶಾಂತಯ್ಯ
ಕರುಣಿ ನೀನಾರ ಕಂದನೆಂದು ಕರುಣಿಸಯ್ಯ ॥ ಪಲ್ಲ

ಹುಟ್ಟು ಹೊಂದಿಲ್ಲದಾ ಪುಟ್ಟುಗುಡುಪ ಕೆಟ್ಟು ಬಂದು
ದಿಟ್ಟ ನೀನಾರ ಕಂದನಯ್ಯ ಅಮ್ಮವ್ವೆ ತಾನು
ಮುಟ್ಟಿ ಮಾಡುತ ಮನವ ನೀಡುತಲಿ.... ೧

ಪಿಟ್ಟವ್ವೆ ದೋಸೆಹಿಟ್ಟಿಗಾಗಿ ಬಿಟ್ಟಿಹೊತ್ತು
ಪಟ್ಟೆಗಟ್ಟಿ ಜಡೆಯಾದವೆಂದು ಕರುಣಿಸಯ್ಯ
ಪಟ್ಟೆಗಟ್ಟಿ ಜಡೆಯಾದವೆಂದು ಅಮ್ಮವ್ವೆ ತಾನು
ಮುಟ್ಟಿ ಮಜ್ಜನವ ನೀಡುತಲಿ ೨

ಕಾಸಿಭೋಗತೋಟಕೆ ಹೋಗಿ ಬರುತ ಅಮ್ಮವ್ವ ತಾನು
ದೇಶ ವೇಸಿ ಕೂಸುಗಳ ಕಂಡಳಾಗ
ವೇಸಿ ಕೂಸುಗಳ ಕಂಡಳಾಗ ಅಮ್ಮವ್ವ ತಾನು
ದೇಶದ ಕೂಸುಗಳಲ್ಲವೆಂದು ಕರುಣಿಸಯ್ಯ ೩

ಅಪ್ಪ ಬಾರೆ ಅಮ್ಮಪ್ಪ ಬಾರೆ ಬಾರೆಯೆಂದು
ಉಮ್ಮಾಯದಿಂದ ನಲಿದಾಡುತ [ಸಲಿ]ಸಯ್ಯ ೪

ಕಗ್ಗಲ್ಲಿಗೌಡನ ಮನೆಯು ಕರುವ ಕಾದು ಪಾದಪೆಲ್ಲ
ನೆಗ್ಗಿಲಮುಳ್ಳು ಮುರಿದಪೆಂದು ಕರುಣಿಸಯ್ಯ
ನೆಗ್ಗಿಲ ಮುಳ್ಳು ಮುರಿದ ಅಮ್ಮಪ್ಪ ತಾನು
ಅಗ್ಗಳದ ಹಾವುಗೆಯನಿತ್ತಳಾಗ ೫

## ನಿರಂಜನಸಿದ್ಧ ಅಂಕಿತದ ಸ್ವರವಚನಗಳು

೧೦೭

ತೊಳ[ಲ]ದಿರು ಕಂಡ ಕಡೆಗೆ ಚಿದ್ರೂಪ
ದೊಳಗೆ ನೀನಿಂತು ಸುಖಿಸಾ ಮನವೆ ॥ ಪಲ್ಲ

ಲಿಪಿಯಾಳಕಿಳಿವ ಚಿಂತಿಸಾ ಕೊನೆಕೊನೆಗೆ
ಕಪಿಯಂತೆ ನೆಗೆದಾಡದೆ ಮನವೆ
ಗುಪತದೊಳರಿದಾತ್ಮನ ಧ್ಯಾನಿಸಲು
ಅಪರಿಮಿತ ಸುಖವ ಸುಖಿಸಾ ಮನವೆ ೧

ನಾಗ ನರ ಸುರಲೋಕವ ನೆನೆನೆನೆದು
ಕಾಗೆಯಂತೆಡೆಯಾಡದೆ ಮನವೆ
ರಾಗ[ದ್ವೇ]ಷವ ತೊಲಗಿಸ ಪರಮಶಿವ
ಯೋಗದೊಳು ನಿಂತು ಸುಖಿಸಾ ಮನವೆ ೨

ಪರಿಗಿದ ಸ್ಮೃತಿಸದಿರ ಸಿದ್ಧರತ್ನ
ಪರಮತತ್ವದ ತಿರುಳಿದು ಮನವೆ
ಗುರು ನಿರಂಜನಸಿದ್ಧನ ಧ್ಯಾನಿಸಲು
ಸಿರಿಯಹುದು ಮುಕ್ತಿಯಹುದು ೩

೧೦೮

ಕುಪ್ಪಸದಯ್ಯ ನೀ ಬಾರೈ ನಿಜ
ತಪ್ಪದುಸುರು ನಿನ್ನ ವಶವಯ್ಯ ॥ ಪಲ್ಲ

ಗಗನದಂಥ ದಿಗಧಿಕರಯ್ಯ ಪೊಸ
ತೊಗ ಕುಪ್ಪಸದಯ್ಯ ಹಳೆ ಅಯ್ಯಯ್ಯ
ಹೊಗರುಳ್ಳದೊಂದು ಹೊಂಬಣ್ಣದಯ್ಯ ಮೈ
ಪೊಗುತ ಹೊರಡುತಿಂಬ ಹುಚ್ಚಯ್ಯ ೧

ಸಂತೆಯೊಳಗೆ ಸಂಧಿಸಿದಯ್ಯ ಕಾಯ
ಕಾಂತೆಯ ಬಿಸುಟು ಕಾರಣದಯ್ಯವಡು
ಪಂತಾಗಳುಳ್ಳವರಯ್ಯ
ಕಿತಾಣಿರೂಪಿನಸೊಬಗ್ಯ ೨

ಅಂಜಿಕೆ ಬಿಟ್ಟೋಡದಿರಯ್ಯ ಜೀವ
ಜಂಜಡಕೆ ಸಿಕ್ಕದಿರಯ್ಯ
ರಂಜಿಸಿ ನೀಯೆನ್ನ ನೋಡೈ ನಿ
ರಂಜನಸಿದ್ಧ ನಿತ್ಯನಯ್ಯ ೩

೧೦೮

ಗುಮ್ಮ ಬಂದನು ನೋಡು ಕೋಗಿಲೆ ಹೋಗಿ
ದಮ್ಮಯ್ಯ ಕರೆ ಮುದ್ದು ಕೋಗಿಲೆ ॥ ಪಲ್ಲ

ಕಾಯದ ಮರನೇರಿ ಕೋಗಿಲೆ ವಿ
ಡಾಯಗಾರನ ಕೊಂದೆ ಕೋಗಿಲೆ
ಮಾಯರಾಜ್ಯವ ಪೊಕ್ಕು ಕೋಗಿಲೆ ಭಿನ್ನ
ಬೀಯವ ಕೆಡಿಸಿದ ಕೋಗಿಲೆ ೧

ಕಳಸ ಮೂರನೆ ಪೊತ್ತು ಕೋಗಿಲೆ ಚೆಲ್ವ
ನಳಿನಾಕ್ಷಿಯೊಡಗೊಂಡು ಕೋಗಿಲೆ
ಒಳದುರ್ಗ ಸಾಧಿಸಿ ಕೋಗಿಲೆ ಗುಮ್ಮ
ಬಳಲಿ ಬಂದನು ನೋಡು ಕೋಗಿಲೆ ೨

ಮೂರು ಸುತ್ತಿನ ಕೋಟೆ ಕೋಗಿಲೆ ಮೂವ
ತ್ತಾರು ಹೆಬ್ಬಾಗಿಲು ಕೋಗಿಲೆ
ಕೇರಿಯೊಳಗೆ ಪೊಕ್ಕ ಕೋಗಿಲೆ ಸುಟ್ಟ
ಧೀರ ಗುಮ್ಮನು ಬಂದ ಕೋಗಿಲೆ ೩

ಹತ್ತಿದ ಗಜವೆಂಟು ಕೋಗಿಲೆ ಆರು
ಸುತ್ತಿನ ಪುರದೊಳು ಕೋಗಿಲೆ
ಮುತ್ತಿಗೆ ಸಾಧಿಸಿ ಕೋಗಿಲೆ ನಿಜ
ವೆತ್ತಿ ಗುಮ್ಮನು ಬಂದ ಕೋಗಿಲೆ ೪

ಚಂದ್ರನ ಮಡದಿಯ ಕೋಗಿಲೆ
ಕೊಂದು ಗದ್ದುಗೆಯನು ಹೊತ್ತು ಕೋಗಿಲೆ
ಮುದ್ದುನುಡಿಗಳಿಂದ ಕೋಗಿಲೆ
ಗುಮ್ಮನಿದ್ದ ಬಳಿಗೆ ಪೋಗು ಕೋಗಿಲೆ ೫

ನಾಗಲೋಕದ ಕೋಟೆ ಕೋಗಿಲೆ ನಾಲ್ಕು
ಬಾಗಿಲ ದಿಡ್ಡಿಯು ಕೋಗಿಲೆ
ಬೇಗ ಹರಿಯು ಹೊಯ್ದು ಕೋಗಿಲೆ ಪೊಕ್ಕ
ಯೋಗಿ ಗುಮ್ಮನು ಬಂದ ಕೋಗಿಲೆ ೭

ಕೀರ್ತಿ ಪಾಮಾಂಗದ ಕೋಗಿಲೆ ತಾಸು
ಪೂರ್ತಿ ವಂದನು ಕೋಗಿಲೆ
ಪಾರ್ತಿಸಿದನುಪಮ ಕೋಗಿಲೆ ಜ್ಞಾನ
ಮೂರ್ತಿ ಗುಮ್ಮನು ಬಂದು ಕೂಡಿದ ಕೋಗಿಲೆ ೭

## ಸುಜ್ಞಾನಲಿಂಗ ಅಂಕಿತದ ಸ್ವರವಚನ

೧೧೯

ರಾಗ : ಸೌರಾಷ್ಟ್ರ

ಸಾಧಿಸಲಳವಲ್ಲ ಸಕಲ ಸಾರಣೆ ಜನ್ಮ ಚಂದಮಾಮ ಅ
ನಾದಿಕಾಲದೊಳಾದ ಅಂತರಂಗದ ದುರ್ಗ ಚಂದಮಾಮ ॥ ಪಲ್ಲ

ನಾಲ್ವತ್ತುಯೆಂಟು ಸುತ್ತಿನ ಕೋಟೆಯೂಳ್ವೇರಿ ಚಂದಮಾಮ
ನೋಡಲಾಲಸ್ಯವೆಂಬ ಕೊತ್ತಳವರುವತ್ತಾರು ಚಂದಮಾಮ
ಜ್ವಾಲೆಗಾರರು ಒಂದು ಸಾವಿರ ತೆನೆಗಳು ಚಂದಮಾಮ
ಮೇಲೆ ಕಾಲ ಕರ್ಮಾದಿಗಳೆಂಬ ಪಾರಿಯು ಮುಂದಿ ಚಂದಮಾಮ ೧

ಧೈರ್ಯವಂತರಸನೊಡ್ಡೋಲಗದೊತ್ತಿಲಿ ಚಂದಮಾಮ
ನಿಂದ ಕೈಜೀತಕಾರರೇಳ್ನೂರೆಪ್ಪತ್ತೈದು ಚಂದಮಾಮ
ಸುಯಿವುತ್ತ ಹಮ್ಮಿನಾಳ್ಗಳ ಲೆಕ್ಕ ಗಡಿಯಿಲ್ಲ ಚಂದಮಾಮ
ಅಲ್ಲಿ ಮೈಮರೆದು ಲಿಂಗ ಕೋಟೆಗಳು ನಾಲ್ವತ್ತೈದು ಚಂದಮಾಮ ೨

ಮದದಾನೆ ಎಂಟು ಮಾವತಿಗರು ಹದಿನಾರು ಚಂದಮಾಮ
ಅಲ್ಲಿ ಕದುಬಿ ಬೊಬ್ಬಿರಿವ ವಾಜಿಗಳ ಸಾಲಿನ ಮೊತ್ತ ಚಂದಮಾಮ
ಕದನಗಾರರ ರಚ್ಚೆ ಜಗಳದಬ್ಬರದಲ್ಲಿ ಚಂದಮಾಮ
ಬಂದು ಅಧಮರ ಗೋಷ್ಠಿ ಮಾಡುತಲಿಪ್ಪರೈವರು ಚಂದಮಾಮ ೪

ಮಚ್ಚರಿಸುತಲಿಪ್ಪ ಮಂತ್ರಿಮನ್ನೆಯರಾರು ಚಂದಮಾಮ
ಮುಟ್ಟಿ ಕಚ್ಚುವ ಶುನಿಯಂಗದ ಬೇಂಟೆಕಾರರು ಚಂದಮಾಮ
ನಿಚ್ಚ ಸುಜ್ಞಾನಲಿಂಗನ ನಿಜಶರಣರು ಚಂದಮಾಮ
ಬಲು ಆಶ್ಚರ್ಯವಾದ ದುರ್ಗವ ಸೂರೆಗೊಂಡರು ಚಂದಮಾಮ ೫

೧೧೦

ರಾಗ : ಆಹಿರಿ

ಆಡದಿರು ಅಲ್ಪಜಾತಿಯೊಳು ಮಾತ
ನಾಡು ನಿನಗೆ ಎಣೆಯಾದ ಮಾನ್ಯರೊಳು ಮನವೆ ॥ ಪಲ್ಲ

ಗುರುಲಿಂಗ ಜಂಗಮುವನರಿಯದಜ್ಞಾನಿಗಳ
ಪರಸತಿಯರ ಭ್ರಮಿಸುವರ ಹಿರಿದು ಕಿರಿದುಯೆಂದು
ಅರಿಯದೆ ತಪ್ಪಿ ನುಡಿವ ವರ ಬರಿಯ ಮಾತಿನ ಡಂಭಕಾರರನ್ನು
ನೆರೆ ಬದುಕುತಿರಲು ನೆನೆದು ಕಮುಬುತಿಹರ
ಪೆರೆಯ ಸೂಡಿದನ ಭಕ್ತರನು ನಿಂದಿಸುವರ
ಸುರೆಯ ಕುಡಿದಂತೆ ಸುಯಿವವರು ನರಗುರಿಗಳೊಡನಾಡಿ ನಗೇಡಾಗುವದು ಸಲ್ಲ ೧

ನೀತಿಶಾಸ್ತ್ರವನೋದುತಿರಲು ಕೇಳದೆ ಇಹರ
ಜಾತಿ ವಿಜಾತಿಯೆನ್ನದೆ ಕೆಟ್ಟು ನುಡಿವವರ
ಮಾತಿನಲಿ ಪ್ರೀತಿ ಮನದಲಿ ವಿಷವುಳ್ಳವರ ಕೋತಿಯಂದದಿ ಅಣಕಿಸುವವರ
ಕಾತರಿಸಿ ಕಾಡಹೊಲತಿಗೆ ಮನವನೆಳಸುವರ
ತೀರ್ಥಪ್ರಸಾದವೆಂದರಿಯದಿಹ ದ್ರೋಹಿಗಳ
ಆತ್ಮದಲಿ ಶುದ್ಧ ಎಳ್ಳನಿತಿಲ್ಲದವರುಗಳ ಪ್ರೀತಿಯನರಿಯದ ಪಿಸುಣರನು ೨

ಅಂತು ಭ್ರಾಂತು ಜೀವರ ಕೂಡಿ ಬೆರೆಯದಿರು ಮಾನವ
ಕಂಡು ಮುಖದ ಮುಂದೆ ಕಾಣದೆ ಒಂದನಾಡುವರ
ಉಂಡ ಮನೆಗೆರಡನೆಣಿಸುವ ಪಾಪಿಕರ್ಮಿಗಳ
ಕೊಂಡಾಡಿದರ್ಗೆ ಕೊಡದಿಹ ಲೋಭಿತನದವರ ಕೊಂಡೆಗಾರರ ಕೋಪದವರ ೩

ಹೆಂಡತಿಯ ಕೆಡಗುನುಡಿಗಳಿಗೆ ಕಿವಿಯಾಂತಿಹರ
ಬಂಡುಮಾತನೆ ನುಡಿವ ಬಹುದೂಷಕದವರ
ಕಂಡುದನು ಕದ್ದು ಕಡೆಗೋಡಿ ಶರಿರವ ಹೊರೆದ
ಲಂಡರಿವರೆಲ್ಲರನು ಹಳಿದು ಉದ್ದಂಡ ಸುಜ್ಞಾನಲಿಂಗವ ನಿತ್ಯಭಜಿಸು ೪

೧೧೧

ಎನ್ನ ಗುಣವ ನೋಡಬೇಡ ಲಿಂಗಯ್ಯ ನಾನು
ನಿನ್ನ ನಂಬಿದವನಯ್ಯ ಲಿಂಗಯ್ಯ ॥ ಪಲ್ಲ

ಹಿಂದೆ ಬಾಳಭವಗಳಲ್ಲಿ ಲಿಂಗಯ್ಯ ನಾ
ಬಂದು ಬಂದು ಬಳಲಿದೆನು ಲಿಂಗಯ್ಯ
ಮುಂದೆ ತೊಳಲಿ ಬಳಲದಂತೆ ಲಿಂಗಯ್ಯ ನಿಮ್ಮ
ಕಂದನೆಂದು ರಕ್ಷಿಸಯ್ಯ ಲಿಂಗಯ್ಯ ೧

ಮರ್ತ್ಯಲೋಕದೊಳಗೆ ಬಂದು ಲಿಂಗಯ್ಯ ಕಾಯ
ವ್ಯರ್ಥವಾಗಿ ಪೋಗುತಿದೆ ಲಿಂಗಯ್ಯ
ಸತ್ತು ಹುಟ್ಟುವದು ಬಿಡಿಸು ಲಿಂಗಯ್ಯ ನಿಜ
ನಿತ್ಯನೆಂದೆನಿಸೊ ಶಿವನೆ ಲಿಂಗಯ್ಯ ೨

ಮೂರು ಮಲಗಳಾರು ವರ್ಗ ಲಿಂಗಯ್ಯ ಎನ್ನ
ಗಾರು ಮಾಡಿ ಕಾಡುತವೆ ಲಿಂಗಯ್ಯ
ಆರೆನಾರೆ ಒಲಿಸಿದೆನು ಲಿಂಗಯ್ಯಯೆನ್ನ
ಮಾರುಗೊಡದೆ ಮನ್ನಿಸಯ್ಯ ಲಿಂಗಯ್ಯ ೩

ಗಿಳಿಯು ಓದಿ ತನ್ನ ಮಲವ ಲಿಂಗಯ್ಯ ತಿಂದು
ನಲಿನಲಿದಾಡುವಂತೆ ಲಿಂಗಯ್ಯ
ಹಲವನೋದಿಯೆನ್ನ ಮನವು ಲಿಂಗಯ್ಯ
............ಬಿಡದು ಶಿವನೆ ಲಿಂಗಯ್ಯ ೪

ಎಷ್ಟು ಪರಿಯಲಿ ತನುವ ಹೊರೆಯಲಾರೆ ಲಿಂಗಯ್ಯ ಕಾಯ
ನಷ್ಟವಾಗಿ ಪೋಗುತಿದೆ ಲಿಂಗಯ್ಯ
ಕೆಟ್ಟವರೆಂದೆಣಿಸಬೇಡ ಲಿಂಗಯ್ಯ ಸ್ವಾಮಿ
ಪಟ್ಟದ ಕೈಲಾಸಪ್ರಭುವೆ ಲಿಂಗಯ್ಯ ೫

## ಗುರುಬಸವ ಅಂಕಿತದ ಸ್ವರವಚನ

೧೧೨

ಮುಂದೆ ಹೊಗಳಿ ಹಿಂದೆ ಹಳಿವಧಃಕರ್ಮಿಜೀವರುಗಳ
ಸಂದ ಶರಣಸೌಖ್ಯದಿರವ ಮಂದಭಾಗ್ಯರರಿವರೆ ॥ ಪಲ್ಲ

ಗಂಧ ಬಿದಿರು ಆದಿಯಲ್ಲಿ ಒಂದು ತಾವಿನಲ್ಲಿ ಜನಿಸಿ
ಚಂದನ ಸುಗಂಧ ನಿಂದು ಲಿಂಗಮನವ ಸ
ಮ್ಮಂದಿಸಿದ ಶರಣಯಿರವ
ಕುಂದು ಪೆಚ್ಚ ಯೋನಿಮುಖದಿ ಬಂದ ಮನುಜರರಿವರೆ ೧

ಕ್ಷೀರ ನೀರನೊಂದುಗೂಡಿ ಬೇರು ಮಾಳ್ಪ ಹಂಸನಿರವ ನಾರಿಯಲಿ ಜನಿಸಿದ
ಕ್ಷೀರವು ತನ್ನಬಲ್ಲುದೆ
ವೀರಶೈವ ಮಾರ್ಗದಲ್ಲಿ ಧೀರನಾದ ಶರಣನಿರವ
ಬಾರಿಪಡವರ್ಗವ ಬಹು ಬಿತ್ತಿ ಮನುಜರರಿವರೆ ೨

ಅಣ್ಣೆವಾಲ ರುಚಿಯನು ಬೆಣ್ಣೆಯನು ತಿಳಿವ ತೆರನ
ಉಣ್ಣ ಹೇಳಿ ಕಲಸಿ ಕೊಡುವ ಕರವು ತಾ ಬಲ್ಲುವೆ
ಪುಣ್ಯಪವರಹಿತನಗ್ರಾಣ್ಯನಾದ ಶರಣನಿರವ
ಹೊನ್ನು ಹೆಣ್ಣು ಮಣ್ಣು ತಾ ಚಿವಣ್ಣ ತಾನು ಬಲ್ಲನೆ ೩

ಒಳ್ಳೆಯ ತೇಜಿ ನೃಪನ ಹೊತ್ತು ಪೊಳೆಯ ತಾನು ದಾಂಟುವಂತೆ
ಇಳೆಯ ರಜಕನಿಳೆಯೊಳಿಹ ಪಳೆಯ ಕತ್ತೆ ಬಲ್ಲುದೇ
ಪ್ರಳಯರಹಿತ ಲಿಂಗದಲ್ಲಿ ನಿತ್ಯನಾದ ಶರಣನಿರವ
ಇಳೆಯ ಹಂಗ ಹರಿಯದಿಹ ಕಳಲೆ ಮನುಜರರಿವರೆ ೪

ವರ ಗಜೇಂದ್ರನಿಕ್ಷುದಂಡ ಸುರಸವನ್ನು ಸವಿವವೊಲು
ಹೊರಗಣೆಲೆಯ ಮೆಲುತಲಿಹ ಕುರಿಯು ತಾನು ಬಲ್ಲುದೆ
ಮರಹು ಗರ್ವ ಪರ್ವತಕ್ಕೆ ವಜ್ರವನಿಪ ಗುರುಬಸವನಂಘ್ರಿ
ತೆರನ ತಿಳಿಯಲರಿಯದಿಪ್ಪ ಕೊರತೆ ಮನುಜರರಿವರೆ ೫

೧೧೩

ರಾಗ : ಕಾಂಬೋಧಿ

ಪೇಳಲಳವೇ ನಿಮ್ಮ ಘನವ ಲಿಂಗಯ್ಯ
ಅಭವರಾಣತಿ ಕೊಂಡ ಗತಿಗೆ ಕುಣಿದೊ ಲಿಂಗಯ್ಯನ ॥ ಪಲ್ಲ

ಹೊಟ್ಟೆ ಬಿರಿಯಲುಂಡು ಕುಳಿತೋ ಲಿಂಗಯ್ಯ ಕೆರೆಯ ಕಟ್ಟಿ
ಕಟ್ಟೆಗೆ ಮಣ್ಣನೆ ಹೊಯ್ಯೊ ಲಿಂಗಯ್ಯ
ಪಿಟ್ಟವ್ವೆಯ ಪ್ರೀತಿಗೊಲಿದೊ ಲಿಂಗಯ್ಯ ದೋಸೆ
ಹಿಟ್ಟಿಗೆ ಬಡಂಬಟ್ಟೊ ಲಿಂಗಯ್ಯ ೧

ಪೆಣ್ಣ ಬೇಡಿ ಬಲ್ಲಾಳನ ಲಿಂಗಯ್ಯ ಬಾಲ
ಚಿಣ್ಣನಾಗಿ ಪೊಲೆಯನುಂಡೊ ಲಿಂಗಯ್ಯ
ಪಣ್ಯಸ್ತ್ರೀಯು ಮನೆಗೆ ಹೋಗಿ ಲಿಂಗಯ್ಯ ನಂ
ಬ್ಯಣ್ಣಗೆ ಕುಂಟಣಿಯ ಮಾಡೊ ಲಿಂಗಯ್ಯ ೨

ಬಾಲೆಗೊಲಿದು ಹಾಲ ಸವಿದು ಲಿಂಗಯ್ಯ ತೈ
ತಾಲಿ ದಿಮ್ಮಿಯೆಂದು ಕುಣಿದೊ ಲಿಂಗಯ್ಯ
ಕೋಲ ಪಿಡಿದೊ ಮಾರಣ್ಣಗೆ ಲಿಂಗಯ್ಯ ಇಂದ್ರ
ಕೀಲದಲ್ಲಿ ಬೆನ್ನ ಕೊಟ್ಟೊ ಲಿಂಗಯ್ಯ ೩

ಧೀರ ಶಬ್ದವನ್ನ ಬಿಟ್ಟೊ ಲಿಂಗಯ್ಯ
ನಾರಾಯಣ ಗೋವಿಂದ ಎಂದೊ ಲಿಂಗಯ್ಯ
ನೀರೆ ಕೇಳಿ ಪೊರಯಿಕೆ ಬಂದು ಲಿಂಗಯ್ಯ ಕೈ
ಯಾರ ಮುಟ್ಟಿ ತೋರಿಸಿಕೊಂಡೆ ಲಿಂಗಯ್ಯ ೪

ಧರೆಗೆ ಭಕ್ತರೆಂದು ಸಾರಿ ಲಿಂಗಯ್ಯ ಕನಕ
ಗಿರಿಯಲಿರ್ದು ಬಂದೆ ಧರ್ಮಿ ಲಿಂಗಯ್ಯ
ಶರಭನೊಡೆಯ ಗುರುಬಸವೇಶ ಲಿಂಗಯ್ಯ ನಿನ್ನ
ಕರುಣ ಕೃಪೆಯನಿತ್ತು ಸಲಹೊ ಲಿಂಗಯ್ಯ ೫

## ಕೊಟ್ಟೂರು ಬಸವಲಿಂಗ ಅಂಕಿತ ಸ್ವರವಚನ

೧೧೪

ಎಂತು ತಾಳಬಹುದು ಈ ಊರೊಳು ಹೀಗೆ
ಕಂತುಹರನೆ ಬಸವಲಿಂಗ ಕಡೆಹಾಯಿಸಯ್ಯ ನಮ್ಮ ॥ ಪಲ್ಲ

ಊರು ಕಾಣಬಾರದು ಅನಾಚಾರ ಪೆಗ್ಗಳ
ಬೇರೆ ಒಂಬತ್ತುಬಾಗಿಲು ಬೆಂದ ಕೊಂಪೆಗೆ ಮುರ[ಹರ]
....ದಡಿ ಮೃತವಾಗುತವರೆಲ್ಲ
ದೂರ ವಿಚಾರಿಸುವ ದೊರೆಗಳಿಲ್ಲವಯ್ಯ ೧

ಐವರು ಗೌಡರು ಆರು ಮಂದಿ ದೊರೆಗಳು
ಬೈಪರೆಂಟು ಮಂದಿ ತಳವರರಯ್ಯ
ಕೈಜೀತದ ಹತ್ತಾಳು ಕಾಕುಮಾಡುತಲವರೆ
ಗೆಯಿದುಣ್ಣಲೀಸರು ಆಟ್ಟುಳಿಗನ ಆಯ್ಯ ೨

ಒಡೆಯನೆಂದು ನಾ ನನ್ನ ಬಡತನವ ಬಿನ್ನಯಿಸಿದೆ
ಬಿಡುಬೀಸಾದೆ ಸಲಹಿ ಕಡುಜಾಣನು
ಕೊಟ್ಟೂರ ಬಸವಲಿಂಗನ ಮನೆಯ
ಪಡುತೊತ್ತಿನ ಮಗನು ಒರೆವನೇನ ೩

## ತುರುಗೆರೆಯ ಸಿದ್ಧೇಶ್ವರ ಅಂಕಿತದ ಸ್ವರವಚನ

೧೧೫

ಪರಮಾತ್ಮನ ಲೀಲೆಯನರಿವವನವನು
ಗುರುವರ ಕುಶಲಿಂಗಿತದನುವ ॥ ಪಲ್ಲ

ಸಿಕ್ಕಿದ ಯುಗದಲಿ ಜನ್ಮವ
ಹೊಕ್ಕು ಹೊರಟು ಹೊಂಗುಳಿಗೊಂಬುವ
ಗಕ್ಕನೆ ತೊಟ್ಟೂರ್ಧ್ವವ ಬಿಟ್ಟೋಡುವ
ಹೆಣ್ಣುಮಕ್ಕಳಾಟಿಕೆಯಿದು ನೀ ಕಾವೊ ಗತವ ೧

ಸುತ ಕಾಕುಳಿಶ್ರೋಣಿತ ನರವಿನ ಬಿಗಿ
ವತ ತುಂಬಿದ ತ್ವಚೆಯದತ್ತೆತ್ತಿ
ಶ್ವೇತ ಶುಕ್ಲ ಜಲ ಮಲದೊಳಗಿಹ
ಜಗದ ಮನನಿಲ್ಲೆಯು ನೆಲೆಯೆ ಒಲಿಯೆ ೨

ಯುವತಿ ಜನನಿಯ ಜಠರದಿ ಹಿಂದಣ ಪಾ
ಪವ ನೆನೆದಡಿಗಡಿಗೆ ದಿವವ ಕೆಡಿಸೆಳೆಸುಳಿದಾ
ಡುವ ಕಡಕುಳನಟಶದಿಮಗುವೊರಗುವೊ ೩

ಬಲ್ಲತನದಿ ಬಹುರುಚಿಗಳ ಕಲಿತು
ಕಾಲ ಹನ್ನೆರಡದೊತ್ಸರ ತುಂಬಿ
ಬಾಲನು ಕಾಲನ ಬಾಧೆಗೆ ಸಿಲ್ಕದೆ
ಮೇಲೇರಿ ತಿನುವದು ಗತಿಯೋ ಮತಿಯೋ ೪

ವಾಯೊಳು ಗಜವನು ಕಟ್ಟಿ ಬಿಗಿದು ಕಪಿ
ನಾಯಿ ಕಾಗೆಯ ಸುಟ್ಟು
ನಾಯಿ ಬಡಿದು ಇಂದ್ರಿಯಯೆನ್ನನುಂ ಗಳಹಿ
ನೋಯಿಸುವ ಆತನು ನರನೋ ಸುರನೋ ೫

ನೋಡದ ಕಣ್ಣು ಕಾಡದ ಸರಿಗೆ
ನೀಡೆ ಕರಬೇಡದ ಮುಕ್ತಿ
ಮಡದಿಯು ಕೈಯು ಪಲ ಪಲರಡಿಗೆಯು
ಮಾಡದೆ ಊಟವು ಅರಿವೋ ಮರವೋ ೬

ಹೊನ್ನು ಹೆಣ್ಣು ಮಣ್ಣಿಂದ ಬಾಲೆಯು
ತನ್ನೊಳು ತಾನೆ ತಿಳಿದು ತೊರೆದು
ಕಣ್ಣ ಮುಚ್ಚಿ ತಾ ಮಲದಿ ನೆಲಸಿಹ
ಪರಬ್ರಹ್ಮನೊಳ್ ಮೆರೆವದು ತನುವೋ ಮನವೋ. ೭

ಮುನಿವ ಚೋರರೈವರ ಬಂಧಿಸಲು
ಮನೆಯನೇರಿದ ಮಂಟಪದೊಳಗೆ
ತನುವಿನ ಕದವ ಮುರಿಯಲಾಗದು
ಘನವನಿತೆಯರ ಕೂಟವು ಉರಿಯೊ ಸಿರಿಯೊ ೮

ತುರುಗಳ ತನು ಶಿರವನರಿದು
ನರ ಶರೀರವ ಮರೆದು ಆಕಾಶದೊಳು
ಪರಮಾತ್ಮನ ತುರುಗೆರೆಯ ಸಿದ್ಧೇಶ್ವರನೊಳು
ಸ್ಥಿರವಾಗಿಹುದದು ಘನವೋ ಪ್ರಣವೋ ೯

೧೧೬

ಸ್ಥಿರಹರನಂಘ್ರಿಯ ಭಜಿಸು ಮೂಢ
ಇರಬಾರದಲಾ ಸಂಸಾರ ॥ ಪಲ್ಲ

ಸದಾರೆಯ ತ್ರಿಶಂಕುವಳಿದ ರಾಯತನದಲಿ ಹರಿಶ್ಚಂದ್ರ
ಮೊದಲಾದ ಚಕ್ರವರ್ತಿಗಳಲ್ಲಿ ಧುರದಿ ಧಾರಾ ಮಾರುತ ಜರೆಲಿ
ಶರಧಿಯ ಮಧ್ಯದೊಳಗಿರ್ದ ರಾವಣನಲ್ಲಿ
ಸಿರಿಯುಳ್ಳ ಕೌರವರು ಪಾಂಡವರು ತಾವು ಪುಲಿ
ಸುರರ ಗೆಲಿಯುವಲ್ಲಿ ತಾನೆಲ್ಲಿ ಇದನರಿತು ಅಲೈಸುವದೊಂದು
ಸಂಸಾರಯಿರಬಾರದಲಾ ಶಂಕರ ಶಿರಹರನಂಘ್ರಿಯಂ ಭಜಿಸು ಮೂಢ ೧

ದವತದಿ ಮೊದಲಾದ ಷೋಡಶ ಮಹರಾಯರು ಕಾವುಯೇರಿ
ಅಶಹಯ ಸುರವಿರದಿ ವಿಂತಾಮೂರೆಲ್ಲಿ
ವಸುಮತಿಯು ಹಿರಣ್ಯಾಕ್ಷ ತಾವೆಲ್ಲಿ ವಸುಮತಿಯೊಳಗಿರ್ದ
ಹದಿನಾರುಸಾವಿರವೆಲ್ಲಿ ಪಶುಪತಿಯಯಿತ್ತ ರಣಭಸ್ಮಾಸುರರೆಲ್ಲಿ

ಪಿರಿಯ ಆಯುಷಿಗೆ ಅ[ಭಿ]ಮನ್ಯು ತಾನೆಲ್ಲಿ
ಈ ತೆರದಿ ಧರೆಯ ಆಳಿ ಹೋದರುಯೆಷ್ಟು
ಈ ತೆರದಿ ಸ್ವರ್ಗಕ್ಕೆ ಇಂದ್ರಾದಿಗಳು ಎಷ್ಟು
ಈ ತೆರದಿ ಅವತಾರವೆ ,
ಈ ತೆರದಿ ಯುಗಪ್ರಳಯವಾದವರೆಷ್ಟು ೨

ಈ ತೆರದಿ ಜಗಪ್ರಳಯವಾಗಿ ಹೋದವರೆಷ್ಟು
ಈ ತೆರದಿ ಜಲಪ್ರಳಯವಾಗಿ ಹೋದವರೆಷ್ಟು
ಈ ತೆರದೊಳು ಅವತಾರವೆಷ್ಟು
ಈ ತೆರದಿ ಹತವಾದವರುಯೆಷ್ಟು
ಬಿಡದೆ ಸರಹರನಂಘ್ರಿಯ ಭಜಿಸು
ಮೋಘಯಿರಬಾರದಲಾ ಸಂಸಾರ ೩

## ಗುಹೇಶ್ವರ ಅಂಕಿತದ ಸ್ವರವಚನ

೧೧೭

ಬಯಲ ಬಾವಿಯ ನೀರಿಗೆ ಬಂದಳು ನಾರಿ
ತಾ ಜಾರಿಬಿದ್ದಳು ತನ್ನ ಕೊಡನುಳಿಯಿತ್ತು ನೋಡ ॥ ಪಲ್ಲ

ನೀರಿಲ್ಲದೆ ನೆರಳಿಲ್ಲದೆ ಬೇರಿಲ್ಲದೆ ಸಸಿ ಹುಟ್ಟಿತು
ಹೂವಿಲ್ಲದೆ ಕಾಯಿಲ್ಲದೆ ಸಾಲಕೆ ಬಂದೆ ನೋಡ
ಕಣ್ಣಿಲ್ಲದೆ ಕಾಲಿಲ್ಲದೆ ಕಾಯ್ವರು ನಾಲ್ವರು
ಹಣ್ಣಿಗೆ ಮರುಳಾದವರು ಹದಿನೆಂಟುಲೋಕ ೧

ಕುರುಡ ಕಂಡನು ಹಾವ
ಬರುವ ನಡುಯಿರುಳೊಳು ಮೂಗ ಕೇಳಿದ ಕಾನನಕಿವುಡನ
ಕಿವಿ ಕೇಳಿ ಇರುವೆ ಹಾರಿತು ಗಗನಕೆ
ಮರ ಮುರಿಯಿತು ಕೆಳಯಿಕೆ ಬೆಟ್ಟಕೆ ಬೇಗೆವರಿಯಿತು ಪೇಳ ೨

ಕಂಚಿನ ಕಾರಣೆಯೊಳು ಕಿಂಚಿನ ಕಾರಣೆಗೆಯಿದು
ರಂಚಿಗೆ ಬರುವವಳ ನೋಡನ್ಯರ ಮುಂದೆ
ಪೇಳಲಿನಗಳವಲ್ಲ ಪೇಳುವ ಪುರುಷನೆ ಬಲ್ಲ
ಇವರ ಭೇದವ ನಿಂದ ಗೊಹೇಶ್ವರನೆ ಬಲ್ಲ

# ವೀರಶರಭ ಅಂಕಿತ ಸ್ವರವಚನ

೧೧೮

ಈಗ ಬಂದೆನಯ್ಯ ಸಾರಿ ಈಗ ಬಂದೆನು ॥ ಪಲ್ಲ

ಮೂರು ಮಲವ ಹಾರ ಹೊಡೆದು
ಮಾರಹರನ ಭಜಿಸುವಂಥ
ವೀರಶೈವರಂಘ್ರಿವಿಡಿದು ಬಂದೆನು ೧

ನೆಲೆಗಳಾರು ಮೂರು ವಿಧದ
ಸ್ಥಲದಿ ಲಿಂಗಸ್ಥಾಪ್ಯಕಾಲ
ಹಲವು ಕಡೆಗೆ ಹರಿವ ಮನವ
ನಿಲಿಸಿದವರ ಪಾದವಿಡಿದೆನು ೨

ಗುರುಲಿಂಗ ಜಂಗಮವ
ನೆರೆ ನಂಬಿ ಅರ್ಚಿಸುವರ
ಕರುಣ ಕೃಪೆಯು ಪಡೆದು ವೀರ
ಶರಭನೆಂಬ ನಾಮವಿಡಿದು ಬಂದೆನು ೩

೧೧೯

ಜಯಮಂಗಳಂ ಶುಭಮಂಗಳಂ ॥ ಪಲ್ಲ

ಒಲ್ಲಿದ ನರನೊಡನೆ ಬಿಲ್ಲ ಪೆಟ್ಟಾದಂಗೆ
ಸಲ್ಲಲಿತದಿಂದೊರ್ವ ಶರಣನೊಡನೆ
ಕಲ್ಲಲಿಡಿಸಿಕೊಂಡ ಕಾರುಣ್ಯಸಾಗರಗೆ
ಬಲ್ಲಾಳ ಚೋಳರಿಗೆ ಒಲಿದವಂಗೆ ೨

ಸ್ಮರದಂಡಿಗಳನು ಸುಟ್ಟುರುಹಿದ ದೇವಗೆ
ಕರಿವ್ಯಾಘ್ರದುರುಜ ಕಂಠೀರವಗೆ
ಪುರಮೂರನು ಗೆಲಿದ ಪುಣ್ಯಮೂರುತಿಗೆ
ಅರಿಗಳೆದೆದಲ್ಲಣಗೆ ಪರಮಾತ್ಮಗೆ.... ೩

ಬಾಲೇಂದುಮೌಳಿಗೆ ಪರಮಗುಣಶಾಲಿಗೆ
ಪಾ.... ....... ಶೂಲಕರಗೆ
ಲೀಲೆಯಲಿ ಶರಣರನುಪೊರೆ....ವೆ ಮಹಿಮಗೆ
ಭೂಲೋಕ ಭಕ್ತಜನ ಭೂರಹಿತಗೆ ೪

ದೇವಾದಿದೇವಗೆ ಜೀವನಮುಕ್ತಗೆ
ಪಾವನರೂಪಗೆ ಪರಮಶಿವಂಗೆ
ಭಾವಜಭಸಿತಾಂಗಭಾವಿತಗೆ ಲಾಲಿತಗೆ
ಓವಿ ಶರಣರನ್ನು ಪೊರೆವ ಉಮೆಯರಸಗೆ ೫

೧೨೦

ಶಿವನ ನೆನೆವವ ಅಜ್ಞಾನಿ
ಪಾಪವ ಜಡಿವವ ಸಿಲ್ಕುವನೆ ಸುಜ್ಞಾನಿ ॥ ಪಲ್ಲ

ಮಾತ ಬಲ್ಲಾತನೆ ಮೂಕ ಒಳ್ಳೆ
ನೀತಿಮಾರ್ಗದಲಿರುವೆ ಬಲುಪೋಕ
ಜಾತಿಯ ನುಡಿವನೆ ಕೂಕ ರಣ
ಭೀತಿಗಂಜದೆ ನಿಲುವನೆ ಲಂಡಿಪಾಕ ೧

ಪುಣ್ಯವ ಪಡೆವನೆ ಪಾಪಿ ಎರಡು
ಕಣ್ಣುಳ್ಳ ಚೆಲುವನೆ ಕುರುಡ ಕುರೂಪಿ
ಕಣ್ಣಿಲ್ಲದಿಹನೆ ಸುರೂಪಿ ಬಹು
ತಣ್ಣಗೆ ನುಡಿವನೆ ಹುಚ್ಚು ಮುಂಗೋಪಿ ೨

ಇಲ್ಲವೆಂಬನೆ ಬಲುತ್ಯಾಗಿ ಕಾಮ
ವಿಲ್ಲದವನೆ ಹೆಣ್ಣುಗಳೊಳು ಭೋಗಿ
ಮಲ್ಲಿಕಾರ್ಜುನ ಭಕ್ತನಾಗಿ ಮೋಕ್ಷ
ಒಲ್ಲೆನೆಂಬನೆ ಪರಮಾನಂದಯೋಗಿ ೩

೧೨೧

ಮಂಗಳಭೃಂಗಿಯ ನಾಟ್ಯವಿನೋದಿಗೆ
ಮಂಗಳನಗ್ನಿಯನಕ್ಷಿ ಉಳ್ಳಗೆ
ಮಂಗಳಗಂಗೆಯು ಜಡೆಯೊಳು ಧರಿಸಿದ ಲಿಂಗಸಾಧ್ಯವಗೆ ॥ ಪಲ್ಲ

ಪಶುಪತಿ ಪರಶಿವ ಪಂಚಮುವದನಗೆ
ವಿಷಕಂಜರನಿಗೆ ವಿಮಲಸ್ವರೂಪಗೆ
ವೃಷಭಧ್ವಜನಿಗೆ ಉಪಮಾತೀತಗೆ
ದಶಭುಜವೀತಗೆ ಭಸಿತವಿಲೇಪಭಗ್ನಾಜಿನ
ಶಶಿತಾನಂದಗೆ ಶಶಿರವಿಜೂಟಗೆ
ಅಸಮಾಕ್ಷಗೆ ಅಂಧಕಸುರವೈರಿ ತ್ರಿಶೂಲಧರಾಯುಧಗೆ ೧

೧೯೬

ಸುಜನರಕ್ಷಗೆ ಸುರಮುನಿಸೇವ್ಯಗೆ
ಅಜಶಿರಪಾತ್ರಗೆ ಆಗಮವಂದ್ಯಗೆ
ತ್ರಿಜಗದೀಶಗೆ ತ್ರಿಪುರಹರನಿಗೆ
ಗಜಮುಖತಾತಗೆ ಭಜಿಸುವ ಭಕ್ತರ ಭಾವದೊಳಿಪ್ಪಗೆ
ಭುಜಗಾಭರಣಗೆ ಭೂತವನಾಳ್ವಗೆ
ಗಜಚರ್ಮಾಂಬರ ಗೌರಿಯರಮಣಗೆ ರಜತಗಿರಿಯೀಶಗೆ ೨

ನಿರುಪಮರೂಪಗೆ ನಿತ್ಯಾನಂದಗೆ
ಪರತರಮೂರ್ತಿಗೆ ಪಾವನಚರಿತಗೆ
ಶಿರಮಾಲಾಧರ ಸಿತಕಾಯಗೆ ನರಗೊಲಿದೀಶಂಗೆ
ದುರಿತವಿದೂರ ಧೂರ್ಜಟಿಯೆನಿಪಗೆ
ಕರುಣಕೃಪಾಂಗಗೆ ಕಾಲಾನ್ವಿತಗೆ
ಕರಪದ್ಮಾಸನದೊಳು ಕಂಗೊಳಿಸುವ ಪರಶಿವಲಿಂಗಂಗೆ ೩

## ಶಾಂತಮಲ್ಲ ಅಂಕಿತದ ಸ್ವರವಚನ

೧೨೨

ರಾಗ : ದೇಶಿ

ಮಾಡದಿರು ಮಾನ್ಯರಲ್ಲದರಿಗುಪಕಾರವನು
ಮಾಡಿದರೆ ಮರಣ ತಪ್ಪದು ಮಾನಿನಿ ॥ ಪಲ್ಲ

ಬಿಡುಗಣ್ಣವರು ಬಿಂಕಗೆಡಿಸಿ ಕೌರವರಾಯನ
ಹೆಡಗುಡಿಯು ಕಟ್ಟಿ ಕೊಂಡೊಯ್ಯುವುತಿರೆ ಕಂಡು
ಕಡುಬೇಗದಿಂ ಬಿಡಿಸಿ ತಂದ ಪಾಂಡವರುಗಳ
ಅಡವಿಗಟ್ಟಿದನವನು ಅಬ್ಜದಳನೇತ್ರೆ ೧

ಬರದಲ್ಲಿ ಸಾಕಿದರೆ ಹೊರಿಸಿದರು ಗೋಪಥೆಯು
ಧರಣಿಪುರಿಯಲು ಗೌತಮನ ಮೇಲೆ
ಪರುಷಮಲ್ಲೇಶ್ವರನ ಪಾದಸೇವೆಯೊಳಿರ್ಪ
ಪರಮ ಭಕ್ತನ ಕೆಡಿಸನೆ ವಿನಾಶಕ್ತಿರಾಯು ೨

ಕರೆದು ಅನ್ನವನಿಕ್ಕಿ ಕಾರ್ತವೀರ್ಯಾರ್ಜುನನು
ಶಿರವ ಪೊಯ್ಯನೆ ಜಮದಗ್ನಿಮುನಿಯು
ಕರಿಯೇರಿ ಕವಡೆಯನು ವಿಡಿದಷ್ಟು ಹೊನ್ನಿತ್ತ
ಹರಿಶ್ಚಂದ್ರನಿಗೆ ಮುನಿಯನೆ ಕೌಶಿಕರಾಯು ೩

ಮೂರುಪುರಪವರಿಂದ ಮುಂದುಗೆಟ್ಟನು ಬ್ರಹ್ಮ
ಗಾರುಮಾಡನೆ ಬಲಿಯು ಗರುಡವಾಹನನು
ಪಾರಿಜಾಪನೆ ಸೀತೆ ಭಿಕ್ಷವಸು ತಂದಿಕ್ಕೆ
ಚೋರತನದಲಿ ಕೊಂಡುಹೋದ ರಾವಣನು ೪

ಮಾತಿನೊಳಗೊಂದು ಮನದೊಳಗೊಂದನೆಣಿಸುತಿಹ
ನೀತಿಬಾಹಿರರೊಡನೆ ನಿನಗೆ ಕೇಡಹುದು
ಶಾಂತಮಲ್ಲೇಶ್ವರನವರಿಗೆ ತನು ಮನ ಧನವ
ಸೋತಡಿಹಪರದಲ್ಲಿ ಸುಖಿಪ್ಪಂಟೆ ರಮಣಿ ೫

೧೨೩

ಅರಿದರಿಲ್ಲವೆ ಲಿಂಗವೆ ಮತರದಲೆನ್ನಯ ಲಿಂಗವೆ
ಮಾರಹರ ನಿಮ್ಮ ಕರುಣ ತಪ್ಪಿದ ಮೇಲೆ ದುರಸ್ತಿ ನಾನಾದೆ ಲಿಂಗವೆ ॥ ಪಲ್ಲ

ತಂದೆ ತಾಯಿ ನೀವು ಲಿಂಗವೆಯೆನಗೆ
ಬಂಧುಬಳಗ ನೀವು ಲಿಂಗವೆ
ಬಂದಂಥ ದುರಿತವ ಪರಿಹರಮಾಡ್ಯೆಯು
ಚಂದ್ರಶೇಖರಲಿಂಗವೆ ೧

ನೊಂದೆನು ಹಲವಂಗದಲ್ಲಿ ಲಿಂಗವೆ
ಬಾಳಬನ್ನವ ಬಿಡಿಸೈಯು ಲಿಂಗವೆ
ಬಂದಂಥ ಕಂಟಕವ ಪರಿಹರಮಾಡೈ ಲಿಂಗವೆ
ವಂದೇ ಶಂಕರಲಿಂಗವೆ ೨

ಅಡಿಯಾಧಾರವಿಲ್ಲ ಲಿಂಗವೆ ಮೇಲೆ ನಾ
ಹಿಡಿವರೆ ಕೊಂಬಿಲ್ಲ ಲಿಂಗವೆ ನಟ್ಟ
ನಡುಗಡಲೊಳು ನಾನು ಮುಳುಗಿಪೋಗುತಿಹೆ
ತಡಿಯ ಸೇರಿಸು ಪ್ರಾಣಲಿಂಗವೆ ೩

ಅರಿಷಡುವರ್ಗಕ್ಕೆ ಲಿಂಗವೆಯೆನ್ನ
ಗುರಿ ಮಾಡಿದಯ್ಯಯ್ಯೊ ಲಿಂಗವೆ
ಗುರುಪಾದಗತಿಯೆಂದು ನಂಬಿದ ಭಕ್ತರ
ಚರಣದೊಳಿರಿಸಯ್ಯ ಲಿಂಗವೆ ೪

೧೧೮

ಮನವೆ ಮಜ್ಜನ ಕಂಡ್ಯ ಲಿಂಗವೆ ಎನ್ನ
ತನುವೆ ಧೂಪ ದೀಪ ಲಿಂಗವೆ
ಮನದೊಳಗಿರುವಂಥ ಎಳೆಯ ಹೊಂಬಾಳೆಯು
ನಿನಗೆ ತಂದರ್ಪಿಸುವೆ ಲಿಂಗವೆ ೫

ಕೊಟ್ಟು ಹುಟ್ಟುವ ಫಲ ಲಿಂಗವೆ ಬಾಯ
ಬಿಟ್ಟರೆ ಬರುವುದೆ ಲಿಂಗವೆ
ಸಿಟ್ಟಿಗೆ ಶಿವನ ಬೈದರೆ ಪಾಪ ಬೆ
ನ್ನಟ್ಟಿ ಬರುವದ ಕಂಡೆ ಲಿಂಗವೆ ೬

ನಾಲಂಕಿಮಲೆಯೊಳಗೆ ಲಿಂಗವೆ ನಿಚ್ಚ
ಕಾಬ ಲಂಕನಾಗಿರ್ದೆ ಲಿಂಗವೆ
ಚಂದ್ರಸೂರ್ಯಾದಿಗಳು ಲಿಂಗವೆ ಕೂಡಿ
ನಿಂದು ಪೂಜಿಸುವರು ಲಿಂಗವೆ ೭

ಮುಂಗೋಳಿ ಕೂಗದ ಮುನ್ನ ಲಿಂಗವೆ ಈ
ಮಂಜು ಹರೆಯುದ ಮುನ್ನ ಲಿಂಗವೆ
ಮುಂಜಾವದಲೆದ್ದು ಶಿವಪೂಜೆ ಮಾಡುವ
ಅಂಗದೊಳಿರಿಸಯ್ಯ ಲಿಂಗವೆ ೮

ಹೊತ್ತು ಮೂಡದ ಮುನ್ನ ಲಿಂಗವೆ
ಕತ್ತಲಾಗದ ಮುನ್ನ ಲಿಂಗವೆ
ಅರ್ತಿಯಿಂದಲಿ ಎದ್ದು ಶಿವಪೂಜೆ ಮಾಡುವರ
ಹೊಸ್ತಿಲೊಳಿರಿಸೆನ್ನ ಲಿಂಗವೆ ೯

ಇಕ್ಷುಚಾಪನ ಗೆದ್ದ ಲಿಂಗವೆ ಎನ್ನ
ರಕ್ಷಿಸು ಅನುದಿನ ಲಿಂಗವೆ
ಅಕ್ಷಯಪದವಿತ್ತು ಗುರುಶಾಂತಮಲ್ಲನು
ಭಿಕ್ಷದ ಸೋಮೇಶ ಲಿಂಗವೆ ೧೦

## ಚೆನ್ನಸೋಮೇಶ್ವರ ಅಂಕಿತದ ಸ್ವರವಚನ

೧೨೪

ಜಯ ಜಯ ನಿತ್ಯ ನಿರಂಜನ ನಿರ್ಗುಣ
ಜಯಜಯ ನಿರ್ಮಳ ನಿರುಪಮ ನಿರವಯ
ಜಯ ಜಯ ಗುರುಪ್ರಿಯ ಚೆನ್ನಸೋಮೇಶಲಿಂಗವೆ ಅವಧರಿಸಯ್ಯ ॥ ಪಲ್ಲ

ಯಮನಿಯಮ ಘನ ಪ್ರಾಣಪನಾದಿಯ
ನುಮನೋದ್ಭಾವದ ನುಗ್ಗನಂದದಿ
ಗವನಿಮಣಿ ಕನಕದ್ವಾರ ತ್ರಿಕೂಟದ ಗಿರಿಯೊಳಗೆ
ವಿಮಳಾನಂದದ ಅಮೃತದ ಶರಧಿ
ಸಮರಸಭಾವದ ಶಾಂತನ ಲೀಲೆಯ
ಸಮತೆಯಿಂದ ಘನಪ್ರಾಣಲಿಂಗವೆ ಮಜ್ಜಯವಧರಿಸಯ್ಯ ೧

ನಿತ್ಯವನರಿಯುವ ಉತ್ತಮ ನೇಮದ
ಸತ್ಯದ ಸಾಣೆಯ ಮೇಲನುಭವದ
ಪತ್ತನವೆದ ನಿಜವಸುವ ಗಂಧದ ತತ್ವದ ಪರಿಮಳದ
ಪ್ರತ್ಯಕ್ಷದ ಸುವಿಚಾರದ ಸಾರದ
ಭಕ್ತಿರಸದ ಪನ್ನೀರ ನೇಮ ಸೈರಿಸಿ
ನಿತ್ಯಕರ್ಪೂ ನಿಜವಸ್ತು ಸುಗಂಧವನು ಚಿತ್ತದೊಳು ಅವಧರಿಸಯ್ಯ ೨

ಮನವ ಮಥಿಸೈ ಯೋಗದ ಕೊನೆಯೊಳ್
ಪರಮಾಚರಣೆಯ ನೆನಹಿನ ನನೆಗಳ
ಅನುಪಮ ಕುಂಭದ ಪರಿಮಳವೆಸವುತ ಬಿರಿಮುಗುಳರಳಾಗಿ
ಉನುಮನಿಯೆಂಬ ಸುದಸ್ಸದಮುಖದಿಂ
ಚಿನುಮಯ ಲಿಂಗಾರ್ಚನೆ ಅವಸರಗಳ
ಅನುವನರಿದು ನಿಜಸಹಸ್ರ ಕಮಲದ ಪುಷ್ಪವನವಧರಿಸಯ್ಯ ೩

ಸಾಲುವಿಡಿವ ಷಡುಚಕ್ರದ ಕಮಲವ
ಮೇಲುಗಿರಿಯ ಭ್ರೂಮಧ್ಯಸ್ಥಾನದ
ಲೀಲೆಯಿಂದ ನಿಜಾತ್ಮರಕ್ಷಣ ನಿಜಪ್ರಕಾಶದಲಿ
ಮೂಲಕಮಲದ ಗುಂಡಿಗೆಯೊಳಗಣ
ಜಾ.........ಧೂಪಗೈಯರೆಬ್ಬಿಸಿ
ಮೇಲಿಳಿವ ಮೂರ್ತದ ಸುಖಸದ್ವಾಸನೆ ಧೂಪವನವಧರಿಸಯ್ಯ ೪

ಒದಗಿದ ಹತ್ತಿಯ ಕರ್ಪೂರದ ಕಸವನು
ಪದುಳದಿ ವಿವರಿಸಿ ಮನದೃಢಭಕ್ತಿಯ
ಹೃದಯದಿ ಭುಜಗನ ಪಣತೆಯೊಳಿರಿಸುತ ನಿತ್ಯನಿರಂಜನದ
ಸದಮಲದರಿವಿನ ತೈಲವನೆರೆವುತ
ಮುದದಿಂ ಜ್ಞಾನದ ಜ್ಯೋತಿಯ ಮುಂತ್ರಿಸಿ
ಅದರಿಂದೊರಗಿದ ಸ್ವಯಂಪ್ರಕಾಶದ ದೀಪವನವಧರಿಸಯ್ಯ ೫

ಸಗ್ಗರದೊರೆಳು ಸುಧರ್ಮದ ಒನಕೆ ಸು
ಕರ್ಮದ ತಂಡುಲಗಳ ನೀಚಳಿಸುತ
ಹಮ್ಮು ಬಿಮ್ಮುಗಳ ಭಾವಿಸಿ ಕಳೆವುತ ಒಮ್ಮನವನೆ ಮಾಡಿ
ನಿರ್ಮಲವನಿಪ ಮಹಾಮೃತಜೋನವ
ಸನ್ಮಾನದ ಪರಿವಾಣದಿಂ ಗಡಣಿಸಿ
ನಿರ್ಮಿಸಿದೆನು ನಿಜನಿತ್ಯತೃಪ್ತನೆಲೆ ಧ್ಯಾನವನವಧರಿಸಯ್ಯ ೬

ಫಲವಕಾಂಕ್ಷೆಗಳಿಲ್ಲದ ಕ್ರಮುಕವು
ಎಲುವಡಗಿದ ನಿಜ ಪ್ರವಾಳ ಶ್ವೇತಪರ್ಣ (?)
ದೆಲೆಯನರಿದು ನಿಜದವಿರಳ ತತ್ವದ ಮುಕ್ತಿಯೆ ಬ....ಕರ್ಪೂರದ
ಲಲಿತಸುಖದನಬ್ಜವದನಮರನ
ವಲಿತಾಪದ ನಿರ್ಭಾವದ ಮುಖದಿಂ
ಒಲಿದ ಲಿಂಗದಿ ಘನಮಹಲಿಂಗವೆ ಕಾಬುದನವಧರಿಸಯ್ಯ ೭

ಸುಜ್ಞಾನದ ಸಹಜಸಮಾಧಿಯ ನಿರ್ಮಳ
ಯೋಗದ ನಿರುಪಮ ಚರಿತೆಯ
ಹಮ್ಮನಳಿದು ಮಹಾ ಘನಲಿಂಗದ ಬೆಳಗಿನ ಪೂಜೆಯ ನೋಡುತಲಿ
ಮರ್ಮವನರಿದನುಭಾವದ ಮುಖದಿಂ
ದಗಮ್ಯವಾದ ಅಷ್ಟವಿಧಾರ್ಚನೆಯುವಸರಗಳ
ಎಮ್ಮಯ ಗುರುಪ್ರಿಯ ಚೆನ್ನಸೋಮೇಶ್ವರ ಲಿಂಗವೆ ಅವಧರಿಸಯ್ಯ ೮

೧೨೫

*ಎಂದಿಗೆಯು ಅರಿಯಬಾರದಿವನ ಮಹಿಮೆಯು
ಚಂದ್ರಧರನು ಬಲ್ಲನಿವನ ಧೀರನೆಂಬುದ ॥ ಪಲ್ಲ

ಅಂಧಕಾಸುರನ ತಾನು ನಿಂದು ಸೀಳಿದ
ಮಂದದೈತ್ಯನೆಂಬುವನ ಕೊಂದುಹಾಕಿದ
ಒಂದು ಹೋಮಶಾಲೆಕೊಳ ತಿಂದುಹೋದುದ ಆ
ನಂದದಿಂದ ಚೆಂಡನಾಡಿ ತಲೆಯನರಿದುದ ೧

ಆಸ್ಯದಿಂದ ಶಾರದೆಯ ಮೂಗನರಿದುದ
ರೋಷದಿಂದ ಚೌಡಿ ತುರುಬ ಕಿವಿಯ ಕೊಯ್ದುದ
ಹಾಸ್ಯದಿಂದೊ ವಿನಾಯಕನ ಖತಿಯಲೊದೆದುದ
ಸಾಸದಿಂದ ಧುಮುಕಿದಗ್ನಿ ನಾಲಿಗರಿದುದ ೨

---

* ೧೨೫, ೧೨೬, ೧೨೭ನೆಯ ಹಾಡುಗಳು ಮಡ್ಡೇರಿ ಶಿವಲಿಂಗ ರಚಿತ.

ಅಷ್ಟದಿಕ್ಕಿಗಧಿಕವಾದಹಾ ಉಷ್ಣಭಾವಿಯು
ನಿಷ್ಠೆಯುಳ್ಳ ಭಕ್ತರಿಗೆ ಅತಿಪ್ರಿಯವಾದುದ
ದೃಷ್ಟವುಳ್ಳ ಶರಭಾವತಾರ ವೀರಭದ್ರನು
ಕೊಟ್ಟು ನಿಮ್ಮ ಕರುಣಾಂಗದೃಷ್ಟಿಯಿಂದಲಿ ೩

೧೨೮

ಮಾತನಾಡದ ಬಗೆಯೇನೊ ಶಂಕರದೇವ
ನೀತವೆ ನಿನಗೆ ಕೋಪ ಚೆನ್ನಬಸವೇಶ ॥ ಪಲ್ಲ

ಕಂಗಳು ಮೂರುಳ್ಳ ದೇವ ಕರುಣಸಾಗರನೆ ನಿನ್ನ
ಹೆಂಗೆ ಜೀವಿಸುವೆ ನಾನೆಂತು ೧

ಕಪ್ಪುಗೊರಳದೇವನೆ ನಿಮ್ಮ
ಪುಷ್ಪಬಾಣವನುರುಹಿದಂಥ
ಸರ್ಪಭೂಷಿತನೆ ನೀನು ೨

ಅಚ್ಯುತರೊಡೆಯನೆ ನಿನ್ನ
ಇಚ್ಛೆಯೊಳಗಿರುವೆ ನಾನು
ಹುಚ್ಚು ಮಾಡಿ ಸುಮ್ಮಲಿರವೇನು ೩

ಮೂರುಪುರವನೆಚ್ಚವನೆ
ವಾರಿಜನ ಶಿರವ[ನರಿದವನೆ]
ದೂರಮಾಡಿ ಸುಮ್ಮನಿಹುದೇನೊ ೪

ಮಂಗಳಮಹಿಮನೆ ನೀನು
ಹಿಂಗದೆ ಸೋದೆಯು ಬಸವ
ಲಿಂಗರಾಜಗೆ ಮುಕ್ತಿಯು ಪದವೀವ ದೇವ ೫

೧೨೯

ಮೃಡನವತಾರ ನೀನೆ ಮುಮ್ಮರವಿಂದ
ಪೊಡವೀರೇಳನೆಲ್ಲ ಒಡಲೊಳಗಿಂಬಿಟ್ಟು
ಬಿಡದೆ ರಕ್ಷಿಸುವಂತೆನ್ನೊಡೆಯ ಕೊಡೆಯ ಚನ್ನವೀರಭದ್ರನೆ ನೀನೆ ॥ ಪಲ್ಲ

ಸಿಂಧುಬಲ್ಲಾಳನಿಗೊಲಿದೆ ಕಂದನಾಗಿಯೆ
ಬಂದು ಬೆಂಬಲವಾಗಿ ನೀ ಚಂದಯ್ಯನೊಡನೆ ಆ
ನಂದದಿಂದಲಿ ಒಂದು ನುಲಿಯನು ಹೊಸದು
ನಿಂದನೆ ಚಂದ್ರಜೂಟನೆ ಚಕಿತನೆ ೧

ಕುಂಬಾರನ ಸತಿಗೆ ಕುಣಿವೆ
ಕುಂಭಕುಚಕೆ ತಂದು ಕೈನೀಡಿದನೆ
ನಂಬಿ ಚೆನ್ನನೊಳೆಂಜಲುಂಡು ಸೇವಿಸಿದನೆ
ಕಂದುಗೊರಳನೆ ಇಂದುಶೇಖರ ಮುಂದಟ್ಟೈತ್ಯನ ಕೊಂದನೆ ೨

ಸುತ್ತಲೀರೇಳ್ಭುವನಕೆ ಪೂಜಿಪಟ್ಟಂಥ
ಭಕ್ತರಿಗತಿಪ್ರಿಯನೆ
ಸತ್ಪ್ರಿ ಚಿತ್ತಾನಂದ ನಿತ್ಯಪರಿಪೂರ್ಣನೆ
ಮತ್ತೆ ಮಡ್ಡೀರಿವಂತದ ಶಿವಲಿಂಗಿತ್ತು ನಿಮ್ಮಯ ದಯವನು ೩

## ಇಷ್ಟಲಿಂಗ ಅಂಕಿತದ ಸ್ವರವಚನ

೧೨೮

ಕರೆಮ ತಾರೆ ಮರಣದೂರಸನ್ಮತನ ಹೀನವಗುಣವ
ನುರುಹಿದ ವಿರಕ್ತದೇವನ ಅಕ್ಕಯ್ಯ ॥ ಪಲ್ಲ

ವಾರಿಜನ ಶಿರವನರಿದನ ಹಿರಣ್ಯಕನ ತಲೆಯ
ಸರಿದು ಚರ್ಮವ ಪೊದ್ದನ ಅಕ್ಕಯ್ಯ
ಧರೆಯೊಳಧಿಕರ್ಮಿತ್ರ ಸೂರ್ಯನ ರೌದ್ರದಿಂದ
ಭರದಿ ಕಣ್ಣ ತಿವಿದು ಮೆರೆದನ ಅಕ್ಕಯ್ಯ ೧

ನೀರೊಳ್ನಿಂದು ಮೀಂಗಳ ಸೀಳ್ದನ
ಭರದಿಂದ ಬಂದು ಬಸಿದ ಶೂಲದಲಿರಿದನ ಅಕ್ಕಯ್ಯ
ಬಲ್ಲಿದ ತಿರುವಲ್ಲಿನಾಚಿಯ ಭಾವಕೆ ಮೆಚ್ಚಿ
ಅಲ್ಲಿ ನಿಂದು ಕರದೊಳ್ಪೆರೆದನ ಅಕ್ಕಯ್ಯ ೨

ಬಾಣಾಸುರನ ಬಾಗಿಲ ಕಾಯ್ದನ ಚೋಳಿಯ ಉಂಡ
ಹಾಲುಪಾಯಸ ಸವಿದ ದೇವನ ಅಕ್ಕಯ್ಯ
ಭೂಮಿಪ ಬಲ್ಲಾಳರಾಯನ ಕಾಮಿನಿಗೊಲಿದು
ಬಾಲನಾಗಿ ಮೆರೆದ ದೇವನ ಅಕ್ಕಯ್ಯ ೩

ನಂಬಿಗೆ ಕುಂಟಣಿಯ ಮಾಡಿದನ ಕೂನಪಾಂಡ್ಯನ ಲಲನೆ
ಮಂಗಾಯಕ್ಕಗೊಲಿದನ ಅಕ್ಕಯ್ಯ
ಶಂಭುಶಿವನು ಹೊರೆಗುನಾದವ ಹೊಯ್ಸಿದ ಮೆರೆ
ಮಿಂಡದೇವಗೊಲಿದ ದೇವನ ಅಕ್ಕಯ್ಯ ೪

ಕುರಿಯ ಹಿಕ್ಕೆಯ ಲಿಂಗವ ಮಾಡಿದನ
ಅಲ್ಲಿಯೆ ನಿಂದು ಗೊಲ್ಲಾಳರಾಯಗೊಲಿದ ದೇವನ ಅಕ್ಕಯ್ಯ
ಕಲ್ಲಲಿಡಿಸಿಕೊಂಡು ತಡದನಾ ಕಣ್ಣಪ್ಪನ ಕೂಡೆ
ಬಿಲ್ಲಕೊಪ್ಪಲಿ ತಿವಿಸಿಕೊಂಡನ ಅಕ್ಕಯ್ಯ ೫

ದೋಸೆಯ ಹಿಟ್ಟಿಪ್ಪೆಗೊಲಿದನ ಸತ್ಯಕ್ಕನ ಕೈಯ ಹಿಡಿದೆ
ಮಟ್ಟಿಲಿ ತಿವಿಸಿಕೊಂಡನ ಅಕ್ಕಯ್ಯ
ಮುಕ್ತಾಯಕ್ಕನ ಮನದ ಅಳಲನು ಸನ್ಮತವ ಮಾಡಿ
ಅಪ್ಪ ಅಜಗಣ್ಣಗೆ ಬೆರೆದನ ೬

ಸೋಮಾಸಿಮಾರಯ್ಯನೆಂಬವನ ಪ್ರೇಮಕೆ ಬಂದು
ಹೋಮ ಹಬ್ಬವ ಸವಿದುಪೋದನ ಅಕ್ಕಯ್ಯ
ಸಾಮವೇದಿಗಳನು ಒದೆದನ ದಾಮಘನವೆಂದು
ನೇಮದಲಿ ತೋಳನು ಅರಿದನ ಅಕ್ಕಯ್ಯ ೭

ಧರೆಯೊಳಧಿಕ ಚಿನ್ಮನದುರ್ಗವ
ಬರಮಭೂಪನ ಭಕ್ತಿಯಲ್ಲಿಯಿರುವ ದೇವನ ಅಕ್ಕಯ್ಯ
ಹರುಷದಿ ನೀ ಹೋಗಿ ಕರತಾರೆ
ಕರಸ್ಥಳದ ಮುರಿಗಿವಿಷ್ಟಲಿಂಗರುದ್ರನ ಅಕ್ಕಯ್ಯ ೮

೧೨೯

ಪಿತರೆರದಿ ಅರಿತವನಲ್ಲ ಧಾತುಪ್ರೀತಿನರಿದನಲ್ಲ
ಕಾತಳಿಸಿ ನಡೆದುದೊಡನೆ ಫಣಿಪುರದಿಂದ ॥ ಪಲ್ಲ

ಎಡಬಲನ ನೋಡಲಿಲ್ಲ ಒಡನೆ ಮಾತನಾಡಲಿಲ್ಲ
ಕಡೆಗೆ ತಾ ನಡದುಪೋದನೆ ಫಕೀರ
ಒಡನೆಯಿದ್ದವರನೆಲ್ಲ ನಡೆದುಬನ್ನಿಯೆಂದು ತಾನು
ದೃಢದಿಂದ ಪೋದನೆ ಆ ಫಕೀರ ಸ್ವಾಮಿ ೧

ಒಡಲ ಕಿಚ್ಚಿವನಲ್ಲ ಬಿಡದೆ ತಾನು ತಿರಿದನಲ್ಲ
ಬೇಡಿದವರಿಗೆ ಕೊಡುವನೆ ಫಕೀರ
ಜಡಿದು ಒಡಿದು ನುಡಿದನೆಲ್ಲ ಒಡನೆ ತನಗೆ ಕ್ರೋಧಗಳಿಲ್ಲ
ಕಡೆಗೆ ತಾ ನಡೆದು ಪೋದನೆ ಫಕೀರ ಸ್ವಾಮಿ ೨

ಲಕ್ಕುಂಡಿ ಗುರಪ್ಪಗೆ ನೀನು ತಪ್ಪುದಲೆ ಭಾಷೆಯು
ಕೊಟ್ಟು ಒಪ್ಪದಲಿ ನಡದುಪೋದೆ ನೀ ಫಕೀರ
ಸೊಕ್ಕಿರ್ದ ತರ್ಕಿಗಳನೆಲ್ಲ ದಿಕ್ಕುಗೇಡಮಾಡಿದವನೆ
ಕಕ್ಕುಲಿತೆಯಿಲ್ಲದೆ ಪೋದೆ ನೀ ಫಕೀರ ಸ್ವಾಮಿ ೩

ಹೊಕ್ಕು ಹೊಕ್ಕು ಮನೆಗಳನೆಲ್ಲ ಚಿಕ್ಕಮಕ್ಕಳಿಗೆಲ್ಲ ನೀನು
ಮುಕ್ಕಣ್ಣ ತೋರಿ ಮೆರದನೆ ಫಕೀರ
ಅಕ್ಕರಿಂದಲಿ ನೋಡಿವರೆಲ್ಲ ಸಿಕ್ಕದಲೆ ನಿನ್ನಯು ಸುಳುಹ
ಮಿಕ್ಕು ಮುಂದಕೆ ನಡೆದನೆ ಫಕೀರ ಸ್ವಾಮಿ ೪

ಆಗುಬೇಗದಲ್ಲಿ ಬಂದು ಹೋಗಿ ಸಿರಪುರಸ್ಥಾನದಲ್ಲಿ
ಪೂಜಿಪೆ ನೀನು ಫಕೀರ
ನಾಗಕಂಕಣನಾಜ್ಞೆಯಲಿ ಬೆಳಗಿಷ್ಟಲಿಂಗದೊಳಗಾದೆ
ಭೋಗವನು ಆರಿಗೆ ಅರಿದಲ್ಲ ಫಕೀರ ಸ್ವಾಮಿ ೫

೧೩೦

ಪತಕೆನ್ನೊಳು ಕೋಪವೆ ಸಿದ್ಧೇಶ
ಜಾತರಿಗೆಲ್ಲ ಅಜಾತಲಿಂಗವೆ ನೀನು
ಧಾತುದಯು ಧರ್ಮಿಷ್ಟನೆ ಸಿದ್ಧೇಶ ॥ ಪಲ್ಲ

ಒಂದೊಂದು ರೂಪಿನಲಿ ಮರ್ತ್ಯಕೆ ನೀ
ಬಂದು ನಿಮ್ಮಯು ರೂಪನು
ಚಂದದಿಂದಲಿ ತೋರಿ ಚಪಲತನ
ದಿಂದ ನಿಂದು ನೀ ಪೂಜಿತನೆ ಸಿದ್ಧೇಶ ೧

ಇರುವೆ ಎಂಬತ್ತುನಾಲ್ಕುಕೋಟಿಜೀ
ವ[ರು]ಗಳಿಗೆ ನೀ ಕರ್ತನಾಗಿ
ಮರೆಯದೆ ಅನ್ನವ ಅರಿದರಿದು ನೀಡುವ
ದೊರೆರಾಜ ಪ್ರಭುವೆ ನೀನು ಸಿದ್ಧೇಶ ೨

ಚಪ್ಪನ್ನಯ್ವತ್ತಾರು ದೇಶವನೆಲ್ಲ
ತಪ್ಪದಲಿ ಚರಿಸಿದೆ ಆರ್ಪ
ತಪ್ಪುತಡೆಗಳನೆಲ್ಲ ಗೋಪ್ಯವ ಮಾಡಿದೆ
ಒಪ್ಪದಿಂದಲಿ ಪೂಜಿಪೆ ಸಿದ್ಧೇಶ ೩

ಉರ್ವಿಯೊಳಧಿಕವಾದ ಕೆಳದಿಭೂಪ
ಅರಸು ಸೋಮಶೇಖರಗೆ
ಅರ್ಧಾಂಗವಾಗಿರ್ದ ನಿರ್ವಾಣೇಂದ್ರಗೆ
ಸರ್ವ ಸಾಮ್ರಾಜ್ಯಪದವೀವನೆ ಸಿದ್ಧೇಶ ೪

ಶಿವಯೋಗಾನಂದ ಪುರದಾಸ್ಥಾನದಿ ನಿಂತು
ಒರದು ಭಕ್ತರಿಗೆ ನೀನು
ಹರುಷದಿಂದಲಿ ಪೇಳಿ ಪರ ಗುರುಸಿದ್ಧನೆ
ಒರೆದಿಷ್ಟಲಿಂಗವ ಬೆರಪೆ ೫

೧೩೧

ಮಂಗಳಾರತಿಯ ತಂದೆತ್ತಿರೆ ಮುಕ್ತಿ
ಕಂಗಳು ಮೂರುಳ್ಳ ದೇವನಿಗೆ ॥ ಪಲ್ಲ

ಓಜೆಯುಳ್ಳಾತಂಗೆ ಮೂಜಗವಂದ್ಯಗೆ
ಮೋಜದೆ ಈರೇಳು ಸಲಹುವಗೆ
ರಾಜಾಧಿರಾಜ ವೀರೇಶ್ವರದೇವಗೆ
ರಾಜಮುಖಿಯರಾರತಿಯೆತ್ತಿರೆ ೧

ಪನ್ನಂಗಧರನಿಗೆ ಪಾವನಮೂರ್ತಿಗೆ
ಕಿನ್ನರಿಬ್ರಹ್ಮಯ್ಯಗೊಲಿದಾತಗೆ
ಚೆನ್ನಯ್ಯ ಕೋಳೂರ ಕೊಡಗೂಸಿಗೊಲಿದಗೆ
ಕನ್ನೆ ಮೋಹನ್ನೆರಾರತಿಯೆತ್ತಿರೆ ೨

ಉಡುಪತಿಧರನಿಗೆ ಮೃಡನವತಾರಗೆ
ಮಡದಿಯೊಳ್ಬೆರೆದು ಕಾಲನ ಗೆದ್ದಗೆ
ದೃಢವುಳ್ಳ ವೀರಗೆ ಧೂಮಾಕ್ಷಿನಯನಗೆ
ಮಡದಿರನ್ನೆಯರಾರತಿಯೆತ್ತಿರೆ ೩

ಮಾರನವತಾರಗೆ ಹರಿಯಗ್ರಗಣ್ಯಗೆ
ಸುರರನು ರಕ್ಷಿಸಿ ಮೆರೆದವಗೆ
ಕರುಣಾಂಕಕಾರಗೆ ಕರೆಕಂಠದೇವಗೆ
ಗರುಡಗಮನೆಯರಾರತಿಯೆತ್ತಿರೆ ೪

ಅಂಬುಜನಯನಗೆ ಗಂಭೀರದೇವಗೆ
ಕಂಬುಕಂಧರೆಯರೊಲ್ಪಿರೆದಾತಗೆ
ನಂಬಿದ ಭಕ್ತರಿಗಭಯವಿಟ್ಟಾತಗೆ
ರಂಭೆ ದೇವಕಿಯರಾರತಿಯೆತ್ತಿರೆ ೫

ಹಾಲಸಮುದ್ರಗೆ ಲೀಲಾವಿನೋದಿಗೆ
ಕಾಲಕರ್ಮಂಗಳ ಗೆಲಿದಾತಗೆ
ಮೂಲೋಕವಂದ್ಯಗೆ ಮುರವೈರಿದೇವಗೆ
ಬಾಲೆ ಭಾವಕಿಯರಾರತಿಯೆತ್ತಿರೆ ೬

ಚಿನ್ಮಯರೂಪಗೆ ಚಾರಿತ್ರದೇವಗೆ
ಸನ್ಮಾನದಿಂದಲಿ ಪೂಜಿಪಗೆ
ಬಿನ್ನಾಣರೂಪಿಗೆ ಬಿರಿದಂಕದೇವಗೆ
ಕನ್ನೆನಾರಿಯರಾರತಿಯೆತ್ತಿರೆ ೭

ಅಷ್ಟದಿಕ್ಕುಗಳಿಗೆ ದೃಷ್ಟವುಳ್ಳಾತಂಗೆ
ಕೊಟ್ಟು ಸೌಭಾಗ್ಯವ ಕರುಣಿಪಗೆ
ಶ್ರೇಷ್ಠದಿ ಪೂಜಿಪ ಹಂಸಭಾವಿವೀರಗೆ
ನಿಷ್ಠೆಯುಳ್ಳವರಾರತಿಯೆತ್ತಿರೆ ೮

೧೭೨

ರಾಗ : ದೇಸಿ

ಎಲೆ ಪ್ರಿಯಳೆ ಕೇಳು ಬಸವನ ಮಹತ್ವವನು
ಚೆಲ್ವ ಶಂಭುಶಿವಗೆ ಇಮ್ಮಡಿರೂಪೆಯಿವನೆ ॥ ಪಲ್ಲ

ಕೈಲಾಸದನಭವನೊಡ್ಡೋಲಗದೊಳಗಿರ್ದ ಸ
ವಿಲಾಸದಿಂದ ಮಾತಾಡುತಿರಲು
ನೆಲೆಯುಳ್ಳವರಾರುಯೆಂದು ತಿಳಿದುನೋಡೆ
ಲಲನೆ ಕೇಳಾ ಬಸವ ಘನವೆಂದ ರಮಣಿ ೧

ಇತ್ತರದಿ ವಾದಿಗಳು ಶಿವಬಸವ ಘನವೆಂದು
ಮರ್ತ್ಯಲೋಕಕೆ ಇವನ ಕಳುಹಿದರೆಯು
ಸತ್ಯದಿ ಈರೇಳುಭುವನವನು ಪಾಲಿಪನೆ
ಇತ್ತರವ ವಾದಿಗಳ ನಾಲಿಗೆ ಅರಿದ ರಮಣಿ ೨

ಒಲಿದು ಮರ್ತ್ಯಕೆ ತನ್ನ ಸಲವಿಂದ ಕಳುಹಿದರೆ
ಚೆಲುವ ಮಾದಲಾಂಬಿಕೆಯು ಮಾವರಸಗೆ
ಗೆಲವಿಂದ ಬಂದು ತಾ ಜನಿಸಿದನವನೆಂದು
ಚೆಲುವೆ ಜಮುರೆವೆಣ್ಣೆ ನೀ ಕೇಳು ರಮಣಿ ೩

ಕಲ್ಯಾಣಪಟ್ಟಣದರಸು ಬಿಜ್ಜಳರಾಯ
ಎಲ್ಲ ಕರಣಿಕರಿಗೆ ಅಧಿಕ ಮಾಡಿ
ಬಲ್ಲಿದ ಬಸವೇಶ್ವರಗೆ ಪ್ರಾಧಾನಿಕೆ ಕೊಟ್ಟು
ಅಲ್ಲಿ ಪವಾಡಂಗಳ ಗಲಿದನೆಲೆ ರಮಣಿ ೪

ನಲ್ಲೆ ಕೇಳ್ ನಿನ್ನಯ ಲೀಲಾವಿಲಾಸತೆಯ
ಎಲ್ಲವನು ಪೇಳುವೆನು ತಿಳಿದು ಕೇಳು
ಬಲ್ಲಿದನು ಕರಸ್ಥಳದಇಷ್ಟಲಿಂಗೇಶ್ವರನು
ಮೆಲ್ಲನೆ ಅರುಹಿದನು ಕಮಲದಳನೇತ್ರೆ ೫

೧೩೩

ಮತ್ತೆ ಕೇಳೆಲಗೆ ನೀ ಶರಭಾವತಾರನನು
ಮೃತ್ಯುದೈವದಗಂಡಯಿವನು ಎಲೆ ರಮಣಿ ॥ ಪಲ್ಲ

ಕಾಳು ಕಾಳಂದರದಿ ಕಲ್ಪವೃಕ್ಷನು ತಾನು
ಮೇಳ ಶ್ರೀಗೌರಿರಮಣಗೆಯಿವನು ಹಿತನು
ತಾಳಿ ದಾನ್ವದ ರೂಪ ಇಳೆಗೆ ತಾ ಬಂದುದನು
ಬಾಳ ಸಾಮರ್ಥ್ಯವನು ಮಾಡಿದನೆ ರಮಣಿ ೧

ಕತ್ತಿಯು ಕಠಾರಿ ಖಡ್ಗವನು ತಾಳಿದನು
ಬತ್ತೀಸಾಯುಧಗಳನು ಹಿಡಿದು ನಿಂದು
ಕೂರ್ತು ಹೋಮವ ಮಾಳ್ಪ ದಕ್ಷನಿದ್ದೆಡೆಗೆ ತಾ
ಮೊತ್ತರದಿ ಅದ್ಭುತದಿ ನಿಂದನೆಲೆ ರಮಣಿ ೨

ಪಾಡುಪಂತಗಳಿಂದ ಕೂಡೆ ಖಡ್ಗವ ಜಡಿದು
ನೋಡು ನೋಡೆಲೆ ಕಾಳಿ ಸಾಹಸಗಳನು
ಬೇಡಿಕೊಂಡರಿಗಭಯ ಕೊಟ್ಟು ರಕ್ಷಿಸಿ ತಾನು
ಕೋಡಿ ದಕ್ಷನ ಶಿರವ ಹೊಡೆದನೆಲೆ ರಮಣಿ ೩

ಗಿರಿಜೆ ಪಾರ್ವತಿದೇವಿ ತಂದೆ ದಕ್ಷನುಯೆಂದು
ದುರಧೀರ ವೀರನನು ಬೇಡಿಕೊಳಲು
ಕುರಿದಲೆಯನಿತ್ತು ರಕ್ಷಿಸಿ ಪೊರೆದ ವೀರೇಶ
ಹರಿಸಿಂಹಮಧ್ಯಸ್ತ್ರೀಯಳೆ ಕೇಳು ರಮಣಿ . ೪

ಬಾಲೆ ಸ್ತ್ರೀಯಳೆ ಕೇಳು ಲೀಲೆಯಿಂದಲಿ ತಾನು
ಚೆಲುವ ಶ್ರೀಗಿರಿಚೆನ್ನಗೊಪ್ಪಿಸಿದನು
ನಲಿದು ಕೇಳುವದು ಕರಸ್ಥಲದಿಷ್ಟಲಿಂಗೇಶ
ಗೆಲವಿಂದ ಅರುಹಿದನು ಹರಿಣನಯನೇತ್ರೆ* ೫

೧೩೪

ಇನಿಯಳೆ ನೀನು ಹೋಗಿ ಕರೆತಾರೆಯೆನ್ನ
ತನುಮನಧನವನೆಲ್ಲ ಒಲಿದು ನಲಿದು ಪೇಳ್ವನ ॥ ಪಲ್ಲ

ಚಿಕ್ಕಂದು ಮೊದಲು ತನ್ನದೆಂಬಿರ್ದವನ
ಅಕ್ಕರಿಂದಲಿ ನೋಡಿ ತಾನು ಲೆಕ್ಕವಿಲ್ಲದೆ ಪೇಳಿದ
ಮುಕ್ಕಣ್ಣ ಪರಮ ಮುರಿಗಿರುದ್ರನ
ಈಗ ಹೋಗಿ ಯೋಗಿ ಭೋಗಿ ರಾಗಿ ಸಾಗಿ ತಾಗಿ ಕರತಾರೆ ೧

ಅಷ್ಟಮದವನೆಲ್ಲ ಮೆಟ್ಟಿ ತಾ ನಿಂದು
ಸುಟ್ಟು ವಿಷಯಪಂಚೇಂದ್ರಿಯ ಅರಿದು ಷಡ್ವರ್ಗಂಗಳ
ಬಿಟ್ಟು ಹರಿವ ದಶವಾಯುಗಳನು
ಗಟ್ಟಿಯಿರುವ ಗರುವ ಹೊರವವರ ಪಯ್ಯಾರದಿ ನೀನು ಕರೆತಾರೆ ೨

ಮೇದಿನಿಗಧಿಕ ಚಿನ್ಮನದುರ್ಗದಿ ನಿಂದು
ಸ್ಥಾನಮಾನ ನೋಡಿ ಕೂಡಿವಿಡಿದು ಜಡಿದು ನಿಂತನ
ಕೂಡಿ ತಾ ಲಿಂಗದೊಳಗೆ ಬೆರೆದನ
ಕರದವಿಷ್ಟಲಿಂಗವರಿದ ಬೆರೆದ ಮರೆದ ಮುರಿಗಿಲಿಂಗವ ೩

೧೩೫

ಎಂತು ಜೀವಿಸಲಾರೆನೆ ಇವನೊಡನೆ
ಸಂತೋಷ ಸುಖವಿಲ್ಲವಾಗಿರೆ ॥ ಪಲ್ಲ

---

* ಈ ಹಾಡಿನ ಬಳಿಕ ಕೆಲವು ನೀತಿವಚನಗಳಿವೆ.

ತಂದೆ ತಾಯಿಗಳ ಬಿಟ್ಟು ನಾ ಮುನ್ನ
ಬಂಧುಬಳಗಗಳ ತೊರೆದು ಸಖಿಯೆ
ಬಂದೊಂದು ಕಾರಣದಲಿ ಇವನೊಡನೆ
ನಿಂದು ಜೀವಿಸಲಾರೆನೆ ಸಖಿಯೆ ೧

ಒಡವೆ ವಸ್ತುಗಳ ಕಾಣೆ ನೋಡಿದರೆ
ತೊಡುವ ವಸ್ತ್ರಗಳಿಲ್ಲವು ಸಖಿಯೆ
ನಡೆ ನುಡಿಯು ತಪ್ಪಿಡುವನು ಕೇಳಿವ
ನೊಡನೆ ಬೆರೆಯಲಾರೆನೆ [ಸಖಿಯೆ] ೨

ತಿಂದುಉಂಡರೆ ಸೇರನು ನೋಡಿ ತಾ
ನಿಂದಿಸುತ್ತೀಗಳೆ ಬೈವನೆ ಸಖಿಯೆ
ಕಂದಿಕುಂದಿಯೆ ಕರೆಸದೆ ಬಳಲಿ ನಾ
ಬೆಂದ ಸುಣ್ಣದೊಲಾದೆನೆ ಸಖಿಯೆ ೩

ಪೂರ್ವಾರ್ಜಿತದ ಫಲದಲಿ ಕೊಂಕಿಂದ
ಇರ್ವ ಬಾಳಿಕೆ ಬಾಳ್ವೆಲಿ ಸಖಿಯೆ
ಗೀರ್ವಾಣನಾದವಿನ್ನು ಶಿವನಿಟ್ಟು
ಸರ್ವಸಂತೋಷ ಬೇಡವೆ ಸಖಿಯೆ ೪

ಗನ್ನಘಾತಕನುಯೆಂದುಯಿರ್ದೆ ನಾ
ಇನ್ನು ಇವನೊಳು ಬೆರೆಯದೆ ಸಖಿಯೆ
ಮನ್ನಿಸೆನ್ನೊಳು ತಿಳುಪಿದ
ಕರದಿಷ್ಟಲಿಂಗ ಸದ್ಗುರುಶಾಂತನು ೫

೧೩೬

ಜಯಮಂಗಳಂ ಸದಾ ಶುಭಮಂಗಳಂ
ಜಯಮಂಗಳಂ ರಜತಗಿರಿ ಸಾಂಬಗೆ ॥ ಪಲ್ಲ

ಎಡದೊಡೆಯ ಮಡದಿಯನು ಮಂಡಿಸಿಯೆ ಮೂರ್ತನಿಗೆ
ಜಡಿವುತಲಿ ಕೊರಳ ರುಂಡಮಾಲಗೆ
ಸಡಗರದ ಜಡೆಯೊಳಗೆ ಗಂಗೆಯನು ಮಡಗಿದಗೆ
ಕಡುಚೆಲ್ವ ಸರ್ಪಕುಂಡಲ ಕರ್ಣಗೆ ೧

ದಶಭುಜವು ಪಂಚಮುಖ ಪಣೆಗಣ್ಣದೇವನಿಗೆ
ಶಶಿಸೂರ್ಯಕೋಟಿ ಧರಿಸಿದ ದೇವಗೆ
ಬಿಸಗೊರಳು ಕರಕಪಾಲವ ಪಿಡಿದು ನಿಂದನಿಗೆ
ಕುಶಲ ಮಿಾನ್ಕಣ್ಬಳೆಯ ಕೈಯಲಿಟ್ಟಗೆ ೨

ಗಜಚರ್ಮಭೂಷಣಗೆ ಭಸಿತಾಂಗವೇಷನಿಗೆ
ತ್ರಿಜಗವಂದಿತ ತ್ರಿಪುರಸಂಹಾರಗೆ
ಸುಜನ ಹೃದಯಪ್ರಕಾಶ ಉಳ್ಳಂತ ದೇವನಿಗೆ
ಭುಜಬಲ ಕರದಿಷ್ಟಲಿಂಗೇಶಗೆ ೩

೧೩೭

ಸೋಜಿಗವನು ಕಂಡೆನು ನೀರೆ ಬಾ
ಸೋಜಿಗವನು ಕಂಡೆನು ಮೂಜಗದಧಿಕನು ಮುರಿಗಿ
ರಾಜನು ತಾನು ಮಾಯವಾಗಿಯೆ ಪೋದುದ ॥ ಪಲ್ಲ

ಮಾರಿನೆರಡು ಸಾವಿರ ಹಂಚಿನ ಕಂತೆ
ಮಾನ್ಯರಿಗೆಲ್ಲ ತಾನುಯಿನ್ನು ಆತೀ
ತಾರುಸಾವಿರ ಜಂಗಮ
ಮೀರಿಯಂರಸನ್ಮತ ಸಂತುಷ್ಟನೆ ೧

ಮೂರುಸಾವಿರಜಂಗಮವಿರಕ್ತಿಗೆ
ಹಾರಯ್ಸಿಕೊಂಡು ತನ್ನ
ಸಾರಾಮೃತವ ನೀಡೆ ಚಿನ್ನನಾಣ್ಯವ ಕೊಟ್ಟು
ದೂರ ತಾ ಹೋದನಲ್ಲೆ ೨

ಎತ್ತ ನೋಡಿದರೆಯತ್ತ ಕಾವಳಕೊಂದು
ರತ್ನ ಬಂದಂತಾಯಿತು
ಸುತ್ತಲೀರೇಳು ಭುವನರಾಯರಿಗೆಲ್ಲ
ಕರ್ತನಾಗಿಯೆ ಪೂಜಿಪ ೩

ತಪ್ಪಿ ನುಡಿವ ಬೆಪ್ಪನ ನೋಡಿಯೆಂ ತಾನು
ಕಪ್ಪು ಕಾಡಿಗೆ ತೆಗೆದು
ತುಪ್ಪ ಹಾಲುಗಳೊಳು ಸಕ್ಕರೆ ಬೆರಸಿದ
ಚಪ್ಪರಿಸಿದಗಾಯಿತೆ ೪

ಭೂಮಿಯೊಳಗೆ ಇಂತಪ್ಪ ಮಹಿಮರನು
ಕಾಮಿನಿ ಅರಿಯನಲ್ಲೆ
ಸ್ವಾಮಿ ಶೇಖ [ರ]ಶಂಭು ಕರದಿಷ್ಟಲಿಂಗವ
ನೇಮದಿ ಕೂಡಿದನೆ ೫

೧೩೮

ಬಂದೆ ಭರದಿ ನಿಂದು ಮೆರೆವ ಇಂದುಶೇಖರನ
ಮಂದಮತಿಯು ಮನುಜರರಿಯರಿಂಥ ಮಹಿಮನ ॥ ಪಲ್ಲ

ನಿಂದು ಮೆರೆವ ನಾರಸಿಂಹನ ಕೊಂದು ಒಗೆದನ
ಸಂದಿಲಿ ಸರಿದೋಡುವ ಹರಿಯ ಚರ್ಮನುಗಿದನ
ಅಂದವುಳ್ಳ ಬೇರನ ನಡುವ ವಾರೆ ಮಾಡಿದನ
ಮಂದಮತಿಯ ದಕ್ಷನ ಶಿರವನರಿದುಬಿಟ್ಟನ ೧

ದೆಸೆಯುಳ್ಳ ಐರಾವತನ ನಡುವ ಮುರಿದನ
ವಸುಧೆಗಧಿಕ ವಾಯುದೇವನ ಕಟ್ಟಿ ಬಿಗಿದನ
ಮಸಣಿ ಮಾರಿ ದುರ್ಗಿ ಚೌಡಿ ಕಿವಿಯ ಕೊಯಿದನ
ನಸಿದು ಓಡುವ ರವಿಕೇತುಗಳ ಮಡದಲೊರಸಿದನ ೨

ಕ್ಷಿತಿಯೊಳಗೆ ಅಧಿಕವಾದ ಕಿರಿಯ ಜಂಬೂರ
ಸತಿ ಪತಿ ಹಿರಿ ಕಿರಿಯರಿಗೆಲ್ಲ ಮತಿಯನೀವನಂ
ಪ್ರತಿಯು ಉಳ್ಳ ಆದಿಮೂರ್ತಿ ವೀರಭದ್ರನು
ನುತಿಸಿ ಕರದಲಿಷ್ಟಲಿಂಗನಿವನು ಮಹಿಮನೆ ೩

೧೩೯

ಕಾಣಬಾರದು ಬಸವರಾಜನ ಸ್ಥಾಣುಗಿಮ್ಮಡಿದೇವನ
ಕ್ಷೋಣಿಯೊಳು ತಾ ಬಂದು ಸಲಹುವ ಏಣಲೋಚನೆ ಪೇಳುವೆ ॥ ಪಲ್ಲ

ದಶಭುಜದವನು ಶಶಿಯ ನೇತ್ರನು ಮಿಸುಪ ಕೆಂಜಡೆಮುಡಿಯನು
ದಶದಿಕ್ಕುಗಳಿಗೆ ದೇವನೀತನು ಬಿಸಗೊರಳ ರುಂಡಮಾಲನು
ಹಸನದಿಂದಲಿ ಕರಕಪಾಲವ ಪಿಡಿದು ತಿರಿವ ದೇವನ
ಕುಸುಮಬಾಣನ ಬೂದಿ ಮೈಯೊಳು ಪೂಸಿಕೊಂಡಿಯೆ ಮೆರೆದನ ೧

ಧರೆಗೆ ಈರೇಳರಿಗೆ ಪ್ರಿಯನು ಕರುಣಿ ಪಂಚದ ಪರುಷನು
ಅರಿವ ಭಕ್ತರಿಗಧಿಕಪ್ರಿಯನು ಶಿರದಿ ಧರಿಸಿಯೆ ಹೊರವನು
ಪರಮಲಿಂಗವ ರೋಮಕೋಟಿಯ ಧರಿಸಿಕೊಂಡಿಯೆ ಮೆರೆದನ
ಪರದ ವೇಶ್ಯೆಗೆ ಪ್ರೀಯವಾದನ ಹರುಷದಿಂದಲಿ ಸಲವನ ೨

ವಸುಧೆಗುತ್ತಮ ಕಿರಿಯ ಜಂಬೂರ ಸ್ಥಾನದಲ್ಲಿಯೆ ಇರುವನ
ಬಸವಪ್ರಿಯನಭಜಕನಾದನ ಸಸಿನೆಯಿಲ್ಲದೆ ಸಲವನ
ಅಸಮನೇತ್ರನ ಅಪರಂಪಾರನ ದೆಸೆಗೆ ಕರ್ತನ ಜೀವನ
ಸುಸರದಿಂದಲಿ ಒಲಿದು ಪೂಜಿಪ ಕರದಲಿಷ್ಟಲಿಂಗೇಶನ ೩

೧೪೦

ಲಿಂಗವೆ ಘನವೆನ್ನಿರೊ ಮಲ್ಲೇಶ್ವರ ಲಿಂಗವೆ ಘನವೆನ್ನಿರೊ
ನಿಮ್ಮ ಕಾಲಕರ್ಮಂಗಳ ಕಳೆವ ಮಲ್ಲೇಶ್ವರ ॥ ಪಲ್ಲ

ಸುತ್ತಿ ಸಾಗರವನು ತಿರುಗಿ ಬಳಲಲೇಕೆ
ನಿತ್ಯ ನೇಮಗಳನು ಮಾಡಲೇಕೆ
ಕರ್ತುಹರನು ನಮ್ಮ ಚೆನ್ನಮಲ್ಲೇಶ್ವರಲಿಂಗವೆ
ಗತಿಯೆಂದು ಸ್ತುತಿಮಾಡಿರೊ ೧

ಖೂಳಸೇವೆಗಳಿಂದ ಕೀಳುದೈವಗಳೇಕೆ
ಬಾಳ ಬದುಕುಗಳ ಕಳೆಯಲೇಕೆ
ಇಳೆಗೆ ಅಧಿಕಲಿಂಗನೀ ಮಲ್ಲೇಶ್ವರ
ಚಿನುಮಯ ಚಿದ್ರೂಪ ಶಿವನೆನ್ನಿರೊ ೨

ಧರೆಗೆ ಕೈಲಾಸ ತೊಗರಸೆ ಮರೆಯಲೇಕೆ
ಶರಿರದೊಳ್ ಕ್ರೋಧ ತುಂಬಿರಲೇಕೆ
ಹರಹರ ಶಂಭುಶಂಕರ ಮಲ್ಲೇಶ್ವರ
ಕರದಿಷ್ಟಲಿಂಗವೆ ಗತಿಯೆನ್ನಿರೊ ೩

೧೪೧

ಬಾರನೆಂಬುದ ನಾನು ಅರಿಯೆನೆ ಅವನು
ದ್ವಾರ[ಕ]ಪುರವ ನೀರೊಳಗೆ ನೆರದಘವನು ಮಾಡಿದ ॥ ಪಲ್ಲ

ಸುತ್ತ ದೇವತೆಗಳನು ಕೂಡಿ
ತಾ ಪೊತ್ತದಿಂದ ಶ್ರೀಪಾದಕ್ಕೆ ಚಿತ್ತದಿಂದಲಿ ಪಿಡಿದನು
ಸುತ್ತಲಿರುವ ಮನು ಮುನಿಗಳು ಎಲ್ಲ
ಚಿತ್ಪ್ರಾನಂದ ಪರಿಪೂರ್ಣಗೆ ಭಕ್ತಿವಿಕ್ತಿಲಿ ನಮಿಸಲು ೧

ಆರ ಮಾತನು ತಾನು ಕೇಳದೆಯೆನ್ನ
ದೂರಮಾಡಿ ಮೀರಿ ನುಡಿದು ಕಾರಿಸಿದನುಂಡನ್ನವ
ಘೋರಪಾತಕದಿ ಶಿವನ ಬೈದು ತಾ ನಿಂದ
ಭರದಿ ಪೋಗಿ ಬಸವೈಗೆ ವಂದಿಸಿ ತಾ ಪೇಳಿದೊ ೨

ಧರ್ಮಸ್ವರೂಪ ತಾನು ಬೇಗದಿ ಹೋಗಿ
ಚರ್ಮಾಂಬರಗೆ ಪರಶಿವಗೆ ಕನ್ನಿಕೆಯ ಕೈಯಿತ್ತನು
ನಿರ್ಮಳಾತ್ಮಕರಿರ್ವರಿದ್ದುದನೊಲಿದು
ಕರ್ಮಹರನು ಕರಸ್ಥಳದಲಿಷ್ಟಲಿಂಗನು ಕೂಡಿದುದ ೩

೧೪೨

ಓಜೆಗಳೆವಳು ನೀನು ಮೂಜಗದರಸಿಂತು
ರಾಜಶೇಖರನು ಮಾಡಿದಿರವನು
ಮಾಜದಿಂದಲಿ ಅನುಮಾನವಿಲ್ಲದೆ ನಿನಗೆ
ನಾಜಸಂವಿಯುತನಿರಸವನು ಕೇಳು ॥ ಪಲ್ಲ

ಮಧ್ಯಸ್ತ್ರೀಯರನೆಲ್ಲ ಎಬ್ಬಿಸಿ ಕಳುಹಿಯೆನ್ನ
ಸಮಶರಕಿಲ್ಲದೆನ್ನಪಿಡಿದ
ಮುದ್ದಿಸಿ ಎನ್ನ ಮುಖಕೆ ಮುಖವ ತಂದು
ತಬ್ಬಿಯೆನ್ನನು ತಾನು ಬಿಗಿಯಪ್ಪಿ ೧

ಒಲ್ಲೆನೆಂದರೆ ತಾನು ಬಲ್ಪಿಂದ ಬಿಡದೆ ತಾ
ಗಲ್ಲವ ಪಿಡಿದು ಮನ್ನಿಸಿದ
ಬಲ್ಲಸ್ಥನವಿದೇನೊ ಬರಿದೆಯು ನಿನ್ನೊಳು ಸರಸ
ಸಲ್ಲದು ನಿನಗಿಷ್ಟು ತರವೆ ೨

ಎಷ್ಟನು ಪೇಳಲು ಸಿಟ್ಟಿನಿಂದಲಿ ತಾನು
ದೃಷ್ಟುಳ್ಳ ಪ್ರಭುಯಿತೆರದ
ಸೃಷ್ಟಿಗೊಡೆಯು ಬಸವೇಶ್ವರ ನೀ ಕೇಳು ಕರದ
ಇಷ್ಟಲಿಂಗೇಶ್ವರ ತಾ ಬಲ್ಲ ೩

೧೪೩

ಇನ್ನು ಚಿಂತಿಸಲೇತಕೆ ಹಹ ಬರದ ಬರಹವನು ಮಿರಲಳವೆ ನೀರೆ ॥ ಪಲ್ಲ

ಬಲವಂತ ನಾಗಾರ್ಜುನ ಕತದಿಂದ ಶಿರವ ಹೋಗಾಡಿಸಿದನೆ ನೀರೆ
ಹುಲುಬೇಡನ ನೋಡಿ ತಾ ಹರಿಯ ಕಾಲಿಗೆಸೆದನು ಬಾಣವ ೧

ಬಾಣಾಸುರನ ತೋಳನು ಕತದಿಂದ ಚಕ್ರವು ಸಂಹರಿಸನೆ ನೀರೆ
ರೇಣುಕಾದೇವಿ ತಾನು ಗಂಡನ ಗೋಳ ಕೊಯಿಸಿದೊಲಿಯಳೆ ನೀರೆ ೨

ದೆಸೆಯುಳ್ಳ ಪಕ್ಷಿ ತಾನು ಭಾಷಿಂದ ಅಸುವನಿತ್ತುದು ದನುಜಗೆ ನೀರೆ
ವಸುಧೆಯೊಳು ಶೂದ್ರಿಕನ ತಲೆಯಿನ್ನು ಮೆರೆಯದೆ ಕಂಚಾಲದಿ ೩

ಪೃಥ್ವೀಪತಿ ವಿಕ್ರಮಶಾಂಕ ಬಯಸಿ ತಾ ಪಾಯಸನ ಸೇವಿಸಿದನೆ ನೀರೆ
ಸತುವುಳ್ಳ ಪುರುಷಮೃಗ ನೂಲಿಂದ ಹಿಡಿಕಟ್ಟಿನೊಳಗಾಯಿತೆ ನೀರೆ ೪

ವಿಧಿಯ ನಿಮಿತ್ತವ ಮಾಡಿ ಶಿವ ತಾನು ತಿರುಗಿದನು ದೇಶಾಂತ್ರ ನೀರೆ
ಇದರೊಳಗೆ ಉಳಿದವರಾರು ಪೇಳಾದ ಕರದಿಷ್ಟಲಿಂಗ ಬಲ್ಲ ನೀರೆ ೫

೧೪೪

ಹಿರಿಯನೆ ನಮ್ಮಯ್ಯ ಹಿರಿಯ ತಾನೆ
ಧರೆಗೀಶ ಮುರಿಗಿ ಇಮ್ಮಡಿ ಗುರುಸಿದ್ಧನು ॥ ಪಲ್ಲ

ಮಂದಾಕಿನಿಯ ತಾನು ಧರಿಸಿದನೆ ಆಂದ
ಗೊಂದವ ಗೌರಿ ವಾಮಾಂಗ ತಾನೆ
ನಿಂದು ಮುನಿಗಳಭೀಷ್ಟವನೆಲ್ಲನೊಲಿದು ತಾ
ಬಂಧುಜನದ ಚಿಂತ ತಾನೆ ೧

ಕೆರೆಯ ಕಟ್ಟೆಗೆ ಮಣ್ಣ ಹೊತ್ತ ತಾನೆಯಿವ
ಹರಿಬ್ರಹ್ಮರುಗಳಿಗೆ ನಿಲುಕ ತಾನೆ
ಕ್ಷೀರಾಬ್ಧಿಮಥನವ ಮಾಡಿ ಕಡೆದು ಚಂದ್ರ
ಸೂರಿಯರನೆಬ್ಬಿಸಿದವನು ತಾನೆ ೨

ತ್ರಿಪುರಸಂಹರವ ಮಾಡಿದನು ತಾನೆಯಿವ
ಕರ್ಪೂರ ಜ್ಯೋತಿಪ್ರಕಾಶ ತಾನೆ
ಕಪ್ಪುಕನ್ನಡಿಯೊಳಗಿರುವ ಸೌಂದ್ರನ
ಒಪ್ಪ ನಂಬಿಳಿಗೆ ತಾ ಕಳಿವಿ ತಾನೆ ೩

ಹೇಮಗಿರಿ ಮುನಿಗಳ ಕತನ ತಾನೆ ಅಲ್ಲಿ
ನೇಮದಿ ಪುಲ್ಲಿಂಗ ವರಿಸಿ ತಾನೆ
ಕಾಮಕ್ರೋಧವನೆಲ್ಲ ಧಾಮಧೂಮವ ಮಾಡಿ
ಪ್ರೇಮದಿ ಪೂಜಿಪನೀತ ತಾನೆ ೪

ನವಖಂಡ ಈರೇಳ್ಭುವನ ಚರಿಸಿ ತಾನೆಯಿಪ
ಭವಭವದುರಿತವ ಕಳೆವ ತಾನೆ
ಶಿವಯೋಗಾನಂದಸ್ಥಾನದಿ ನಿಂತು ಪೂಜಿಪ
ಭವಹರ ಕರದಿಷ್ಟಲಿಂಗ ತಾನೆ ೫

೧೪೫

ಲಲನೆ ಕೇಳು ಶಿವೆ ಶಂಭುಆಲಯದೊಳು ಗಜಮುಖ ಶರಭನು
ಛಲನೆಡ ಷಣ್ಮುಖ ಸಲಹುತ ಶಿವಸಭೆ ಹರುಷದಲಿರುವ ॥ ಪಲ್ಲ

ಅಂದದಿ ಹರಿಯಜ ಸುರರ ಕವಿವನು
ಚಂದದಿ ದಕ್ಷ ತಾ ವಂದಿಸಿ ಶಿವಗೆ
ಇಂದಿವನಿಗೆ ಇಷ್ಟು ಸಡಗರವೆಲ್ಲೆಂದು
ನಂದೆಸೆಯಿಂದಲಿ ಪದವಾಯಿತೆಂದ ೧

ಉಡುಪತಿಧರೆ ತಾನು ಸೊಡರನು ನಲಿದಾಗ
ನುಡಿದು ಪೇಳಿದನಾ ವೀರನಿಗೆ
ಕಿಡಿ ಕಿಡಿ ಛಿಟಿ ಛಿಟಿ ಹುರಿತರಿಯೆನುತಲಿ
ನುಡಿಮಿನಗಿಂದಲಿ ಮಿಡಿದಾ ವೀರೇಶ ೨

ಸುತ್ತಲೀರೇಳ್ಕೋಟಿಗಳವುಳ್ಳ ಭೂತವ
ತತ್ತರತರದಲಿ ದೈತ್ಯೆಯರ
ಭೃಂಹಿತದ ಬುದ್ಬುದ ವೀರನದಟವ
ಶಿರದಕ್ಷನನರಿದಿಷ್ಟಲಿಂಗೇಶ ೩

೧೪೬

ಆರಿಗ್ಯಾರೆಗೆ ಅರಿಯಬಾರದು ಧೀರಬಸನನ ಮಹಿಮೆಯಂ
ನರಸುರರಿಗಳಿಗಗಮ್ಯಮಹಿಮನ ಹರುಷದಿಂದಲಿ ಪೇಳುವೆ ॥ ಪಲ್ಲ

ಅನುಮಿಷಯ್ಯಗೆ ಲಿಂಗವಿತ್ತನ ಕನಕಗಿರಿಪುರವಾಸನ
ಮನವೊಲಿದು ತಾ ಸಿದ್ಧರಾಮಗೆ ಮೂರುನಯನವನಿತ್ತನ
ವಿನಯದಿಂದಲಿ ಮರುಳಶಂಕರಗೈಕ್ಯಪದವನನೊಲಿದನ
ಮಾಣದಿಳೆಯೊಳು ರುದ್ರಗಭಯವನಿತ್ತು ಕಳುಹಿದ ದೇವನ ೧

ಚೋಳಿಯುಂಡದ ಕ್ಷೀರ ವಿಕ್ಕುದ ಲೀಲೆಯಿಂದಲಿ ಸವಿದನ
ತಿಳಿದು ಅಮ್ಮವ್ವೆಯ ಮೊಲೆಯನು ನಲಿದು ಉಂಡ ಮಹಾತ್ಮನ
ಸೆಳೆದು ಓಡುವ ಅಕ್ಕಮಹಾದೇವಿಗಭಯವನಿತ್ತನ
ನಳಿನಮುಖಿ ಸತ್ಯಕ್ಕರೊಳು ತಾ ಸರಸವಾಡಿಯೊಲಿದನ ೨

ಧರೆಯ ಈರೇಳರನು ಸಲಹಲಿ ವೃಷಭರೂಪದಿ ಬಂದನ
ಪರಮಭಕ್ತರ ಪುಣ್ಯ ಪಂಚದ ಪರುಷಕಣಿಯಾದ ದೇವನ
ಹರಿಯಜರು ಮುನಿ ನರರು ದೇವತೆಗಳನು ರಕ್ಷಿಪ ದೇವನ
ಕರಣಗುಣ ಕಲ್ಯಾಣದಲ್ಲಿಯೆ ಪ್ರಭುವ ಪೂಜಿಸಿ ಮೆರೆದನ ೩

ಸತ್ಯ ನಿತ್ಯರ ಭಕ್ತ ಬಾಂದರ ನಿತ್ಯ ದಾಸೋಹ ಸವಿವನ
ವಿತ್ತದಿ ಕರಕರಗಿಪ್ಪರ ಪೊತ್ತದಿಂದುರುಹಿದಾತನ
ಒತ್ತಿ ಬಿಜ್ಜಳರಾಯಪದವಿಯ ಸತ್ವದಿಂದಲಿ ಅಳಿದನ
ಭೃತ್ಯತನದಲಿ ಲಿಂಗಜಂಗಮಗಳ ವಿನೋದವ ಪಡೆದನ ೪

ಧರೆಗೆ ಜಂಬೂದ್ವೀಪವೆನಿಸುವ ಬಸವ ನಂದಿಯಪುರದನ
ಧರೆಯ ಬಂಡೆಯನೊಡೆದು ಭರದಲಿ ನಿಂದು ನೆಲಸಿಹ ದೇವನ
ಅರಿದು ಭಕ್ತಮಹೇಶ್ವರೆಲ್ಲರು ನಲಿದು ಪೂಜಿಪ ದೇವನ
ಅರಿದು ಪೇಳಿದ ಬಸವ ಘನವನು ಕರದಲಿಷ್ಟಲಿಂಗೇಶನು ೫

೧೪೭

ಕಂಡೆನು ಅಕ್ಕ ಕಂಡೆನು ಭೂಮಂಡಲಕಧಿಕ ಕಲ್ಲೇಶ್ವರ ಲಿಂಗವ ॥ ಪಲ್ಲ

ಕರೆಕಂಠದೇವನು ಮರಣವಿದೂರನು
ದುರಿತ ಪಾಪಂಗಳ ಕಳೆವವನು
ಧುರಧೀರ ಮಂತ್ರಿಮಾನ್ಯರ ಕರಿತುರಗವ
ನರಿದು ಕೊಡುವ ಕಲ್ಲೇಶ್ವರಲಿಂಗನ ೧

ಸತ್ಯಸದಾಚಾರಿ ಸಕಲರಿಗುಪಕಾರಿ
ನಿತ್ಯವಿನೋದಿ ನಿರ್ಮಳಾಕಾರಿ
ಕರ್ತೃ ತಮ್ಮನು ಪೂಜಿಸುವ ಮಹಿಷುರನು
ಆರ್ತಿಯಿಂದಲಿ ಸಲಹುವ ಕಲ್ಲೇಶ್ವರ 2

ಸಂಗನ ಬಸವನ ಮುಂಬಿನಲಿರುವನ
ಜಂಗುಳಿದೈವಕೆ ಮಿಗಿಲಾದನ
ಹಿಂಗದೆ ಮುಗಳಿಪುರದ ಸ್ಥಾನದಲ್ಲಿ ತಾ
ಕಂಗಳಿಗತಿಪ್ರಿಯ ಕರೆದಿಷ್ಟಲಿಂಗನ* 3

೧೭೮

ನಿನ್ನ ಪಾದವೆ ಗತಿಯೆಂದು ಪೂಜಿಪರಿಗೆ
ಉನ್ನಂತ ಪದವೀವನೆ
ನಿನ್ನ ಪಾದ ದಯದಿಂದೆನ್ನ ಸಂಶಯ
ಚಂದದಿ ಹರದು ಪೋಪುದೊ ಸಿದ್ಧಲಿಂಗೇಶ ॥ ಪಲ್ಲ

ಸಾರಾಮೃತದ ಸವಿಯ ವಾಕ್ಯಗಳಾಡಿ
ತೋರಿ ಲಿಂಗಕೆ ಸುಖವ
ಮೀರಿ ಮಿಕ್ಕವರಿಗೆ ತೋರಿ ನಿಮ್ಮನಾಶದಿ
ದೂರ ಮಾಡಿಯೆ ಇಳೆಗೊತ್ತಿ ಸಿದ್ಧಲಿಂಗೇಶ 1

ಕಮಲಕೇಶವಪೂಜಿತ ಕಾಮಸಂಹರವು
....ತಾತ ಶಿರವರಿದನೆ
ವಿಮಲ ತಾಂಡಗಳಿಂದ ಕ್ರಮದಿ ಜನರನೆಲ್ಲವು
ಮಾಯೆಂದಿಂದಲಿ ರಕ್ಷಿಪೆ ಸಿದ್ಧಲಿಂಗೇಶ 2

ಸುತ್ತಲೀರೇಳ್ಭುವನವ ಚರಿಸಿ ನಿಮ್ಮಾ
ಚಿತ್ತಲಿಂಗದೊಳರಿತೊ
ಸತ್ಯ ನಿತ್ಯವಾಗಿಹ ಅನಿಮಿಷಪುರದಲ್ಲಿ
ಕರ್ತೃವಾಗಿಯೆ ಪೂಜಿಪೆ 3

---

* ಈ ಹಾಡಿನ ಬಳಿಕ ಕೆಲವು ವಾರ್ಧಕಷಟ್ಪದಿಗಳಿವೆ.

೧೪೯

ಕಂಡೆನು ಶ್ರೀಪಾದವ ಭೂ
ಮಂಡಲಕಧಿಕ ತಾಳ್ಗುಂದದ ವೀರನ ॥ ಪಲ್ಲ

ಸುತ್ತಿದ ಚಿಮ್ಮುರಿ ಸುಲಿಪಲ್ಲು ಸುಗುಣನ
ಮುತ್ತಿನ ಚೌಕುಳಿಯಿತ್ತಾತನ
ಕತ್ತಿ ಕರಾಚೂರಿ ಖಡ್ಗವ ಪಿಡಿಕೊಂಡು
ಬತ್ತೀಸಾಯುಧ ಮೊತ್ತದಲ್ಲಿರುವನ ೧

ಉಡುಪತಿ ಸೂರ್ಯನ ಮುಡಿಯೊಳುದಿಸಿದನ
ಮಡದಿ ಬೆನ್ನೊಳು ತಾ ನಡೆಸಿದನ
ಕಡುಗೋಪದಿಂದಲಿ ನಡದು ದಕ್ಷಪುರ
ಸಡಗರದಲ್ಲಿ ಧುಮಿಕಿದ ವೀರೇಶ ೨

ಬಾಳ ಸಂಭ್ರಮದಲಿ ಮೆರೆವ ಅಸುರರನಂ
ಮೇಳದಲ್ಲಿರುವ ಭೂತಕ್ಕೆ ಹೇಳಿ
ಘೂಳ ಧಾಮಧೂಮ ಆದಟ ಅದ್ಭುತದಿ
ಖೂಳ ದಕ್ಷನ ಶಿರ ಕಡಿದಿಷ್ಟಲಿಂಗನ ೩

೧೫೦

ಅವರ ಬಗೆಯು ಇವರ ಬಗೆಯು ಎನ್ನಬೇಡಿರಿ ಈ
ಭುವನವ ಚರಿಸುವ ಪ್ರಭು ಒಬ್ಬನೆನ್ನಿರೊ ॥ ಪಲ್ಲ

ಹಂಸಿಯು ಛಾಯಮಾಯಗಳಿಂದ ವಸುಧೆಭಕ್ತರ ಮನೆಗೆ ಹೋಗಿ
ಕುಶಲದಲಿ ಅಜ್ಞಾನವನು ತೋರಿ ಹೇಳುವರ
ಕುಸಿದು ಕುಗ್ಗಿದವರಿಗೆ ಬತ್ತೀಸಾಯುಧದಿಂದ ಮುಂದಲೆಯು
ರೋಷದಿಂದ ನಮ್ಮ ಶಿವನು ಘಾಸೆ ಮಾಡುವನು ೧

ಕೊನಬು ಆಂದಗಳನು ನೋಡಿ ಭಕ್ತ ಅಯ್ಯನೆಂದು
ತನುಮನದ ನಿಲುಗಡೆಯು ಘನವ ಕಾಣದೆ
ಸನುಮನ ಸಂತೃಪ್ತಿಯಿಂದವೊಲಿದು ಪೂಜಿಸುವವನ
ಘನಮಹಿಮ ರುದ್ರ ತಾನು ಹಳಿದು ಕಳೆವನು ೨

ಭಕ್ತರೂಪ ನೋಡಲೇನು ಮುಕ್ತ ಜಂಗಮರುಚಿಯು ಬಯಸಿ
ಪ್ರೋಕ್ತವಾಗಿ ಇಳೆಯೊಳಗೆ ಬಾಳಲೇನುಂಟು
ಮುಕ್ತಜಂಗಮ ವಿರಕ್ತಿ ಭಕ್ತ ಭಕ್ತನು ತತ್ವದಿಂದ ಏಕದಲ್ಲಿ
ಶಕ್ತರಾಗಿ ಮುಕ್ಕಣ್ಣಗೆ ಯೋಗ್ಯರಾದರು ೩

ಕಥನ ಮಥನಗಳಿಂದ ಸತುವುಳ್ಳ ವಿರಕ್ತರು ದು
ರಿತಧಿಕ ಘನಲಿಂಗ ಜಂಗಮವ ಹಳಿವುತ್ತ
ಕ್ಷಿತಿಗೆ ರಾಜಮನೆಗಳಲ್ಲಿ ವಿತರಿಸಿ ನುಡಿವ ಮರುಳರ
ರತನಮಾಣಿಕ ಹರಸು ಒಪ್ಪ ಕಾಣಿರೊ ೪

ಕ್ಷಿತಿಯೊಳಧಿಕ ಜಂಬೂದ್ವೀಪದೊಳಗೆ ಕೈಲಾಸದಿಂದ
ಪ್ರತಿಮ ಮೆಟ್ಲೇರಿ ಹಿರಿಯ ಮಠದ ಶಿವಲಿಂಗಾ
ಹುತನಯನ ಕರುಣದಿಂದ ಚರಿತ ಮುಗುಳಿಪುರದ
ಮಠದ ರುದ್ರಗೊರೆದು ಕರದಲಿಷ್ಟಲಿಂಗ ಪೇಳಿದನು ೫

೧೫೧

ನಿಂದು ನೋಡಿ ಮಂದಾಕಿನಿಯ
ಕಂದುಗೊರಳ ಶಿವನ ಸಭೆಯು ಮುಂದೆ ನಿಂದನ ॥ ಪಲ್ಲ

ಒಡೆಯ ಶಂಭು ನೀವೆಲ್ಲ ಕಿಡಿಯು ಸಿಡಿದು ನಿಂತನ
ದೃಢವುಳ್ಳ ಭದ್ರಕಾಳಿಯ ಒಡನೆ ಬೆರೆದನ
ಕಡುಗೋಪದಲಿ ಉಗ್ರಕರ ಭಾಷೆ ಬೇಡಿದನ
ಸಡಗರದಲಿರುವ ದಕ್ಷನ ತಲೆಯ ಚಿವುಟಿದನ ೧

ಕತ್ತಿ ಖಂಡೆಯ ಬಾಣ ಬತ್ತಿ ಗಂಡುಗೊಡಲಿನ
ಸುತ್ತಿಕೊಂಡು ದಟ್ಟಿ ಕಾಸೆ ಬಿಗಿದು ನಿಂತನ
ಮುತ್ತಿನ ಚವುಕಳಿಯನಿಟ್ಟು ಮಡದಿಗೊಪ್ಪಿದನ
ಕರ್ತೃ ಶರಭ ಮುನ್ನೂರರುವತ್ತಾಯುಧ ಪಿಡಿದನ ೨

ಧರೆಯೊಳಧಿಕ ಕಣಸೋಗೆಯ ಪುರದ ವಾಸನ
ಒರೆದ ಭಕ್ತಗಣಂಗಳ ಪೊರೆದು ಸಲವನ
ಹರಗೆ ಅಧಿಕ ಮೋಹದ ಪುತ್ರ ವೀರಭದ್ರನ
ಕರುಣಿ ಕರದಲಿಷ್ಟಲಿಂಗನೀತನ ಘನವನು ೩

೧೫೨

ನೋಡಿದಾ ತಂಗಿ ನೋಡಿದಾ
ರೂಢಿಗೆ ಮಿಗಿಲಾದ ಕಣಸೋಗೆ ಬಸವನ ॥ ಪಲ್ಲ

ಸ್ಥಿರಶಾಂತಿಕಳೆಯು ಘನ ಕರುಣ ಕಟಾಕ್ಷನ
ಧರೆಯು ಈರೇಳರ ಸಲಹುವನ
ಧುರದೊಳು ಅಂಧಕಾಸುರನ ಉದರವನು
ಭರದಿಂದ ಸೀಳಿ ತಾ ತ್ರಿಪುರದೊಳೊಗೆದಸ ೧

ನೆಲ ಮುಗಿಲುಗಳ ಜಲಪ್ರಳಯೊಳಗಣ
ಕಲಿಯುಳ್ಳ ಪ್ರಮಥರನುಳುಹಿದನ
ಒಲವು ಶಿವನ ಕೃಪೆ ನಲಿದು ತು ಕೈಕೊಂಡು
ಗೆಲವಿಂದ ಕಲ್ಯಾಣಕಿಳಿದಾತನ ೨

ಮಂಡಲಕಧಿಕನು ಮಾನ್ಯ ಮಾರ್ತಾಂಡನು
ಲಂಡತನದ ಬಿಜ್ಜಳರಾಯನು
ಒಂಡುಭೂತವ ಮಾಡಿ ಶರಣರನೊಳಕೊಂಡು ಪ್ರ
ಚಂಡಶಿವನ ಶ್ರೀಪಾದಕೆ ಯೋಗ್ಯನ ೩

ಸಿತಕಂಠಭಕ್ತನುನ್ನತ ಕಾಯುಮಹಿಮನು
ಮತಿಯು ಅಪ್ಪಣ್ಣಗೆ ಬೆರದಾತನು
ಸತಿಪತಿಯಿರ್ವರು ಅತಿಪ್ರಿಯದಿಂದಲಿ
ಗತಿಯೆಂದು ಜಂಗಮಪೂಜಿಪ ದೇವನ ೪

ಮೇದಿನಿಯೊಳಗೆ ಅಧಿಕವಾದ ಕಣಸೋಗ
ನಾದಿ ಮರುಡಿಯು ಬಸವಲಿಂಗನ
ಭೇದಿಸಿ ಸಕಲರು ಪೂಜಿಪದೇವ
ನಾದಿ ಕರದಲಿಷ್ಟಲಿಂಗಸಂಗನನ ೫

೧೫೩

ಘನ ಗುರು ಹೃದಯಾಮೃತಸಾರೆ
ತೃಣಮು ಬಾರೆ ನಯನ ತ್ರಿಪುರೆ ಪರ್ವಸಂಹಾರೆ ॥ ಪಲ್ಲ

ಆದಿಯ ದೊರೆಯೆ ಅನಿಮಿಷ ಬೆರೆಯೆ
ಭೇದಿಸಿ ಮಾರ್ಗವ ಜರಿಯೆ
ವಾದ ಹರಿಯೆ ಪಾದವ ಮರೆಯೆ
ಶೋಧಿಸಿ ಸ್ತುತಿಪರ ಕರೆದಲಿ ಬೆರೆಯೆ ೧

ರಮಣಿತಕಾಯ ಮೋನಕಿದಾಯ
ಜಮದಗ್ನಿಯೊಳು ಸಹಾಯ
ಕುಮರಜನಾಯ ತ್ರಿಪ್ರುರ ಕೀಲಾಯ
ಅಮಮ ಗಂಗೆಯೊಳು ಸಾಹಾಯ ೨

ಫಣಿಕುಂಡಲೀಶ ಕ್ಷೀಣಸಾಸಕ
ರೇಣು ಚರ್ಮಾವ ಕಪರ್ದಿನೀಶ
ಕಣಿಪರುಷೇಶ ಶ್ರೀ ಚೆನ್ನಬಸವೇಶ ದ್ಯು
ಮಣಿಪ್ರಭೆಯುಳ್ಳ ಇಷ್ಟಲಿಂಗೇಶ* ೩

೧೫೪

ಕಂಗಳಿಗೆ ಅತಿಪ್ರಿಯ ಕಂಗಳಿಗೆ ಪ್ರಿಯನನ
ಇಂಗಿತವನರಿವವನ ಹಿಂಗಿ ನಾ ನಿಲ್ಲಲಾರೆ ನೀರೆ
ಮಂಗಳಾಕಾರನನು ಹಿಂಗ ಕರಸ್ಥಳದಿಷ್ಟ
ಲಿಂಗ ಮೊಗದೋರೊ ಬೇಗಯೀಗ ॥ ಪಲ್ಲ

ಬಾಲಪ್ರಾಯದಿ ತಾನು ಲೀಲೆಯಿಂದಲಿ ನೋಡಿ
ಕಾಲ ಕಂಠಕವನಳಿದ ತಿಳಿದ
ತೇಲಿಮೇಲಾಡುತಲಿ ಗಾಲಿಯಂದದಿ ತಾನು
ಗಾಲು ಮೇಲನೆ ಮಾಡುತ ಬರುತ
ಬಾಲೆ ಸ್ತ್ರೀಯಳೆ ಕೇಳು ಮೂಲಪ್ರಣವಂ ಸ್ವತಾ
ಲಾಲ್ಯಗಾಣದೆ ಕಾಣೆ ಜಾಣೆ ೧

---

* ಈ ಹಾಡಿನ ಬಳಿಕ ಇಷ್ಟಲಿಂಗೇಶ್ವರ ವೃತ್ತಗಳಿವೆ.

೧೪೨

ಬೊಗರಿಪೊಲೆಯೊಳಗೆ ಓ ಎಂದು ಘನವನು ನೀರೆ
ನಗುತ ಬೆರವವನು ಕಾಣೆ ಜಾಣೆ
ಮೃಗಮದಗಂಧಿ ಮುಕ್ತ್ಯಾಂಗನೆಯೆ ನೀ ಕೇಳು
ಜಗಜಗಿಸಿ ತೋರ್ಪ ಹೊಳೆವ ಸುಳುಹ
ನಿಗಮಾಗಮ ನಿಲುಕದನು ಸುಗುಣನಿಧಿ ಸಾಗರನು
ಅಗಲಿ ತಾ ಹೋದನಿಂದು ಬಂದು ೨

ಮದನಬಾಣದಿ ತನು ಕುದಿಕುದಿದು ಬೇವುತಿದೆ
ಚದುರ ಮೊಗದೋರೊ ಬೇಗಯೀಗ
ಪದುರ ಚದುರಿನ ಹದಿನೆಂಟುಕಲೆಗಳ ಬಲ್ಲ
ಮದನಹರ ಭಸಿತನಿಟ್ಟದಿಟ್ಟ
ಒದಗಿಹ ಮಹಿಮರಿಗೆ ಕರ್ತನಾಗಿಯೆ ಬಂದು
ಕರುಣೆ ಕರದಿಷ್ಟಲಿಂಗಸಂಗ ಬೆರೆದ ೩

೧೪೩

ನೋಡನೆ ಇಷ್ಟಲಿಂಗೇಶ ನೋಡನೆ ಎನ್ನೊಡ
ಗೂಡನೆ ಸವಿ ಮಾತಾಡನೆ ಸರಸದಿ ಬೆರೆಯನೆ
ಸಕ್ಕರೆ ಸವಿವನನೊಲಿದು ನೀ ಹಿಡಿತಾರೆ ಲಲನೆ ॥ ಪಲ್ಲ

ಕಂಗಳಿಗತಿಪ್ರಿಯ ಲಿಂಗಪೂಜೆಗೆ ಘನ
ಶೃಂಗಾರ ಮೈಯೊಳು ಗಂಧಲೇಪನನ
ಮುಂಗುರುಳನು ನೇವರಿಸಿ ಮುಖಕೆ ಮುಖ
ಭೃಂಗಕಮಲಕೆರಗುವ ಪರಿಯುವನ ೧

ಚಿಕ್ಕಂದು ಮೊದಲಿಲಿ ತೆಕ್ಕೆ ಕೂಡಿದನ
ಹೊಕ್ಕು ಸ್ತನವನು ಬಿಗಿದು ಹಿಂಗಿದನ
ಅಕ್ಕರಿಂದಲಿ ಹರಶರಣರ ಬೆರೆದು
ನಕ್ಕು ಸರಸದಿಂದ ಕರದೊಳಿರುವನ ೨

ಇಂತಪ್ಪ ಶಾಂತಿ ಸ್ಮರಣೆಯುವನ
ಎಂತು ಬಿಡುವೆ ನಾ ತರಣಿಪ್ರಭೆಯುನ
ಸಂತೋಷದಿಂದಲಿ ನಲಿನಲಿದು
ಕಾಂತಿಷ್ಟಲಿಂಗನು ತಾ ನಿಂದು ಕೂಡಿದನೆ ೩

೧೫೬

ದಯಮಾಡೊ ನೀನು ಲಿಂಗಯ್ಯ
ದಯಮಾಡೊ ದಾಕ್ಷಣ್ಯಸ್ವಯಂಶಂಭುಶಂಕರ
ನಯನ ಘನವ ಶಾಂತಿ ಸ್ಮರಣೆ ಲಿಂಗಯ್ಯ ॥ ಪಲ್ಲ

ಕಿಡಿಗಣ್ಣುಷ್ಣಕ್ಕೆ ತಾಳ್ದು ಅರಿತು ನೀ
ಜಡೆ ಮಂದಾಕಿನಿಯೊಳಿಟ್ಟೆ
ಮಡದಿ ಪಾರ್ವತಿ ಕಂಡು
ಗುಡಿಗುಡಿಸುತ ಬೇಗ
ತಡೆಯದಿರ್ವರ ಒಡನೆ ಬೈದು
ದೃಢದಿ ಪಾದವಿಡಿದಳು ೧

ನೆಲೆಯ ಬಲ್ಲವನೆ ನೀನು ಲೀಲಾಕ್ಷದಿ
ಬಲುಪವಾಡವ ತೋರಿದೆ
ಒಲುಮೆಯಿಂದಲಿ ಗುಂಡಬ್ರಹ್ಮಗೆ ಗೆಲಗೊಟ್ಟು
ಕಲಿಗಳೊಳು ಗಣಪತಿಯ ರಾಯನ
ನೊಲಿದು ಭಾಗ್ಯಂ ಮಿಡಿಸಿದೆ ೨

ವರಾ[ಹಿ]ನದಿಯ ಸ್ಥಾನದಿ ಚರವ ಮಾಡಿ
ಕರಣದಿಷ್ಟಲಿಂಗನೆ ಕರುಣದಿಂದಲಿ ನೀನು
ಮರಣಸಂಗತಿಯೆತ್ತರಣೆ ಕೋಟಿಕಿರಣತೇಜನೆ
ಸರಸದಿಂದಲಿಯೆನ್ನ ಕರದೊಳು ನಿಂದುಯೆನ್ನನು ಸಲಹಿದೆ ೩

೧೫೭

ಅಗಲಿರಲಾರೆ ಲಿಂಗೇಶನ ತಾನು
ಮುಗುಳ್ನಗೆಯಿಂದಲಿ ಬಗೆಬಗೆ ಛಾಯಮಾಡಿ
ಸೊಗಸುಗಾರನು ಕರದಿಷ್ಟಲಿಂಗೇಶನು ॥ ಪಲ್ಲ

ಹುಟ್ಟಿದಾರಾಭ್ಯದಿ ಕರ್ತನು ಎನ್ನ
ತೊಟ್ಟಿಲ ಶಿಶುವಾಗಿ ಸಲವನು
ಮುಟ್ಟಿಯೆನ್ನೊಳು ಕರವಿಡಿದು ನಾಡಿಯ ನೋಡಿ
ಮೂರು ದೋಷಗಳುಂಪುಗ್ಗಳವಾಗಿಯಿರುವದ
ಸಾರಿ ಹೇಳಿಹೆ ತನುಮುದ್ರೆಯ
ಊರಿಗೂಳಿಗೆಯಿತ್ತು ಅದುಯೆನ್ನನು
ಸಾರದೆ ಕಡೆಗಾಣದೆ ದೂರದಿ ಪೋಗಿ ತಾ ಗಾರುಮಾಡಿದನೆ ೧

೧೪೪

ಚಿಕ್ಕಂದು ಚದುರಿನ ಪೂಜ್ಯದ ಆವ
ಮುಕ್ಕಂಡ ಕಣ್ಣದೆ ಧರಿಸಿದ
ಲೆಕ್ಕವಿಲ್ಲದೆಯೆನ್ನ ತೆಕ್ಕೆಯೊಳವಚಿಯೆ
ಸೊಕ್ಕಿನ ಆನೆಯು ಜ್ವರತಾಪಂಗಳನೆಲ್ಲ
ಸಾಸದಿ ನಿಲಿಸಿಯೆ ಬಾಸೆನಂಬಿಗೆಯಿತ್ತು
ವಾಸವಾಗೆನ್ನೊಳು ಮಿಸಲಳಿಯದಂತ
ವಾಸ್ಯದ ಕಾಯುವ ವೇಷ್ಯತನುವಿನ
ರಾಸ್ಯವ ಸವಿದುಂಡವ ಮೋಸಮಾಡಿದನೆ ೨

ರಾಜಾಧಿರಾಜಶೇಖರನು ತಾನೆ ಈವ
ಮೂಜಗಗಧಿಕದಿ ಪೂಜಿತನೆ
ಓಜೆಯಿಂದಲಿ ತಾನು ಸೋಜಿಗ ಮಾಡಿದ
ಭೇದಿಸಿಯೆನ್ನನು ಚಿನ್ನ ಒರೆದೊರೆದು
ಸಾಧಿಸಿ ಭೇದವನರುಹಿಯೆನ್ನೊಳು ತಾನು
ವೇದಾಗಮವದಲ್ಲಿ ನಾಡಿವಿಡಿದು ತೋರಿ
ಬೋಧಾಮೃತದೊಳು ಘೃತಜೇನು ಬೆರೆದಂತೆ
ಮೂದೇವ ಕರದಿಷ್ಟಲಿಂಗನ ಕೂಡಿದನೆ ೩

೧೫೮

ಕಣ್ಣಿಟ್ಟು ನೋಡಲಿಬೇಡ ಪರ
ಪೆಣ್ಣಿನ ಸಂಗವ ಮಾಡದಿರಣ್ಣ ॥ ಪಲ್ಲ

ಕಡೆಗಣ್ಣ ಮಿಂಚು ಹೊಳೆವಳ ಕೂಡೆ
ನಡೆವ ಗಮಕಿನ ಆನೆಯು ನಡೆಯುವಳ
ಬೆಡಗಿನ ನಿರಿಕವಳಿಗಳ ಬಹು
ಸಡಗರ ತಾವರೆಮೊಗ್ಗೆಪೋಲೆಯುಳ ೧

ಸಸುಮುಸುಕಿನ ಬೆಡಗಿನಳ ಒತ್ತಿ
ಕುಶಲದಿ ಬೆಳುನಗೆ ಬಾಯು ತೆಗೆವಳ
ಮಿಸುರದಿ ಮೈಮುರಿವವಳ ಬಳಲಿ
ಉಸುರುಗರೆದು ಚಾರಿವರಿವ ನಾರಿಯುಳ ೨

ಹೊಳೆವ ಪೊಂಬಾಳೆ ಬಳುಕೋಳ ಬೇಗ
ಚಳಬಳಿಕಿಂದಲಿ ಬಾಯ ಮಾತನಾಡುವಳ
ಒಳವರಿಯದೆ ಸಂಗ್ಪಾಡವಳ ಮತ್ತೆ
ಕಳೆಯುಳ್ಳ ಕರದಿಷ್ಟಲಿಂಗನೊಲ್ಮೆಯಳ ೩

೧೪೯

ಗುರುಮರಿಯುವ ನೀಚ ಕೇಳು ಮತ್ತು
ನರಲೋಕ ದೇವಲೋಕಕೆ ನೀನು ಹೊರಗು ॥ ಪಲ್ಲ

ಭಾಷೆ ಪ್ರಕಟದಿ ಬಾಳ್ವೆ ನೀ ಕೇಳು
ಮೋಸ ಮಚ್ಚ್ಚರ ಮನದೊಳು ತಾಳಿ
ಲೇಸವೊಳ್ಳಿತವ ನುಂಗಿಯೆಲ್ಲಮಾನ್ಯರು
ದೂಷಕರ ಬಾಳ್ವೆ ಬೇಡ ಮನುಜ ೧

ಕಿಂಚಿತವ ಭೋಗಗಳಿಗೆ ಹಿಂದಾವ ಜಾತಿ ಕುಲವೊ ನೀ
ಬಂದುದ್ದಂಡ ಶಿವಭಕ್ತರೊಳಗೆ ಬೆರೆದು
ಸಂದ ಶಿವಶರಣರಲ್ಲಿ ಭಾಷೆಗಳಾಡಿ
ನಿಂದು ತಪ್ಪಲಿಬೇಡವೊ ಮನುಜ ೨

ಕಿಂಚಿತದ ಭೋಗಗಳಿಗೆ ಚಲಗೆಟ್ಟು
ಹಂಚುಸದೆಯಾಗಬೇಡಾ ನೀನು
ಪಂಚಮಹಾಪಾತಕವನು ಅಳಿವ ನಿನ್ನ
ಸಂಚಲವವಿಷ್ಟಲಿಂಗ ಮನುಜ ೩

೧೫೦

ಕೇಳು ಕೇಳು ನೀ ತರಳಬಾಲೆ ಶಿವನು ತಾನು
ಬಾಳ್ವೆ ಬದುಕು ಮಾಡ ತಿರಿದು ಉಂಡ ಊರ ಊರ ॥ ಪಲ್ಲ

ನರಲೋಕ ನಾಗಲೋಕ ದೇವಲೋಕ ಸುರರಿಗೆಲ್ಲ
ಮರಣ ಉತ್ಪತ್ಯ ಕಾರಣಜನು ಅಕ್ಕ ಕೇಳು
ತರಣಿ ಕೋಟಿ ಚಂದ್ರಸೂರ್ಯರನು ಧರಿಸಿಕೊಂಡು
ಹರುಷದಿ ಭಿಕ್ಷಯೆನ್ನೆ ಪಾತ್ರೆ ನೀಡಿ ಬ್ರಹ್ಮ ತಾನು ೧

ಹದಿನಾರುಸಾವಿರ ಹೆಂಡರಿಂದ ದ್ವಾರಪುರದಿ
ಮುದದಿ ಶಿವನ ಶ್ರೀಪಾದವನ್ನು ಕೃಷ್ಣ ಒರೆಸಿ
ಮದಹರ ಮೆಚ್ಚಿತ್ತ ಕೈಲಾಸವನ್ನು ಇಳಿದು ಬೇಗ
ಒದಗಿ ತಾ ಬೇಗ ನಿಂದು ಭಿಕ್ಷೆಯೆನ್ನೆ ಅರ್ಧದೇಹನಿತ್ತ ೨

ಅಕ್ಕ ನೀನು ಕೇಳು ಶಿವನಿಗೆಯು ಅರ್ಧಾಂಗಿ ನೀನು
ಮುಕ್ಕಣ್ಣ ಕೋಪಕ್ಕೆ ಶಾಂತಿ ನೀನು ಕೇಳು ನೀನು
ಎಕ್ಕಸ ಗುಣದವ ವೀರ ನಿನ್ನ ಮಗನು ಕಾಣೆ
ಒಕ್ಕಳಕೂಳ ಬೆನವ ನಿನ್ನ ಮಗನೆ ಅಕ್ಕನೆ ಕೇಳು ೩

ತಂಗಿಯೆ ನೀನು ಕೇಳು ಶಿವನಿಗೆಯು ದರಿದ್ರದವ
ಹಿಂಗದಲೆ ತಲೆಯೋಡ ಹಿಡಿದು ತಾನು ತಿರಿದು ಉಂಡ ವೀ
ರಂಗಾರ ಬದುಕು ಭಾಗ್ಯವಿಲ್ಲ ನೋಡಿದರೆ
ಶೃಂ[ಗ]ಭೂಷಣ ಹಿಂಗದಿರುವ ತಂಗಿ ಕೇಳು ೪

ನಾನು ನೀನು ಶಿವನ ಏಕದಲ್ಲಿ ಶ್ರೀಪಾದವನ್ನು
ಮಾನ ಶಿವಶರಣರ ಒತ್ತುಗೂಡಿ ಪೇಳುತಿರೆ
ಜ್ಞಾನಿ ಬಸವಯ್ಯ ಸಾಕ್ಷಿಯಾಗಿಯಿರುವ ನಮ್ಮ
ಭಾನುಕೋಟಿಕಳೆಯವಿಷ್ಟಲಿಂಗ ಕೂಡಿ ಬೆರೆದು ೫

೧೬೧

ಶಂಭು ಒಬ್ಬನೆ ಅಧಿಕನು ಎಲೆಲೈಲಲಲೊ
ಶಂಭು ಒಬ್ಬನೆ ಅಧಿಕ ಮುನ್ನಜ ಮಾರಿಯುಳಿವ
ದಂಬರದ ಕಾಯ ಶಿರವೆ ಎಲೆಲೊ ॥ ಪಲ್ಲ

ವೇಳ್ಯ ಗುಂಡಾದನ ಹಾಳಾಯ್ತು ಶ್ರೀಪುರವು
ಕೋಳುರಾಜ್ಯವು ಬಿಟ್ಟು ಹರಿಶ್ಚಂದ್ರರಾಯ ಮ
ತ್ತಾಳಾದ ಚಂಡಾಲಗೆ ಎಲೆಲೇಲಲೊ
ಜಾಳಸ್ತ್ರೀಯುಳ ಕೆಣಕಿಗೆ ಒಳವನು ಹೇಳಿ
ಬಾಳಿಕೆಯಲಿಪ ಶಿರವ ಪೋಗಾಡಿ ಜಮದಗ್ನಿಯಿಂ
ಧೂಳಿಪಟವಾಯ್ತು ಸಿರಿಯು ಎಲಲೊ ೧

ದೇಶರಾಜ್ಯವ ತಿರುಗಿ ವಿಕ್ರಮಂ ತಾನು
ಜೋಸ್ಯವೈದಿಕರನೆವೊಸೆದುಬ್ಬಿಲಿ ತಾಗಿ
ಹೇಸದಲೆ ನುಂಗಿ ತಾನು ಎಲಲೊ
ರಾಶಿದೈವಂಗಳನು ಪೂಜಳಿದು ರಾವಳ
ಈಶ್ವರನ ಒಲಿಸಿ ದಶಶಿರವ ಪಡಕೊಂಡು
ನಾಶವಾದನು ಸೀತೆಲಿ ಎಲಲೇಲಲೇಲು ೨

ಆದಿಕಮಲಜನ ಉದರದಿ ದಕ್ಷ ಜನಿಸಿ
ಭೇದರಿದು ಶಿವನ ಶ್ರೀಪಾದವನು ಭಜಿಸಿ
ಮಾದೇವಿ ಪಾರ್ವತಿ ಪಡೆದನು ಎಲಲೊ
ನಾದನೇ ಈರೇಳು ಭುವನವನು ಶಿವನಿತ್ತ
ವಾದಿಭೇದವನಪ್ಪಿನಾದಿಕರದಿಷ್ಟಲಿಂಗ ಪರ
ವಾದಿ ಶಿರವರಿದನೆಂದು ೩

೧೬೨

[ಮರೆ]ಯದಿರು ಮರುಳ್ಮಾನವಾ
ಗರುವಹಂಕಾರ ನಿನಗೇಕೆ ಒರಿದೆ ॥ ಪಲ್ಲ

ವಿದ್ಯದಲಿ ಶಾರದೆ ಬುದ್ಧಿಯಲಿ ಲಕ್ಷ್ಮಣ ಮೇ
ಣ್ಬದ್ಧದಲಿ ಹರಿಶ್ಚಂದ್ರನೆ ನೀನು ಹೇಳು
ಗದ್ಯದಲಿ ಪಾಡಿಸಿಯೆ ಶಿವನ ಶ್ರೀಪಾದವನು
ಶುದ್ಧದಲಿ ಬೆರೆವ ಸುಂದರ ನೀನು ಹೇಳು ೧

ಸಾಸದಲಿ ಕಲಿಗಣನೆ ಬಾಸೆ ಕಲಿಕಾಮನೆ
ರೋಷದಲಿ ಆಗಸ್ತ್ಯನೆ ನೀನು ಹೇಳು
ದೇಶಿಕನು ಮುನಿಯೊಳಗೆ ಶಿವನ ಛಲವಿಡಿದಿರುವ
ಭಾಷೆಪಾಲಕ ಸುಮಿತ್ರನೆ ನೀನು ಹೇಳು ೨

ಒಲವಿನಲಿ ನಳಚಕ್ರನೆ ಚೆಲುವಿನಲಿ ಕಾಮನೆ
ಚಲಿಗಳೊಳು ಪುರುಷೋತ್ತಮನೆ ನೀನು ಹೇಳು
ನೆಲೆಯರಿದು ಶರವನು ಒತ್ತಿಯಾಡುತ ಶಿವನ
ಒಲವರಿವ ಜಮದಗ್ನಿಯೆ ನೀನು ಹೇಳು ೩

ಸುರತದಿ ವಿಕ್ರಮನೆ ವಿಚಾರದಲಿ ಯಮನೆ ನೀ
ಸ್ವರದಲಿ ನಾರದನೆ ನೀನು ಹೇಳು
ಒರೆವ ಶಾಸ್ತ್ರದಲಿ ಮಿಗಿಲಾಗಿ ತರ್ಕಗಳಿಂದ
ಹರಿವಾದ ವೇದವ್ಯಾಸನೆ ನೀನು ಹೇಳು ೪

ಲಾಗದಲಿ ಹನುಮನೆ ಯೋಗದಲಿ ದಧೀಚನೆ
ರಾಗದಲಿ ನಾರದನೆ ನೀನು ಹೇಳು
ಭೋಗದಲಿ ದೇವೇಂದ್ರರರಸ ಸಂತುಷ್ಟನೆ
ತ್ಯಾಗದಲಿ ಕರ್ಣನೆ ನೀನು ಹೇಳು ೫

ಯುದ್ಧದಲಿ ಅಂಧಕನೆ ಬುದ್ಧಿಯಲಿ ಶಿವರುಷಿಯೆ
ಚೋದ್ಯದಲಿ ಬಲ್ಲಾಳನೆ ನೀನು ಹೇಳು
ಸಿದ್ಧರೊಳು ನವನಾಥರೊಳಗೆ ನೀನೊಬ್ಬನೆ
ಕ್ಷುದ್ರಮಾನವ ನಿನ್ನ ಸಿರಿಯೇನೆಲೊ ೬

ಆಡಿ ಕಳೆಯಲಿಬೇಡ ನೋಡು ಜ್ಞಾನಗಳಿಂದ
ಮೂಢತನ ಮನದಲ್ಲಿ ಬೇಡ ಕೇಳು
ಬೇಡಿಕೊ ನಿನ್ನ ಕರಸ್ಥಳದಿಷ್ಟಲಿಂಗವನು
ಕೂಡೆ ಪದವಭೀಷ್ಟ ನಿನಗಿದುಸಿರಲುಽೆಂದು ೭

೧೬೩

ನಿಮ್ಮ ಸ್ತುತಿಯು ಮಾಳ್ಪದು [ಭ್ಯ]ಕ್ತಪನುದಿನ
ನಿಮ್ಮ ಸ್ತುತಿಯು ಮಾಳ್ಪದು
ನಿಮ್ಮ ಸ್ತುತಿಗಳಿಂದನ್ಯೋನ್ಯವಿಲ್ಲದ ಕ್ರೋಧ
ಚೆನ್ನಾಗಿ ಹರದು ಪೋಪ್ಪದು ಚೆನ್ನಬಸವೇಶ ॥ ಪಲ್ಲ

ಸರಸಮಾತುಗಳಿಂದಲಿ ಸುಜನಸತ್ವದಿಂದ
ಬೆರೆಸಿ ಅಮೃತವೆರೆದಂತೆ
ಅರಿದು ಷಡ್ವರ್ಗವ ಪಿರಿದಷ್ಟಮದವನು
ತರಿದೊಟ್ಟನಿಂದ ಯೋಗಿ ಅಂಗಾಂಗಭೋಗಿ ೧

ನಳಿನನಾಭಗೆ ಪುಟ್ಟಿದಾ ಮನ್ಮಥನ ಸುಟ್ಟ
ಖಳದಕ್ಷ ಶಿರವರಿದನೆ
ಹೊಳೆದು ಮರ್ತ್ಯಕೆ ನಿನ್ನ ಸುಳುಹು ತ್ರಿಜಗಕೆಲ್ಲ
ತಳುವದೆ ಪದವನೊಲಿದಂಥ ಚೆನ್ನಬಸವೇಶ ೨

ದೇಶದಿಗ್ದೇಶಕ್ಕೆ ನೀನು ಪೂಜಿಪಟ್ಟಂತ
ವಾಸದಿ ಒಲಿದು ನಿಂದೆ
ದೇಶಕಧಿಕ ಸೋದೆ ಬಸವಲಿಂಗರಾಜಗೆ
ಆಸರಿಲ್ಲದೆ ಪೂಜಿಪೆವಿಷ್ಟಲಿಂಗೇಶ ೩

೧೬೪

ಏನ ಪೇಳುವೆ ಬಸವರಾಜನ
ಘನ ಪರಾಕ್ರಮಿದೇವನ
ಮಾನಿನಿಯೆ ನೀ ಕೇಳು ಒಸಗೆಯು
ಘನದೀಪ್ತಿಪ್ರಕಾಶನ ॥ ಪಲ್ಲ

ಅಂದಗಾರನು ಅಪಾರಮಿತ್ರನು
ಸಿಂಧುಗಂಭೀರದೇವನು
ಚಂದ್ರಚೂಡನು ಚಪಲನಾಶನು
ಬಂಧುಜನಚಿಂತಾಕನು
ದ್ವಂದ್ವಚರಣಕೆ ನಮಿಸೆ ಭಕ್ತರಿ
ಗಿಂದು ಪದವೀವ ದೇವನ
ಮಂದಗರ್ವದಿ ಮಲೆವ ಮರ್ತ್ಯರ
ಸಂದುಸಂದನೆ ಮುರಿವನು ೧

ಆಸೆಯಿಂದಲಿ ಪೂಜಿಪರ ದರ
ಹಾಸದಿಂದಲಿ ನರಪನು
ದೋಷ ದುರ್ಗುಣವಳಿದ ದೇವನು
ಈಶ ಅಂಬಿಕೆ ವಾಹನನು
ರಾಶಿದೈವಂಗಳಿಗೆ ದೇವನು
ವಾಸೆ ಉಳ್ಳ ಮಹಾತ್ಮನು
ದೋಷನ ಶಿವ ಸಂಹರಿಪ ಬಸ
ವೇಶ ಸದ್ಗುರುನಾಥನು ೨

ಧರೆಗೆ ಭೂಕೈಲಾಸವೆನಿಪುದು
ಒರೆದ ಹಂಸಭಾವಿಯುಲಿಹ
ವಿರಾಪುರಪೇಟೆ ಬಸವಗೆ

೧೫೦

ಸರಸದಿಂದಲಿ ಬೆರೆದನು
ಕರೆದು ಸಚರಾಚರರಿಗಭಯುವ ಕೊಟ್ಟು ರಕ್ಷಿಪ ದೇವನೆ
ಪರನೆ ಹೊಲೆಯ್ಯನ್ನ ಹೊಳೆಯು ಒಸವನೆ
ಸರಸವಿಷ್ಟಲಿಂಗನ ಒಲಿವನೆ ೩

೧೬೫

ಕಾಮಿನಿಯೆ ನೀ ಒಲಿದು ಕೇಳು ಪ್ರೇಮಾನಂದವ ॥ಪಲ್ಲ

ಮೇದಿನಿಯೊಳಧಿಕವಾದ ವೇಣುಪುರದ
ಆದಿಯು ಮುನೀಂದ್ರ ಶಿವದೇವಿ ಗರ್ಭದಿ ಜನಿಸಿದ ಅ
ನಾದಿಯು ಗುರುಬಸವೇಶ್ವರನು ಕ್ರಿಯುಮಾರ್ಗವಿಡಿದುದ
ಭೇದಿಸಿ ಅಕ್ಕಮ್ಮನವರಿಗೆ ಇದೆ ಘನವೆಂದುದ
ಶೋಧಿಸಿ ನಿರ್ವಾಣಯ್ಯ ವಿನೋದದಿಂದಲಿ ಅರುಹಿದ ೧

ಪೂರ್ವದಲ್ಲಿಯು ಕಲ್ಯಾಣದೊಳು ವಿನೋದಿಬಸವನು
ಸರ್ವರೊಳು ಸಂಭ್ರಮವೆರಸಿ ಗರ್ವಿ ಭದ್ರಂ ವ್ಯಾಪನು
ನಿರ್ವಾಣಪುರುಷ ನಿರ್ವಾಣಯ್ಯ ಏಕವೆರದನ
ವಾರ್ವಾರಿ ಸಂತುಷ್ಟದಿಂದ ನೆಲಸಿ ಪಂಚಾಕ್ಷರಿಯನು
ಪಾರ್ವತಿರಮಣನಲ್ಲಿ ತಾ ಏಕವಾಗಿವೆರದನು ೨

ಹಿಂದೆ ಮಾಡಿದ ಸುಕೃತದಿಂದ ಒಂದೆ ಗರ್ಭದಿ
ಇಂದು ಬಸವಣ್ಣಕ್ಕನಾಗಲಾಂಬಿಕೆಯು ಈರ್ವರು
ಬಂದು ಮರ್ತ್ಯಲೋಕಕ್ಕೆ ತಾವ್ನಿಂದು ಗಣದೊಳಿರುವರು
ಒಂದೆ ವ್ರತವವಿಡಿದು ನೀನು ಪಡೆಯುಪ್ಪ ಮುಕ್ತೀವರು
ಎಂದು ಹೇಳಿ ಉಳಿವೆ ಮಹಾಮನೆಗೆ ತಾವು ನಡೆದರು ೩

ಚಿತ್ತದೊಳಗೆ ಬೇಸರುದೋರಿ ಧಿಕ್ಕರಿಸಿಯೆ
ಸತ್ಯದಲ್ಲಿ ನಡೆವ ಸರ್ವರಾಜ್ಯ ಪಾರು
ಪತ್ಯವನು ತಿರಸ್ಕರಿಸಿ ಬಿಟ್ಟು ತಾವು
ನಿತ್ಯ ಶಿವಪೂಜೆಯನು ಸತ್ತು ಚಿತ್ತಾನಂದದಲ್ಲಿ ಮುಕ್ತರಾಗಿ ಇರುವನು
ಮರ್ತ್ಯಲೋಕದವರಿಗೆಲ್ಲ ಕರ್ತು ಶಿವನು ಮುನಿದನು ೪

ಮಾತೃ ಪಿತೃವೆ ನೀನೊಬ್ಬನೆ ಗೋತ್ರವೆಲ್ಲಕೆ
ಪ್ರೀತಿಯಿಂದಲಿ ಪುರದಯ್ಯನಾ ರಾಚಪ್ಪನವರ ಸುತರನು
ಜಾತಿನಯವ ನೀತಿಗುಣದಿ ಧಾತು ದಯ ಧರ್ಮದಿ
ಧಾತ್ರಿಯಲ್ಲಿ ಕೀರ್ತಿ ಬರುವ ನಿಮ್ಮ ಶಾಂತಿ ಗರ್ಭದಿ
ಕರ್ತು ನೀನೆ ಸಲಹಿಕೊಂಡು ಸತ್ಯ ನಿರ್ವಾಣೇಂದ್ರದಿ ೫

ನಿರಾಹಾರದಿ ಸೆರೆಯು ಸಿಕ್ಕಿ ಹಾರವಿಸಿಯ ದೂರ ಮಾಡಿ ಕಂಟಕವನು
ಹಾಲಪ್ಪನವಿಡಿದಿರೆ ತರಳ ಬಸವಲಿಂಗಪ್ಪಗೆ ನೀವು ಬುದ್ಧಿಯುಕ್ತಿ ಕಲಿಸಿದಿರಿ
ಅರುಹಿ ಜಗಕೆ ಕೀರ್ತಿಯನು ತಂದು ನೀವು ಪಡೆದಿರಿ
ಹರಕೃಪೆಯು ನಿರ್ವಾಣೇಂದ್ರ ಸ್ಥಿರವಾಗಿ ಸಂತೃಪ್ತರಿ ೬

ಅಷ್ಟದಿಕ್ಕಿಗೆ ಅಧಿಕವಾದ ಶ್ರೇಷ್ಠ ಕೆಳದಿ
ದೃಷ್ಟವುಳ್ಳ ವೀರೇಶ್ವರನ ಗರ್ಭದಲ್ಲಿ ಜನಿಸಿದರು
ಸೃಷ್ಟಿಪತಿ ಆದಿಬಸವಪುತ್ರ ಸೋಮಶೇಖರರು
ನಿಷ್ಠೆಯಲ್ಲಿ ನಿರ್ವಾಣಯ್ಯ ಏಕವಾಗಿ ಮೆರೆದರು ಸಂ
ತುಷ್ಟವಾಗಿ ಕರಸ್ಥಳದಿಷ್ಟಲಿಂಗವ ಭಜಿಸುವರು ೭

೧೬೬

ಏನೆಂದು ಹೇಳಲಿ ನಾನಿಂದು ನೋಡೆಯಕ್ಕ
ಧ್ಯಾನವುಳ್ಳ ಮಹಿಮ ಪುರುಷನು ॥ ಪಲ್ಲ

ಮೃಡಹರ ಗುರುವು ತಾನಾಗಿ ಮರ್ತ್ಯಕ್ಕೆ ಬಂದು
ದೃಢವುಳ್ಳ ಭಕ್ತರಿಗೊಲಿವನು
ಬಿಡದೆ ಎಂಬತ್ತುನಾಲ್ಕುಕೋಟಿ ಜೀವಿಗಳೆಲ್ಲ
ಅಡಿಗಡಿಗೆ ಶರಣೆಂಬೊರೆ ನೋಡೆಯಕ್ಕ ೧

ಧರೆಯೊಳು ಚಿನ್ಮನದುರ್ಗದ ಅರಸು ಮದಕರಿಯು
ಜರಿದು ಭಕ್ತಿಯನುವಲ್ಲದಲೆ
ಉರವಣಿಸುತ ತಾವು ಚರಮೂರ್ತಿಗಳಯೆಲ್ಲ
ಭರದಿ ಸೋದೆಯ ಪೊಕ್ಕರು ನೋಡೆಯಕ್ಕ ೨

ಒಲಿಮೆಯ ಶಿವಭಕ್ತನು ಬಸವಲಿಂಗರಾಜ
ನೊಲಿದು ಬೇಡಿದುದ ನೀಡುವರೆ
ಒಲವಿಂದ ಬಿಟ್ಟು ತಾವು ಹಳಿದು ಭಕ್ತಿಯನೆಲ್ಲ
ಗೆಲವಿಂದ ನಡದು ಬೀಳಿಗಿಗೆ. ನೋಡೆಯಕ್ಕ ೩

೧೫೨

ತಿಳಿದು ಸದ್ಭಕ್ತರೆಲ್ಲರು ಅರಸನೊಂದಾಗಿ
ಸುಳಿವ ಪಾವನಪುರೂರ್ತಿಯು
ಇಳೆಯೊಳು ಒಡವರೆ ಭಕ್ತಿಯ ಕೈಕೊಂಡು
ತಳುವದೆ ಸಾಗರಕೆ ನಡೆದು ನೋಡೆಯಕ್ಕ ೪

ಆದಿಮಾರ್ಗವ ಪಿಡಿದು ಸೋಮಶೇಖರರು
ಸಾಧಿಸಿ ಭಕ್ತಿಮಾರ್ಗವನು
ಮೇದಿನಿಯೊಳು ಬಸವಪ್ರಭುವ ಪೂಜಿಸುವಂತೆ
ಮಾದೇವ ಷಟ್ಸ್ಥಲಮೂರ್ತಿಗಳ ನೋಡೆಯಕ್ಕ ೫

ಕುಂಭಿನಿಯೊಳು ಮಿಗಿಲಾಗಿ ಷಡ್ದರುಶನಕ್ಕೆ
ಮುಂಬಾರದಂದದಿ
ಸಂಭ್ರಮದಲಿ ನಿರ್ವಾಣೇಂದ್ರನಿರವ ಕೇಳಿ
ಶಂಭು ಗುರುಸಿದ್ಧ ದಯಮಾಡಿ ನೋಡೆಯಕ್ಕ ೬

ನಾಕುದಿಕ್ಕಿನ ಅರಸುಗಳು ಬಿನ್ನಕ್ಕೆ ಕಳುಹೆ
ಸಾಕು ಎಂಬುತ ಧಿಕ್ಕರಿಸಿ
ಬೇಕಾದ ಭಕ್ತ ನಿರ್ವಾಣೇಂದ್ರನ ಭಕ್ತಿಗೊಲಿದು
ಏಕವಾಗಿಯೆ ಬೆರೆದುದ ನೋಡೆಯಕ್ಕ ೭

ಚಂದದಿ ತೃಪ್ತಿವಡಿಸಿ ತಾ ಗಣಂಗಳನು
ನಿಂದು ನೋಡುತ ಕೃಪೆಯಲಿ
ಕಂದುಗೊರಳನ ದಯವು ಸಂದಿತುಯೆಂದು ತಾವು
ಒಂದು ವಾಕ್ಯವನು ನುಡಿದರು ನೋಡೆಯಕ್ಕ ೮

ಆಗ ಬೇಗದಲಿ ಪೋಗಿಯೆ ನಿರ್ವಾಣ್ಯೆಗೆ
ಸೊಗಸು ಸೊಗಡಿಲಿ ಪೇಳಿದರು
ಅಘಹರ ಮುರಿಗಿ ಇಮ್ಮಡಿ ಗುರುಸಿದ್ಧನು
ಜಗವ ಕೈ ಬಿಟ್ಟನೆಂಬುತ ನೋಡೆಯಕ್ಕ ೯

ಭರದಿ ಎದ್ದುವೆ ನಡೆದರು ದೇವಭಕ್ತರು
ಗುರುಪಾದ ದರುಶನಕೆಯು
ಮರೆದೊರಗಿದ ಇರವನು ಕಂಡು ಬೆರಗಾಗಿ
ಮರುಗುತಶ್ರುಗಳ ಸುರಿವುತ ನೋಡೆಯಕ್ಕ ೧೦

ಶಿವಯೋಗಾನಂದಪುರದಲ್ಲಿ ಸ್ಥಾನವ ನೋಡಿ
ಭವಹರ ಗುರುವ ಮುಂದಿಟ್ಟು
ಶಿವ ಶಿವ ಎಂಬುತ ಕರದಿಷ್ಟಲಿಂಗವ
ಎವೆ ಹೊಳಕದೆ ಪೂಜಿಪುದು ನೋಡೆಯಕ್ಕ ೧೧

೧೬೭

ಕೇಳಿನ್ನು ವನಿತೆಯಳೆ ಲಿಂಗನ ಬಗೆಯ
ಇಳೆಯೊಳಗೆಲ್ಲಿಯೂ ಇಲ್ಲ
ಹೇಳದೆ ತಾನು ಸೇರದೆ ಕಡೆನಿಂದು
ಜಾಳಿ ಚಾತುರ್ಯವಾಡಿದನೆ ॥ ಪಲ್ಲ

ಇಪ್ಪತ್ತೊಂದ್ಯುಗದಿಂದತ್ತ ಗೋಪ್ಯದಲ್ಲಿಯೆ
ಒಪ್ಪಿ ಜಂಬನಸವಿಯ
ಮುಪ್ಪು ತಪ್ಪನ್ನಕ ತಾ ತಪವಿರ್ದವಳ ಕೂಡೆ
ತಪ್ಪುವಿಡಿದು ಪೋದನೆ ೧

ಕಲೆನೆಲೆಗಳ ಸವಿಯ ಬಲ್ಲವನೆಂದು
ನಲಿದು ಒಲಿಕೆಯೊಳಿರ್ದೆ
ತೊಲಗಿಯೆನ್ನನು ತಾನು ಚೆಲುವೆ ಮತ್ತೊಬ್ಬಳಿಗೆ
ಗೆಲುವ ನಡದೆನೆಂದನೆ ೨

ಸರಿಸಮರೊಳಗೆಲ್ಲವು ಜರಿದುಯೆನ್ನ
ಕರೆಯದೆ ದೂರ ಪೋದನೆ
ಅರಿರಾಯರೊಳೆಲ್ಲ ತಾನು ಹಿರಿದು ಭಕ್ತಿಯ ಸವಿದು
ಕರದಿಷ್ಟಲಿಂಗವ ಕೂಡಿದನೆ ೩

೧೬೮

ಆರಾರುವ ಅರಿದುದಿಲ್ಲ ವೀರನೆಂಬುದ
ಮಾರಹರನು ಮರೆಯ ಮಾಡಿ ಕಳುಹಿದಿರವನು ॥ ಪಲ್ಲ

ಮಂದಮತಿಯು ಕವಿದು ಕಾಂಬ ಮುಂದನರಿಯದಲಿ
ಚಂದಚಂದ ಪವುಜನೊಡ್ಡಿ ನಿಂದು ನೋಡುತಲಿ
ಬಂದು ದನುಜನೊಳಗೆ ಕಾದೊ ಯುಕ್ತಿಯೆನುತಲಿ
ಎಂದು ಹರಿಯು ಬ್ರಹ್ಮರೆಲ್ಲ ಬಲವ ತೋರುತಲಿ ೧

ಚೆನ್ನೆ ಚದುರೆ ಭದ್ರಾಂಬಿಕೆಯು ವೀರನಿಮ್ಮಡಿಯು
ಉನ್ನತದ ಬಾಕು ಸಾಣೆ ಅಲಗು ಬಾಣವನು
ಸನ್ನೆ ಸ್ವೈರಿಣಿ ಪ್ರೇತಸ್ವಿನಿ ಹುಂಕಾರಿ ದುರ್ಗಿಯು
ಬಿನ್ನಣದ ಚಿತ್ರಸೇನನ ಒಲವ ಮುರಿದದನು ೨

ಧೂಮಕೇಶ ಶರಭಾವತಾರ ನಿಂದು ನೋಡಿದನು
ಪ್ರೇಮದಿ ಮುನ್ನೂರು ಅರವತ್ತಾಯುಧ ಪಿಡಿದನ
ಧಾಮಧೂಮ ಅದರ ಅದ್ಭುತದಲಿ ಹೊಕ್ಕನ
ಭೂಮಿಜನರ ಒರವ ಬ್ರಹ್ಮನ ತಲೆಯನರಿದನ ೩

ವಸುಧೆ ಕರ್ತನೆಂದು ಹರಿಯು ಬೀಗಿವಿದಿರುವನ
ಅಸಮಾಕ್ಷ ವೀರಭದ್ರನ ಮುಖವ ಹತ್ತಿದನೆ
ಒಸೆದು ಹರಿಣವತಾರ ತಾಳಿ ಓಡಿಹೋದನ
ಮುಸಗಿ ವೀರನದನು ಕಂಡು ಎಚ್ಚದು ಕೆಡಹಿದನ ೪

ಹರನ ಮರೆದು ದಕ್ಷಯಾಗದಲಿರುವನ
ಭರದಿ ಬಂದು ಸಿರಿಯಲಿರುವನ ತಲೆಯ ಹೊಡೆದನ
ಧರೆಯೊಳಧಿಕ ಕೋಟಿಪುರದಲ್ಲಿಂದು ಮೆರೆದನ
ಹರವಿಷ್ಟಲಿಂಗದ ಕಂತೆಸ್ವಾಮಿಭಕ್ತಿಯಲಿರುವನ ೫

೧೬೯

ತಾನೇಕೆ ಮುನಿದ ನೋಡೊ ಇಂದುಧರಗೆ ,
ಏನ ಮಾಡಲಿ ನಾನಿನ್ನು
ಮಾನಜಾಕ್ಷಿಯೆ ಕೇಳು ಧ್ಯಾನಮೌನಾದಿಯ
ನಾನಾ ಬೋಧೆಯ ತುಂಬಿ ನೀನವನೆಳತಾರೆ ॥ ಪಲ್ಲ

ಒಂದೊಂದು ಅವತಾರದಿ ತಾ ಬಂದು ಎನ್ನ
ಚೆಂದುಟಿ ಅಧರಾಮೃತವ ಹಿರ್‍ರನೆ ಹೀರಿ
ನೆಂದಾಗಲೆಯು ಬಲ್ಲ ನಿಂದುನ್ಮೀಲದಲಿ
ಹೊಂದೇವನೆಳತಾರೆ ೧

ಚಾಯಮಾಯದಿ ತಾ ನನ್ನ ಆಯದಿ ಕೂಡಿ
ಬಾಯವೀಳ್ಯವ ನೀಡುವೆ ಕಾಯಪುರದರಸು
ನೈಯ ಮಾಡಿದನವ ಬಾಯೆಂದು ಸೆರಗ್ಹಿಡಿ ಉ
ಪಾಯದಿ ಎಳೆತಾರೆ ೨

ಕನ್ನೆಪ್ರಾಯವು ಮೀರದೆ ತನ್ನನು ಕೂಡಿ
ಸನ್ನೆ ಸ್ವೈರಿಲಿ ನಡೆದೆ
ಭಿನ್ನ ಭ್ರಮೆಯನಿಟ್ಟ ಚೆನ್ನಿಗರೆರೆಯನ
ಮನ್ನಣೆ ಮಾತಾಡಿ ಸನ್ನೆಲಿ ಎಳತಾರೆ ೩

ಮಾತೆ ಪಿತರನಗಲಿ ಜಾತಿಗನೆಂದು
ಸೋತು ತನ್ನನು ನಂಬಿದೆ
ಮಾತನಾಡದೆ ತಾನು ಕಾತಳಿಸಿಯೆ ಪೋದ
ದಾತಹರಿಯುರೊಡತಾತನ ಕರತಾರೆ ೪

ಚಿನುಮಯೆ ಚಿದ್ರೂಪೆಯು ಮನವ ತಿಳಿ
ಕನಕಾದ್ರಿನೆಲೆವಾಸಗೆ
ತನು ಮನ ಧನವನೆಲ್ಲವಿಷ್ಟಲಿಂಗಕೆ
ವನಿತೆ ಒಪ್ಪಿಸಿ ತಾನು ಘನಮಹಿಮನ ಕೂಡಿ ೫

೧೭೦

ಸಾರಿ ಬಂದೆನ್ನ ಕೂಡಬೇಡವೊ ಆ
ನಾರಿಯೊಳನುವನು ತೋರಿ ಬಂದಿದ್ದಿ ನೀನು ॥ ಪಲ್ಲ

ಮನವೆರಡಾಗಿ ಕಾಣಿಸುತಿದೆ ದೇಹ ಅಧರ ನ
ಯನ ಕೆಂಪೊದರುತಿದೆ
ತನುವು ರಕುತ ನಖಗಳ ಗಾಯವಿದೆ ಇಂತೀ
ಮನ ಚಚ್ಚಳಿಕೆ ಮಾಯಕಾರವನರಿದೆನು ೧

ಕೊರಳಗೆ ಪಿಡಿವುಲ್ಲ ಬಾಲಪ್ರಾಯದ ನಾರಿ ಮೇರು
ಪರ್ವತದರಸಿಯೆ ಹದಿರ
ಒರೆಗುಮಾತು ನಗೆ ತಾತ್ಸಾರದಿ ನಿನ್ನ ಸರಸ
ಆರಿಗೆ ತೋರಿ ಬಂದಿದ್ದಿ ನೀನು ೨

ಸರಿಬಾರದಂಥ ಮಾತನಾಡುತ ಅಲ್ಲಿ
ವಿರಸಮೋಹನ ಮುದ್ದುಮಾಡುತ
ಎಲ್ಲಿಯುಹನದೊ ......ನಿನ್ನ
ನೆರೆ ನಂಬಿದವರಿಗೆ ಪದವಿಹಕಾರವಿಷ್ಟಕೆ....* ೩

---

* ಇಲ್ಲಿಂದ ಎರಡು ಓಲೆಯಲ್ಲಿ ಇಷ್ಟಲಿಂಗ ಅಂಕಿತದ ಹಾಡುಗಳಿದ್ದು ಓಲೆ ಶಿಥಿಲವಾಗಿರುವುದರಿಂದ ಪ್ರತಿ ಮಾಡಿಲ್ಲ.

೧೭೧

ಹೆದರಿದರೆ ಬಿಡುವುದೆ ವಿಧಿಬರಹ ಲಿಖಿತಿನ್ನು
ಮದನಾರಿ ಪರಶಿವನ ಮರೆಯೊಗಲು ಬಿಡದು ॥ ಪಲ್ಲ

ಆದಿವೇದವು ನಾಲ್ಕು ಪುರಾಣಗಳ್ಹದಿನೆಂಟು
ಭೇದಿಸಿಯೆ ದಿವ್ಯಾಗಮಮುಪನಿಷತ್ತು
ಆದಿ ಭೇದವ ತಿಳಿದು ವಾದ ತರ್ಕವ ಗೆಲಿವ
ನಾದರೆಯು ವಿಧಿ ಬೆನ್ನ ಬಿಡದು ಎಲೆ ರಮಣಿ ೧

ಭಲ್ಲುಕ ತರಕ್ಷು ಗಜ ಕಂಠಿರವನ ಪಿಡಿದು
ಬಲ್ಲಿದ ಭೇರುಂಡ ಶಾರ್ದೂಲನ
ನಿಲ್ಲದರಿರಾಯನು ಸಂಹರಿಪದಿದರುವೆ
ಎಲ್ಲ ವಿಧಿಗೊಳಗಾಗಿ ಪೋಗುವರೆ ರಮಣಿ ೨

ಜಡೆ ಹೊತ್ತು ಯತಿಯಾಗಿ ರಾವಳನು ಸೀತೆಯನು
ಪಿಡಿದು ಲಂಕಾದ್ರಿಪುರದೊಳಗಿಟ್ಟುವೆ
ಕಡುವಿಡಿದು ಕಡಲ ಲೆಂಕೆಗೆ ಸಾರೆವನು ಕಟ್ಟಿ
ಬಿಡದೆ ತಂದರು ಸೀತೆರಾಮರೆಲೆ ರಮಣಿ ೩

ಕಾಯಜೀವಿಗಳೆಲ್ಲ ಮಾಯ ಮೋಹಕೆ ಸಿಲ್ಕಿ
ಬಾಯ ಬಿಡುವುದು ಭೂಮಿಯೊಳಗೆಲ್ಲವು
ಚಾಯುಮಾಯದ ಬೊಂಬೆಯಾಟ ಮೂರನೆ ದಿನವು
ಆಯುನರಿಯದೆ ಮಾಯ ಬಲೆಗಹರೆ ರಮಣಿ ೪

ಅರುವತ್ತುನಾಲ್ಕು ವಿದ್ಯ ಪ್ರಹುಡನಾದರೆಯು
ಬರದ ಬರಹವ ಮೀರಿ ಬಾಳ್ವರಾರು
ಕರುಣಿ ಕರಸ್ಥಳದಿಷ್ಟಲಿಂಗನೊಳ್ಬೆರೆದವಗೆ
ಸರಿಯಿಲ್ಲ ಆವಾವ ಕಂಟಕವು ರಮಣಿ ೫

೧೭೨

ನಡುಗಡಲೊಳಗೆ ಕೈಯ ಬಿಡುವರೇನೊಯೆನ್ನ
ಒಡೆಯನೆ ಕರಸ್ಥಳದಿಷ್ಟಲಿಂಗ ॥ ಪಲ್ಲ

ಹಿಂದೇಳು ಮುಂದೇಳು ಜಲ್ಮಕಾದಿ ನೀನೆ ಎನ್ನ
ತಂದೆ ತಾಯಿ ಬಂಧು ಬಳಗ ಭಾಗ್ಯ ನೀನೆ
ಬಂದ ಭವದ ಕಂಟಕವನಳಿದ ದೇವಾ ಕೂಡಿ
ಎಂದೆಂದಿಗೆ ತೆಕ್ಕೆಯೊಳಗಲದಂತೆ ೧

ನೂತನವರ ಲೆಕ್ಕವೆ ಬಲ್ಲ ಜಾಣ ನೀನು
ಜಾತನುಜಾತರಿಗೆಲ್ಲ ನೋತು ನೀನೆ
ಕಾತಳ ಕಾತುರ್ಯಗಳ ನಿಲ್ಲಿಸಿಯೆ
ಸತ್ಯನಿತ್ಯ ನಿರ್ಮಲಾಂಕ ಕರ್ತು ನಿತ್ಯ ನೀನೆ ೨

ನಾಡಾಡಿಯು ದೇವರಿಗೆ ದೇವ ನೀನೆಯೆನ್ನ
ಕೂಡೆ ನೋಡಿ ಬಾಯೊಳಗೆ ಬಾಯನಿಕ್ಕಿ
ನೋಡಿ ಮಾಡೆನ್ನೊಳು ಭಾರ ಹೊರೆನೊ ಈತ
ಗಾಡಿ ಮೇಲೆ ಚಾಯುಮಾಯದೊರೆವೆನೊ ೩

ಹಗಲೆ ಇರುಳೆ ನಿನ್ನ ಸ್ತುತಿಯೊಳಿರ್ದೆ ನಿನ್ನ
ಮುಗುಳ್ನಗೆ ಮುದ್ದು ಮುಖದೋರೊ ನೀನು
ನಿಗಮಾಗಮಂಗಳಿಗೆಲ್ಲಗೋಚರನೆ ಇಂಥ
ಹಗರಣ ಹಮ್ಮು ಹಂಕಾರ ಮಾಡಲೇಕೊ ೧

ಆದಿಯು ಅನಾದಿಮೂರ್ತಿ ಶಂಭು ನೀನೆ ನಿನ್ನ
ಭೇದವು ಆರಾರಿಗೆ ಅಸಾಧ್ಯವಿನ್ನು
ಮೇದಿನಿಯೊಳೆಲ್ಲ ಶಿವಭಕ್ತರಿಗೆ ನೀನು
ಶೋಧಿಸಿ ನಿಂತು ಪ್ರಾಜಿಪೆವಿಷ್ಟಲಿಂಗ ೨

೧೭೩

ಆದಿ ನಿರಂಜನ ಮೇದಿನಿಗೆಯು ಬಂದು ಜಾಣರ ದೇವ
ವಾದವ ಮಾಡಿದ ಭೇದವನರುಹಿದೆ ಜಾಣರ ದೇವ ॥ ಪಲ್ಲ

ಗುರುವು ತಂದೆಯು ತಾಯ ಮಾತನಿಂತು ಮೀರುವ ಜಾಣರ ದೇವ ಅವ
ಸುರರಿಗೆ ನರರಿಗೆ ಗಣರಿಗೆ ಹೊರಗೆಂದ ಜಾಣರ ದೇವ
ಪರನಾರಿಯರ ರತಿಕ್ರೀಡೆ ಕರೆವ ಜಾಣರ ದೇವ ಅವ
ನರಕದ ಕುಂಡದ ಬಾಯಿಗೆ ಬೀಳುವ ಜಾಣರ ದೇವ ೧

ಸತಿಯುರಿಚ್ಛೆಯ ಮಾತ ಕೇಳುವ ಪುರುಷಗೆ ಜಾಣರ ದೇವ ಅವ
ಮತಿಯು ದುರ್ಮತಿಯಾಗಿ ಕಪಿಯಾಗಿ ತಿರುಗುವ ಜಾಣರ ದೇವ
ಅತಿವಿದ್ಯದಿಂದಲಿ ಸತುವುಳ್ಳವನೆಂದು ಜಾಣರ ದೇವ
ಅತಗತಿಮುಕ್ತಿ ಪಲಪದ ಪದವನು ಕಾಣನು ಕಾಣಾ ಜಾಣರ ದೇವ ೨

ಕಡಲತಡಿಯಲಿ ಮಠ ಮಾಡಿದವರಿಗೆ ಜಾಣರ ದೇವ ಅಲ್ಲಿ
ಬಿಡದೆ ಸ್ನಾನ ಜಪ ನಿತ್ಯನೇಮಗಳು ಜಾಣರ ದೇವ
ಒಡಲವಿಡಿದು ಬಂದರಾರಾದಡಾಗಲಿ ಜಾಣರ ದೇವ
ಕೊಡೆ ತೊಡರಿಯೆ ಹಸಿವುಂಟು ನಾನಾ ಜೀವಿಗಳಿಗೆ ಜಾಣರ ದೇವ ೩

ಒದಗಿದ ಪ್ರಾಯವಾಗಿಲ್ಲೆಸೆದವರಿಗೆ ಜಾಣರ ದೇವ ಅವ
ಮದಮುಖನಾಗಿಯೆ ಮಾರ್ಜಾಲನಂದದಿ ಜಾಣರದೇವ
ಹದನನರಿತು ಭೂಮಿ ಬೀಜವ ಬಿತ್ತಲು ಜಾಣರ ದೇವ ಹೆಚ್ಚಿ
ಮೇದಿನಿಯೆಲ್ಲಕೆ ಬೆಳೆ ಫಲ ತಪ್ಪದು ಜಾಣರ ದೇವ ೪

ಅರಸ ಪ್ರಧಾನಿಯೊಳ್ ಸರಸವನಾಡಲು ಜಾಣರದೇವ ತಾನು
ನರಿ ಕರಿ ಮೊಗ್ಗುಲ ಸಿಕ್ಕಿಲ್ಲಕಿರುವನು ಜಾಣರದೇವ
ಕರಪುರ ನೋಡುವ ಕೈಲಾಸನಿಳಿದುವೆ ಜಾಣರದೇವ ಪೇಳಿ
ಮರಣವಿದೂರನು ಹರವಿಷ್ಟಲಿಂಗನು ೫

೧೭೪

ಇಸಿಯು ತಡೆದನೆಂದು ವಿರಹ ಬಾಳ್ಕೆನಗೆ
ಇನಿಯಳೆ ನೀ ಹೋಗಿ ಕರತಾರೆ ಬೇಗ । ಪಲ್ಲ

ಕಾಲಕಂಟಕವನು ಅಳಿದ ತಾನೆಂದು
ಬಾಲಪ್ರಾಯದಿ ಎನ್ನನಗಲದೆಂದು
ಮೂಲೋಕತಾತನು ಮುನಿಗಣವಂದ್ಯನು
ಲೀಲಾವಿನೋದಿಯು ಶೂಲಿ ತಾ ಬಾರಾ ೧

ಇಟ್ಟ ತಿಲಕ ಭಸಿತದಿನತಿಜಾಣ
ತೊಟ್ಟು ಮಾತಂಗ ಚರ್ಮಹಿತ ಭೂಷಣ
ನಿಟ್ಟು ಮಾಡಿದ ನವಪಟ್ಟಕಧಿಕನನು
ಮುಟ್ಟಿಸಿ ಕಮಲಕೊಂದಿಸಿ ಕರೆತಾರೆ ೨

ಮಂದಾಕಿನಿಯನು ತಾನಗಲದೆ ನಿಂದ
ಮುಂದರಿಯದೆಯೆನ್ನನಗಲಿ ತಾ ಹೊಂದ
ಕಂದುಗೊರಳದೇವ ಕನಕಾದ್ರಿನೆಲೆವಾಸ
ಇಂದುಮುಖಿಯೆ ಎನ್ನ ರಮಣನ ತೋರೆ ೩

ಕರಕರೆಯೆನ್ನೊಳು ಮಾಡುವನಲ್ಲ
ಹುರುಳುಗೆಡಿಸಿ ಸರಿಸಮಾನರೊಳೆಲ್ಲ
ಕರಣೇಂದ್ರಿಯಂಗಳನರಿವ ಸುಜಾಣನು
ತರಳೆ ರನ್ನಳೆ ನೀನು ಕರೆತಾರೆ ಬೇಗ ೪

ಗಂಭೀರಗುಣದವನೆಂದು ತಾತನ್ನ
ಹಂಬಲಿಸಿಯೆ ತನ್ನ ಸವಿಯನೊಂದೊಂದ
ಶಂಭುಶಂಕರ ಕರದಿಷ್ಟಲಿಂಗವ ಬೇಗ
ರಂಭೆ ಪಾರ್ವತಿಗೆ ತಾನೊಂದುಗೂಡಿಸಿದೊ ೫

೧೭೫

ಸೋಜಿಗವನು ಸೊಗಸಿನಿಂದಲಿ ಕೇಳಿ
ಮಾಜಿ ಒಳಯಿಕೆ ಮರಸಿ ಪ್ರೊಕ್ಕದೇನೆಂಬೆ ॥ ಪಲ್ಲ

ಒಂದು ರಾತ್ರಿಯಲಿ ತಾ ನಿಂದು ಶಿವಾರ್ಚನೆಯ
ನಿಂದು ಮುಸುಕುವ ಪರಿಯ ಕಂಡಿದೇನು
ಹೊಂದಿ ಮಲಗಿರುವ ಗುರುಶಾಂತಪ್ಪಗೆಯು
ಮುಂದರಿಯದೆಚ್ಚತ್ತು ಸುಮ್ಮನಿರಲವರು ೧

ಮನವು ಸಂಚಲವಾಗಿ ರೋಮವೆಲ್ಲವು ನಿಗುರಿ
ತನುವಿಗೆಲ್ಲಕೆ ಮುಸುಕ ಬಿಗಿದುಕೊಂಡು
ಘನ ಮನವ ಬಲುವಿಡಿದು ಮಿಗಿಲು ಕೋಪವ ತಾಳಿ
ಜಿನುಮಯನೆ ಗತಿಯೆಂದು ಜಿಮ್ಮಿ ಸಾಣವನು ೨

ತೊಲಗಿ ತಾ ಹಿಂದಕ್ಕೆ ಮೂಲೆ ಮೂಲೆಯ ನೋಡಿ
ಚೆಲುವ ಉಪ್ಪಿನಕಾಯ ಗಡಿಗೆ ಬಿಟ್ಟು
ಬಲವಿನಿಂದಲಿ ನಿಂದು ಬೆದರಿ ಪೋಗಿಯೆ ತಾನು
ಸಲುವ ತವುಡನು ತಾನು ತಿನ್ನುತಿರಲು ೩

ಒತ್ತಿ ಕೂಗಿಯೆ ಮನೆಯನೆಲ್ಲರನು ಎಬ್ಬಿಸಿಯೆ
ಕೃತ್ಯವಿದು ತಮ್ಮೊಳಗೆ ತಿಳಿದು ನೋಡಿ
ಭೃತ್ಯ ಗುರುವಿಗೆ ಪೇಳೆ ಕೇಳಿ ದೀಪವ ಹಚ್ಚಿ
ಒತ್ತರದಿ ಬಡಿದು ತಾ ಕಟ್ಟಿದನದನು ೪

ಮದಲಿ ಆದನುವೆ ಕಳೆಚಿ ಒದಗಿ ಒಳಯಿಕೆ ಬಂದು
ಆದುರಿಸಿಯೆ ನಿದ್ರೆಗೈದವರನೆಲ್ಲ
ಮದನಾರಿ ಪರಶಿವನು ಇಷ್ಟಲಿಂಗನು ತಾನು ಬರೆಸಿದ ಬರವೆಂದು
ಇದು ಚೋದ್ಯ ರಮಣಿ

೧೭೬

ಶಕುನಿವಾಹನ ನೇತ್ರಾಂಕಿತನೆ ದುಗ್ಧಕೂಪಾರ ಏಕೋ ತ್ರಿಜಗಕಾಧಾರ
ನಾಕಾದಿ ಗರಳ ಪರಿಪಾತ್ರ ವಾಮನಾಕಾರ ॥ ಪಲ್ಲ

ಮಂದಾಕಿನಿ ಜಟಾಧರಾಯ ವಿದಗ್ಧ ಗೌರಾಯ
ಕಂದುಗೊರಳ ಸ್ನೇಹಾಯ ವೀರರಸಾಯ
ಮಂದರಧರಹರ ಮಂಜುಳತನು ಸಿತ
ಬಂಧುರಹಿತ ಶಿವಲಿಂಗದಿವ್ಯಾಂಗ ೧

ಕುಡಲಾಣತಿ ಮಾತನು ಕಲ್ಪ ವಿವೃಕ್ಷ
ಉಡುಪತಿ ಇನನುದಯ ಕಾಲಸಂಹಾರ
ಕಡಿವಿಡಿ ವಿಷವನು ಬಿಡದೆ ನಂಜಿಯುಂತ
ಪಡೆಯು ಸುರರ ಗಣವಿಡಿದು ರಕ್ಷಿಪನೆ ೨

ಕೊರಳ ಸುರಾಹಾರ ಕಪಟ ನಿಕಾಯ
ಕುರುಹ ಮರ್ತ್ಯವಿನಾಶಾಯ ವಲ್ಲಭರ್ದೇಹ
ಉರಿ ನಯನನೇತ್ರದಿ ಶರಭ ತಾ ರವುದ್ರದಿ
ಪರವಾದಿ ಶಿರವರಿ ಕರದಿಷ್ಟಲಿಂಗ ೩

೧೭೭

ಭೇದಿಸಿದವರಿಗನಾದಿ ಪ್ರಣಯ ತೋರಿ
ಮೂದೇವರೊಡೆಯ ಕರದ ಇಷ್ಟಲಿಂಗ ॥ ಪಲ್ಲ

ಆಶನ ವೆಸನಗಳೇಳ ದಶವಾಯುಗಳನೆಲ್ಲ
ಪಸರಣೆ ಮದವೆಂಟನೆಲ್ಲ
ಬಿಸಜಕಮಲ ಸುತ್ತಿ ಹಸಿವ ಸೂಸರಿ ಫಣಿ
ನೆಸರಿಯನೆಲ್ಲವ ನಿಲಿಸಿ ಶಶಿ ಬೆಳೆ ಫಲವದಾಗರವ ಕುರುವನೊ
ದೆಸೆನಾಕು ಸುಮನದಿಯಿರಿಸಿ ಪಶುಪತಿ ಪರಶಿವ
ವಿಷಧರ ನುತಕಾಯ ಶಶಿಧರ ಗಂಗಾತರಂಗ ೧

ಎಪ್ಪತ್ತೆರಡುನಾಡಿ ಬಲಿದಿಂದ್ರಿಯವ ಘಟ್ಟು
ಒಪ್ಪನಮಲ ಮೂರನಳಿದು
ಒಪ್ಪಾರು ವರ್ಗವ ತರಿದು ಸಹಸವಾಗಿ
ಒಪ್ಪಿತಾ ರಕ್ಷಣೆ ತನ್ನ
ಯಾಪ್ಯಾಯನದೊಳು ನಿಜಸುಖವನು ತೋರಿ
ಗೋಪ್ಯದಿ ನಡೆವದಾದಿಯನು
ತಪ್ಪದೆ ನಯನಿಂದ್ರಿಕರಣಂಗಳ ಕಲಕಿಸಿ
ಮುಪ್ಪುರದಹನನ ಕಾಯತರಂಗ ೨

ನಾನಾ ಜೀವನದಾಯ ಮಾಯವಿಕಾಯದಿ
ತಾನವಮಾಡಿಯೆ ಸಲಹೊ
ಮಾನಸ್ಥಾಪ ಸರವರಿಚ್ಛೆಯ ನಡೆಸುವ
ಭಾನುಕೋಟಿಯು ಕಳೆ ಅಯ್ಯ
ಕಾನನದೊಳು ಕಾಲ ಕಾಮ ತೂರ್ಯಗಳನು
ತಾನದನೆಲ್ಲವ ಕೊಯಿದು
ಮಾನವಮುಕಾರವಾಗಿ ಸಲಹಿಸುತವನಿವ
ಧ್ಯಾನದಿ ಪ್ರಭೆಸಂಗ ಕರದಿಷ್ಟಲಿಂಗ ೩

೧೭೮

ತನ್ನ ನಿಜವೆನಗೆ ತೋರಾ ದಾಮೋಜರೊಡೆಯಾ
ನಿನ್ನೆಲ್ಲಿಯು ಕ್ರೋಧ ಬಮ್ಮದಿಂದು ಚಿನ್ಮಯಾ.... ॥ ಪಲ್ಲ

ನಿನ್ನೆಯೆನ್ನೊಳು ಭಾಷೆನಾಡಿ....ಮಾಡಿ
ಇನ್ನೆಮ್ಮ ಹಂಬಲ ಮರೆದ ಮುನ್ನ ಮಾಡಿದ ಫಲವೆನ್ನ ಕೇ
ಳೆನ್ನ ಗುಣರನ್ನ ನಿನ್ನಾಣೆಯೆನ್ನ
ಮನ್ನಿಸದವನು ತಾ ಪೋದ ಚೆನ್ನಿಗ ವೀರ ಉನ್ನತ ವನಸಿರಿಯನು
ಚೆನ್ನ ಚದುರನತಿಜಾಣ ಗೀರ್ವಾಣ ಶರ್ವಾಣ ಮತ್ಪ್ರಾಣ ತಾನು ೧

ಕೊಡೆ ಎನ್ನೊಳು ಉಂಡು ತಾನು ಕೂಡಿಯು ಮಾಡಿ
ನೋಡಾ ಹಿಂತಿರುಗಿ ತಾ ಪೋದ
ರೂಢಿಯೊಳಗೆ ನಗೆಗೇಡ ಬಹುಕೇಡ ಹರ
ನೋಡಾ ಮನ್ನಣೆ ಮಾಡ
ನಾಡಾಡಿ ಮಾತಲ್ಲ ಕೇಳು ಹರಣದೊಡೆಯು
ಮೂಢತನವ ಮಾಡಿಕೊಂಡ
ನೋಡಿ ತನ್ನಯ ಹಂಬಲನು ಬಯಸಿ ಸಹಸಿ ಸುಭಾಷಿ ತಾನು ೨

ಎಂದೆಂದು ಎನ್ನನಗಲಲಿಲ್ಲ ಇಂದುಧರೇಶ
ಹಿಂದಿನ ಕುರುಹನೆಲ್ಲ ಮರೆದ
ಬಂಧುಬಳಗವ ತೊರೆದು ನಾ ಮರೆದು ತನ್ನನು ಬೆರೆದು
ಒಂದು ಕೊರತೆಯು ನಾನರಿಯೆ ತನ್ನರಿವಿನಿಂದ
ಕಂದಿ ಕುಂದದೆ ಸುಖದೊಳಿರ್ದೆ
ಒಂದು ಮನನಿವನಲ್ಲ ತಾನೊಲ್ಲ ಬಹುಬಲ್ಲನೀತವಿರದಲ್ಲ ೩

ಆಗಮನಿಗಮಗೊಂದನೆ ಭವರೋಗವೈದ್ಯನೆ
ಭೋಗಕಾದಿಯು ಶಂಭು ತಾನೆ
ಜಾಗ್ರತ್ ಸ್ವಪ್ನ ಸುಷುಪ್ತಿಯಲಿ ತಾ ಸುಳಿವಯೆನ್ನೊಳವನಾಲಿಂಗ ಸವಿವ
ತೂಗುಮಂಚದಲೋಲಾಡುವ ಸುಗುಣತೇಜ
ಭಾಗೀರಥಿಯು ಮೆಚ್ಚಿಕೊಂಡ
ಸೋಗೆಗಂಗಳೆಯೆನ್ನ ಮರೆದ ತಾ ಬೆರೆದನೆಲ್ಲವ ಮರೆದ ೪

ಆದಿ ಅನಾದಿಮೂರ್ತಿಯೆನ್ನ
ಭೇದವನರಿಯ ಅಧರಾಮೃತವ ಸವಿಯ ತೊರದ
ಹಾದಿ ಹಂಬಲನೆಲ್ಲ ಬಿಟ್ಟ ಬಹುದಿಟ್ಟ ಕಾಲನ ಸುಟ್ಟ
ವಾದತರ್ಕಕೆ ನಿಲುಕದಾದ ಅದ್ಭುತಾಕಾರ
ಮಾದೇವ ಕರದಿಷ್ಟಲಿಂಗ
ಕ್ರೋಧಮನವನೆಲ್ಲ ಕಳೆದ ತಾ ತಿಳಿದ ಸಂಧಿಯು ಬೆರೆದ ೫

೧೭೬

ತಾನಾಕೆ ಮುನಿದ ನೋಡು ಜಾಣೆಇಷ್ಟಲಿಂಗೇಶ
ನಾನಾ ವಿನೋದಿ ಶಂಭು ತಾನೆ ॥ ಪಲ್ಲ

ಕಣ್ಣಿನ ಕಾಮುಗಳನೆಲ್ಲ ನೋಡಯ್ಯುಯ್ಯೊ
ಸಣ್ಣಿಸಿ ಉಣ್ಣಿಸಿ ಉಡಿಸಿ ನೋಡಿ ೧
ಚಿಂತೆಯನೆಲ್ಲವನಳಿದ ನೋಡಯ್ಯುಯ್ಯೊ
ಕಾಂತಿಯು ಭ್ರಾಂತಿಯನೆಲ್ಲವನಳಿದ ೨

ಶರಣಸಂಕುಳಕೆಲ್ಲ ಒಡೆಯು ನೋಡಯ್ಯುಯ್ಯೊ
ಹೊರೆವ ಬೆರವ ವರವನೀವ ೩

ಸೊಕ್ಕಿದವರ ಹಲ್ಲ ಕಳವ ನೋಡಯ್ಯುಯ್ಯೊ
ಬೊಕ್ಕಿಯ ಲೊಕ್ಕಿಯ ಹಾಕಿಯೆ ಕೊಲ್ವ ೪

ಅಷ್ಟದಿಕ್ಕುಗಳಿಗೆ ಕರ್ತ ನೋಡಯ್ಯುಯ್ಯೊ
ಶ್ರೇಷ್ಠನು ದೃಷ್ಟನುವಿಷ್ಟಲಿಂಗನು ೫

೧೮೦

ಒಲಿದು ಕೈಲಾಸನಿಳಿದು ಸಲಹುವೆ ಮರ್ತ್ಯವ
ಬೆಲೆಯಿಲ್ಲ ನಿನಗೆ ಹಿರಿಕುರುವತ್ತಿಯು ಬಸವ ॥ ಪಲ್ಲ

ಪಣೆಗಟ್ಟ ವಿಭೂತಿ ಹಣೆಗಟ್ಟು ಮುಖರಂಬ
ಘಣರೆಂಬೊ ಹೊಕ್ಕುಳಗಂಟೆ
ಝಣರೆಂಬೊ ಹುಲಿಗೆಜ್ಜೆ ಕೊರಳ ಸರಗಳೆಂಟು
ಹೊಣಕೆಯು ಕಾಲಪೆಂಡೆಯುವ
ಗಣನೆಯಿಲ್ಲವು ಮುಖರಂಬಕೆ ಬೆಲೆಯಿಲ್ಲ
ಘಣಘಣರೆಂಬೊ ಮೇಳ
ಬಣಗುಭೂತಗಳನು ಕುಣಿಸಾಡುತಲಿ ನಿಂದು
ಕಣೆಪರುಷವನೀವ ಬಸವಲಿಂಗಾಂಗ ೧

ಸತ್ಯಸದಾಚಾರಿ ನಿತ್ಯಾನ್ನದಾಸೋಹಿ
ಚಿತ್ತಾಹಾರವಂ ನೀಡಿ
ಹೊತ್ತು ಹೆಗಲ ಕೊಟ್ಟು ಭೃತ್ಯದಿ ಸಲಹುವೆ
ಮೃತ್ಯುಂಜಯು ಪರಮಪಾವನ
ಕೃತ್ಯಕುಹಕರನು ಚಿತ್ರವಿಚಿತ್ರಿಸಿ
ವಿತ್ತಾದಿಗಳನೆಲ್ಲ ಅಳಿದು
ಹತ್ಯೆವಿಡಿದು ಜೀವ ಸಲಹಿ ತೃಪ್ತಿಯು
ಕರ್ತೃ ಮೂಲೋಕಕಾದಿಯೆ ಬಸವಲಿಂಗ ೨

ಏಳುತ ಬಸವೆನ್ನೆ ಕಂಟಕವು ನೆರೆ ಓಡವೆ ಪರಿಹರಿಸಿ
ಧಾಳಕತನದ ಖೂಳರನೆಲ್ಲ ಜ್ಞಾನಕ್ಕೆ
ಮೇಳವ ಮಾಡಿ ನೀ ಸುಖಿಸಿ
ಪೇಳಲೆನ್ನಳವಲ್ಲ ಬಸವನ ಮಹಿಮೆಯ
ಸೂಳಿಸಿ ದಕ್ಷಿಣಕಾಶಿಯಲಿ
ಮೇಳದಿ ಮಂಡಿಸಿ ಲಿಂಗದನಿದಿರಲಿ ದೇವಭಕ್ತರನೆಲ್ಲ ಸಲಹಿ
ಕಾಳಕಂಧರಮೂರ್ತಿ ಆದಿಯು ಇವನೆಂದು
ಮಾಯದುರಿತ ಕಳೆವ ಕರದಿಷ್ಟಲಿಂಗ ೩

೧೮೧

ಅಣ್ಣ ನಿನಗೆ ತರವೆ ಈ ಬುದ್ಧಿಯು ಅಣ್ಣ ನಿನಗೆ ತರವೆ
ಪೆಣ್ಣಿಗೋಸ್ಕರವಾಗಿ ಹಣ್ಣದೆ ಕಾಯುವ ॥ ಪಲ್ಲ

ಒಂದು ಉದರದಲ್ಲಿಯು ಜನಿಸಿ ಬಂದ
ಮುಂದರಿಯದೆ ಮರೆದು
ಕಂದಗೆ ಪಟ್ಟವ ಕಟ್ಟಿ ನೀ ಸುಖದಿಂದ
ನಿಂದು ನೀನಿರಬಹುದೆ ೧

ಅರಮನೆ ಗುರುಮನೆಯು ದೈವಗಾರ
ರರಿಯರೆ ಸೂಕ್ಷ್ಮವ
ಗರುವಿಕೆ ತಮ್ಮೊಳು ತಾಳಿಕೊಂಡಿದ್ದರೆ
ಹರನು ತಾನೊಪ್ಪುವನೆ ೨

ತಳಲೋಕ ನಡುಲೋಕ ಮೇಲೋಕದ
ಕಳೆಯುಳ್ಳ ಮಹಿಮರೆಲ್ಲ
ತಿಳಿದು ನೋಡಿಯೆ ತಾವು ಹಳಿದು ಕಳೆವರೆಂದು
ಉರುಪಣೆಯಿದ್ಯಾತಕೆ ೩

ನಿತ್ಯವಲ್ಲವು ಕಾಯಕೆ ಕೇಳೆಲೊ ಅಣ್ಣ
ಸತ್ಯವು ಸ್ಥಿರವಲ್ಲದೆ
ಕುತ್ತಿಗೆ ಗರುವಿಕೆ ನಡೆಯದು ಕಲಿಯೊಳು
ಮತ್ತೆ ನೀ ತಿಳಿದು ನೋಡು ೪

ಎಲ್ಲವರಂತವರು ಅಲ್ಲವು ನಮ್ಮ
ಪೊಲ್ಲದೊಳ್ಳಿತನೆಲ್ಲವ
ಅಲ್ಲಮಪ್ರಭು ಕರದಿಷ್ಟಲಿಂಗದ ಮುಂದ
ನೆಲ್ಲವ ಗೆದ್ದುಪೋಗು* ೫

೧೮೨

ಶ್ರೀ ವೀರಭದ್ರ ಮಾತೆ ನಮೋ ನಮೋ
ಶಂಕರ ಶಾಂಕರಿ ನಮೋ ನಮೋ ॥ ಪಲ್ಲ

ಇರುವೆ ಎಂಬತ್ತುನಾಲ್ಕುಕೋಟಿ ಜೀವದಯೆ
ಮರುಕ ಮಮಕಾರಸಹನಾದಿತೀತೆ
ಪುರಹರ ನಿರ್ಮಲಾತೆ ವರ ಕರುಣನೀಜಾತೆ
ಹೆರೆಸಾರೆನೀಲೋಕಕ್ಕೆ ಜೀವಗಾಥೆ ೧

ಗಗನಂತರಂತನಾಂತು ನೀನೆ ಕಳಾಕಾಂತೆ
ಮಿಗಿಲು ದಯಾಪರಹಿತೆ ನಿತ್ಯಸತ್ಯೆ
ಸುಗುಣೆ ಸಾರಾಮೃತೆ [ಅಘ]ಹರ ಜಟಾನಿತ್ಯೆ
ನಿಗಮಗೋಚರ ಪ್ರೀತೆ ಮೃಗಧರ ಶಾಂತಿತೆ ೨

ಅಪರಂಪಾರ ನಿತ್ಯ ನೀನೆ ಚೆಲ್ವೆ
ಗುಪಿತ ಗುಮಂಟಕಿ ಪಿರಿಯೆ ನೀನೆ
ವಿಪರೀತ ಮಹಿಮೆ ನೀ ಸಕಲ ದಯಾಕರಿ
ಅಪರಂಜಿ ಕರದಿಷ್ಟಲಿಂಗ ಸಾಕ್ಷಿ ೩

೧೮೩

ಏಕೆ ದಯಮಾಡಲೊಲ್ಲೆ ಎಲೆ ಶಂಭು
ಲೌಕಿಕದೊಳು ಕೂಡಿಸಿ
ಸಾಕಾರವಾಗಿ ನೀ ಬಂದು ರಕ್ಷಿಸಿಯೆನ್ನ
ಏಕೊ ಪರಶಿವನೆ ಕೇಳು ॥ ಪಲ್ಲ

---

* ಇಲ್ಲಿಂದ ಮುಂದಕ್ಕೆ ೮ ವಾರ್ಧಕಷಟ್ಪದಿಗಳಿವೆ.

ಸತ್ಯ ಉಳ್ಳಂತವರಿಗೆ ಎಲೆ ಶಂಭು
ಕೃತ್ಯನಿಂದ್ಯವು ಬಾಳವು
ಹತ್ತೆ ಸೇರಿಸಬೇಡ ಮೃತ್ಯು ಮಾನವರೊಳಗೆ
ಚಿತ್ತವಿಸಿ ಕೇಳು ಪ್ರಭುವೆ
ನಿತ್ಯವರಿಯುದ ಮೂಢರು ಕಲಿಯೊಳಗೆ
ವಿತ್ತರಿಸಿ ಶರಣರಲ್ಲಿ
ಮತ್ತೆ ನನಗಿನ್ನಾರು ಸರಿಯಿಲ್ಲಯೆಂಬವರ
ಕತ್ತರಿಸು ಕಿವಿಮೂಗನು ೧

ಹೀನಜಾತಿಗಳುಯೆಲ್ಲ ಕೂಡಿನ್ನು
ಮಾನ ಅಭಿಮಾನಗಳಲಿ
ಶ್ವಾನಸಿಂಹವ ಕೂಡೆ ಸೆಣಸಿ ಸರಿಯೆಂಬುವರ
ಏನೆಂಬೆನಯ್ಯ ಪ್ರಭುವೆ
ತಾನರಿಯ ವಾದದಲ್ಲಿ ಘನವೆಂದು
ಜ್ಞಾನಬೋಧಾಮೃತರೊಳು
ನಾನು ನೀನೂ ಸರಿಯೆಂಬ ತರ್ಕಗಳನು
ಕೊನೆನಾಲಿಗೆಯ ಚಿವುಟಿ ಪ್ರಭುವೆ ೨

ಉಂಡುಂಡು ಮನೆಗಳಲ್ಲಿ ಘಾತಕವ
ಪೊಂಡ ದಿಂಡೇರುಯೆಲ್ಲರು
ಭಂಡುಮಾಡುವರು ಬಲಾಢ್ಯ ಮಾನ್ಯವಿಗಳ
ಕೊಂಡೆ ಚಾಡಿಯಲಿ ಪ್ರಭು
ಗಂಡನುಳ್ಳ ಗರತಿಯ ನೋಡಿನ್ನು .
ಲಂಡೆಯೆಂಬುತ ಸರಸವ
ಮಂಡಿಸಿಯೆ ಕುಳಿತು ರತಿಕ್ರೀಡೆ ವಂಚಿಸುವಂಥ
ದಿಂಡೆ ಮಸ್ತಕರ ಶೂಲ ೩

ಆದಿಭೇದವನರಿಯುದೆ ಮಾದಿಗರು
ವಾದಿಸಿಯೆ ಹಿರಿಯರೊಳಗೆ
ಕ್ರೋಧ ಮನದಲ್ಲಿಟ್ಟು ಮಾದೇವ ಶರಣರೊಳು
ಕಾದಿ ತಾ ಗೆಲುವನೆಂದು ಸಾಧನೆಯ ಕೃತಕದಲಿ ಮಿಗಿಲೆಂದು
ಹೋದರಗಣಿತ ಕೋಟಿಯುಗದಿಯಲ್ಲವುಯೆಂದು
ಶೋಧಿಸಿಯೆ ನೋಡಿನ್ನು ಮಾಧವನ ಬಳಗವೆಲ್ಲ ೪

ನಾಗಭೂಷಣ ಮಹಿಮರ ಕೂಡಿನ್ನು
ಆಗ ಸರಸಗಳಾಡಲು
ಕಾಗೆ ಕೋಗಿಲೆಯೊಡನೆ ಸೆಣಸಿ ಸಲಿಸೆಂಬುವ ತಾ ಗೆಲ್ಲುವದೆ
ಮೂಗ ಮೂರ್ಖರುಯೆಲ್ಲರು ಭೋಗ
ಭೋಗಾದಿಗಳಿಗೆ ಮಿಗಿಲೆಂದು
ಯೋಗಿ ಮುನಿನಾಥ ಆದಿ ತಾ
ಭಾಗಿರಥೀಪ್ರಿಯ ಕರದಿಷ್ಟಲಿಂಗವೆ ನಿಮ್ಮ ಮರದವರಿಗಿಂಥ ಪ್ರಾಪ್ತಿ ೫

೧೮೪

ಅಯ್ಯಾ ನಿಮ್ಮ ನಿಜದ ನಿಲವ ಪ್ರಿಯಮಾನ್ವರರಿಯರಿನ್ನು
ಹೊಯ್ಯಲರಿಯದಧಮರೆಲ್ಲ ಕ್ರಮನ ದಪ್ಪುವರು ॥ ಪಲ್ಲ

ಬಿಡದೆ ನಿಮ್ಮ ಸ್ತುತಿಯೊಳಿಪ್ಪ
ನುಡಿಯ ಮರೆಯ ಮಾಡಲೇನು
ಮಡದಿಯು ತಾನಾಗಿ ತಂದು ಅಗ್ನಿ ಮುಂದಿಡೆ
ದೃಢದಿ ನಿಮ್ಮ ಪೂಜೆ ಮಾಳ್ಪ
ಸಡಗರ ಗಮ್ಮಗೆಯು ಪೊತ್ತೆ ಗಡಗಡನೆ
ನಡುಗಿ ದೇವ ಕಳಲುತಿರ್ಪರು ೧

ಮರೆಯ ಮಾಡಬೇಡವಯ್ಯ
ಬರಿಯ ಹೊಂಡಭಜಕರುಗಳ
ಮುರಿದುಹಾಕು ಯಮನಪುರದ ಕುಂಡದಲ್ಲವರ
ಅರಿವ ಬೆರವ ಕುರವ ಹರವ
ಗರುವ ಮುರಿವ ತರಳನನ್ನು
ಮರೆಯದೆ ನೀ ರಕ್ಷಿಸೆನ್ನ ತಂದೆ ಶಂಕರ ೨

ನೀನು ನಿನ್ನ ನಿಜವ ಮಾಡೆ
ತಾನು ನಿನ್ನ ಮರವ ಮರೆವೆ
ಭಾನು ತಮವ ಅಟ್ಟಿ ಓಡಿಸುವ ಪರಿಯಾವೆ
ಜ್ಞಾನಹೃದಯ ಬೆಳೆಯ ಬೆಳೆಸು
ನೂನವಿಲ್ಲದೆನ್ನವಿಡಿದು
ತಾನ ಮಾಡಿಯಿರಿಸು ಕರದವಿಷ್ಟಲಿಂಗನೆ ೩

೧೮೫

ಹರನೆ ಬಾರೊಯೆನ್ನ ಭಾಗ್ಯದಯಿರವೆ ಬಾರೊ
ಮುನಿಜನಾದಿಯ ಹೊರವೆ ಬಾರೊ ಮರಣದೂರನೆ ಸಿರಿಯೆ ಬಾರೊ ॥ ಪಲ್ಲ

ಭೂಮಿಜನಗುತ್ಪತ್ಯ ಒಡೆಯನೆ
ನಾಮರೂಪ ಕ್ರಿಯಹರಮಾರಿ
ಸೋಮಸೂಡಿದ ದೇವ ಬಾರೊ ಮಹಿಮ ಬಾರೊ
ನೇಮನಿತ್ಯಕಾದಿ ಬಾರೊ
ಕಾಮಸಂಹರ ಪ್ರೇಮಿ ಬಾರೊ
ಹೇಮಪರ್ವತದರಸೆ ಬಾರೊ ವಿಕಾಯ ಬಾರೊ ೧

ಬಂಧುಬಳಗದ ಮುಂದೆ ನಿನ್ನನು
ಹೊಂದಿ ಘನಸ್ತುತಿ ಮಾಡಿದಂತದ
ಚಂದದಿಂದಲಿ ಒಪ್ಪವಿಟ್ಟು ನೀ ರಕ್ಷಿಸೆನ್ನ
ಹಿಂದೆ ಮುಂದೆಯು ಪರಿಹಾಸಾರ್ಥವ
ನಿಂದು ಆಡುವ ಲೌಕಿಕೆಲ್ಲಕೆ
ಬಂದು ಕೀರ್ತಿಯ ಗಳಿಸಿಕೊಳ್ಳೊ ಪ್ರಚಂಡರಮಣ ೨

ಚರಚೆಯಾಡುವದೊಳ್ಳಿತಲ್ಲವೊ
ಹಿರಿಯ ಕಿರಿಯರೊಳಾಗುವಂತದ
ಉರಿಯಕಣ್ಣಿನ ಶಂಭುಶಂಕರ ಕರುಣಿ ಬಾರೊ
ಪುರವೈರಿಯ ಮರ್ದನನೆ ಬಾರೊ
ಕರಕಪಾಲಪ್ರಿಯ ಬಾರೊ
ತರಳೆ ಭಾವಕಿ ಮೆಚ್ಚಿವಿಷ್ಟಲಿಂಗ ಬೆರೆದ

೧೮೬

ನೀರಜಮುಖಿ ಕೇಳ ಭಾಳನೇತ್ರನು ತಾನು ಮರೆದೊರಗಿದ ಮೇಲೆ
ಏರಿ ಬದಿ ಮುಟ್ಟುತರವೇನು ತನಗಿಂಥ ಸರಸದೋರುವದು ॥ ಪಲ್ಲ

ಬಿಡದೆ ತಕ್ಕೆಯೊಳಿಡೆ ಮುಡಿವಿಡಿ ಮುದ್ದಿಡುವನು
ಕಡಿವಿಡಿದೆನ್ನನು ದಿಡುಗ ದಿಡುಗ ಮಾಡಿ
ಕಡೆಗೆ ತಾ ಪೋಗುವ ಬೆಡಗ ನೀ ಕೇಳು ೧

ಇಷ್ಟಲಿಂಗ ಅಂಕಿತದ ಸ್ವರವಚನ

೧೯೫

ಬಿಬಿಜಿಬಿ ನಾಣ್ಯವನುಟ್ಟು ಗಾಬರಿಯಲಿ ಪಿಡಿದು
ಸಬಿಸುರತಿಕೆಯ ಮಾಡಿಯೆನ್ನನು ಜಗ್ಗಿ
ಅಭಿಮಾನನೆಲ್ಲವ ತಾನು ಸೂರಾಡಿಕೊಂಡ ೨

ಕೊರಳಹಾರವ ಪಿಡಿದ ಮರುಳಾಟವನು ಮಾಡಿ
ಆರತಿಯಿಂದಲಿ ಪಿಡಿದು ಸೊಗದಿ ಜೋಡ
ಉರವಣೆಯಲಿ ನಖಗೆರೆಯ ಮಾಡಿದನೆ ೩

.... ಸೃಷ್ಟಿಲಿ ತಾ ನೋಡಿದರೆ....
ನಷ್ಟವ ನೋಡಲಿಲ್ಲ ದೃಷ್ಟಪ್ರಭು ೪

ತೂರ್ಯತವಕ ಮಾಡಿ ಕಾರ್ಯನೆಲ್ಲವ ಗೆದ್ದು
ಸೂರ್ಯಚಂದ್ರರ ಪ್ರಭೆ ಬೆಳಕ ತೋರಿದ ಕಾಣೆ
ಭಾರ್ಯೆ ಸನ್ನೆಯನರಿದ ಕರದಿಷ್ಟಲಿಂಗ ೫

೧೯೭

ಸುಜನ ಕುಜನ ಸರಿಯೆ ಮೂಜಗದೊಳು
ಅಜಗೆ ಹರಿಯು ಸರಿಯೆ
ತ್ರಿಜಗದೊಳಗೆ ನಿಜವಾಕ್ಯವನಾಡುವ
ಭಜಕಭಂಡರು ಸರಿಯೆ ॥ ಪಲ್ಲ

ಮಾರಹರ ಮರೆದು ಮಚ್ಚರಿಸಿಯೆ
ದುರುಳಸಿರಿಯನಾಳುವೆ
ಪೋರನಾಗಿಯೆಸದೆ ಬೀಜದ ತಲೆಯಾದ
ವೀರನವತಾರದಿ ೧

ಸಂದೇಹವಿಲ್ಲದಲಿ ವ್ಯಾಘ್ರನು ತಾನು
ಒಂದು ಜೀವುಳಿಯದಲಿ
ತಿಂದು ಸೊಕ್ಕಿಯೆ ಮೀರಿ ಮಲತರ ಶಿಕ್ಷಿಸಿ
ತಂದೆ ಪೊದ್ದುದನರಿಯ ೨

ರೂಪ್ಯ ಅಂಬುಧಿ ಜನಿಸಿ ಧಾತ್ರಿಯೊಳು
ತಪ್ಪಿ ನೀರಾಗದಂತೆ
ಹಿಪ್ಪೆಯ ತಿಂದು ನರಿಯು ಸೊಕ್ಕಿ ಮದ್ದಾನೆಯ
ತಪ್ಪಿ ತಾ ಜರಿಯಲೇನು ೩

ಮಾರದೈತ್ಯನೆಂಬವ ಸೊಕ್ಕಿಯೆ ತಾನು
ಪಾರುಮಾಡಿದನೆಲ್ಲರ
ದಾಮೋದರನು ಅರ್ಥಕಿವಿಯನು ಕೊರಸಿದ
ನಾಡಗಾದೆಯನರಿಯ ೪

ದಿಕ್ಕುಪಾಲರುಯೆಲ್ಲರು ವಂದಿ ಪೊಗಳೆ
ಸೊಕ್ಕುಮುರಿಸಿ ಕೊಂದರು
ಮುಕ್ಕಣ್ಣ ಕರದಿಷ್ಟಲಿಂಗಜ್ಞಾನತರ
ತರ್ಕಿಸಿ ಕೆಡಲಿಬೇಡ ೫

೧೮೮

ಬೆಳಗಾಯಿತು ಏಳಿ ಲಿಂಗಪೂಜೆಗೆ
ಕಳೆಯುಳ್ಳ ಮಹಿಮರೆಲ್ಲ ॥ ಪಲ್ಲ

ಅಳವುಳ್ಳ ಕಾಂತೆರೆಲ್ಲ ಕಾಮಾರಿಯ
ಬಳಿವಿಡಿ ಪೂಜೆಗೆಯು
ಸುಳುವು ಪಾವನಮೂರ್ತಿವಳವರಿದೆಲ್ಲ
ತಳುವದೆ ಪದವೀವ ನಳಿನಾಕ್ಷಿ ಕೇಳು ೧

ಕನಕಪುತ್ತಳಿ ಕೋಮಲ ಕಾಮಾಕ್ಷಿಯೆ
ಕನಕಾದ್ರಿನೆಲೆವಾಸಗೆ
ಏನಯು ಉಪಚರಣೆಯ ತನು ಮನ ಧನವನು
ಘನಕುಸುಮವನೀಪೂರಿತ ಪೂಜೆ ಮಾಡು ೨

ದೇವರಿಗೆಯು ದೇವನ ಶಂಕರನೆಂಬ
ಬಾವನ್ನಾರೋಗಣೆಯ
ತೀವರದಲಿ ನೀಡಿ ನಾಗವಳ್ಳಿಯನಿಟ್ಟು
ಜೀವದಯಪಾಲಿವಿಡಿದು ನೀ ಮಾಡು ೩

ವಿಶ್ವಜನದ ತಾತಗೆ ವಿಶ್ವಶಿಕ್ಷೆಗೆ
ವಿಶ್ವಾಸ ಮನ ಬೇಗದಿ
ವಿಶ್ವಾಶೇಶನ ಪಾಸಿ ವಿಶ್ವಾನಿಧಾನದಿ
ವಿಶ್ವನಾಥೆಯೆವೀಶ್ವರನ ಪೂಜೆ ಮಾಡು ೪

ಎಂದೆಂದಿಗು ಮರೆಯೂ ಈ ಶಿವಪೂಜೆ
ಬಂಧು ಬಳಗ ಕೂಡಿ ನೀ
ಚಂದ್ರಕೋಟಿಯು ಶಾಂತಿ ಕರದಿಷ್ಟಲಿಂಗವ
ಇಂದುವದನೆ ಪೂಜೆಮಾಡು ನೀ ಏಳು ೩

೧೮೯

ತರುಣಿ ಕೇಳೆನ್ನನಗಲಿಯೆ ಪೋದನು
ಅರಿಯೆ ಇಂತಿವನ ತ್ರಿಜಗದೊಳಗೆ
ಶರಣಾಗತರಕ್ಷಿಪ ಪ್ರಭುಲಿಂಗವು
ತೆರಳುವದುಚಿತವೆ ಹರಿಣಾಕ್ಷಿ ಕೇಳು ॥ ಪಲ್ಲ

ತನುವಿನ ಕಪಟ ತೊಳೆದು ಶುಚಿಮಾಡುವ
ಮನವಿನ್ನೇತರಿದೆನ್ನ ಸವಿಯು ತೆಕ್ಕೊಂಬ
ಮನು ಮುನಿ ಸ್ನಾತಕ್ಕೆ ಮೌಳಿತಾಯೆನ್ನ ಕೂಡೆ
ಮಿನುನಗೆಯಲಿ ಮಿಂಚಿ ಹೊಳಕುವದೇನು ೧

ಶಕ್ತಿಗೆ ಚೈತನ್ಯ ಯುಕ್ತಿಗೆ ಕಾರುಣ್ಯ
ಮುಕ್ತಿಗೆ ಸೋಪಾನ ಮುನಿಗಣವಂದ್ಯ
ವ್ಯಕ್ತವಾಗೆನ್ನ ಕೂಡೆ ಭಕ್ತಿದಾರಿಯ ತೋರಿ
ಲಿಕ್ತಿಗೊಡೆಯೆನ್ನನಗಲುವದೇನು ೨

ಆಗಮನಿಲುಕನು ಯೋಗಿಯೊಳಧಿಕನು
ಭಾಗೀರಥಿಗಭವಭರಿತನಾಗಿರುವ
ತೂಗುಮಂಚದ ಸುಷ್ಪತ್ತಿಗೆಲೋಲಾಡಿ
ಸಾಗರ ಸನ್ನಹಿತ ಕರದಿಷ್ಟಲಿಂಗ ೩

೧೯೦

ಹರಸುರಿಗಣ್ಣಿಂದ ಪುಟ್ಟಿದ ತರಳ ಬಾರೊಯೆಮ್ಮ ಐಸಿರಿ
ದುರುಳ ರಾಕ್ಷಸರ ಸಂಹರಿಪ ಚೆನ್ನಬಸವ ಬಾರೊ ॥ ಪಲ್ಲ

ಇಂದು ನಿನ್ನ ಮುಖ ಕಳೆಯುವೇರಿತು
ಏನು ಇಲ್ಲಿಗೆ ಬರಲು ಯಾತಕೆ
ಬಂದ ಕಾರಣವೇನೊ ಪೇಳೊ ಇಂದುಧರನೆ
ಹೊಂದಿ ಹೊರೆದವರನೆಲ್ಲ ರಕ್ಷಿಸು
ಮಂದದೈತ್ಯರ ಶಿರವರಿ
ಕಂದುಗೊರಳನೆ ಕರುಣಿಸೆನ್ನನು ತಂದೆ ಬಸವ ೧

೧೭೨

ಬಲುಕೋಪವ ತಾಳ್ದುರಿಯ ಬಿಸಿಲಿಲಿ
ಉಲುಕದಲಿ ನೀ ನಲಿದು ಬಂದುದ
ನೆಲೆಯು ಕಾಣ ಲೌಕಿಕೆಲ್ಲಕೆ ಚೆಲುವ ಶಂಭು
ಮಲಹರನು ಮಮಕರ್ತುದೇವನು
ಕಲಹಪ್ರಿಯ ಮಾಡಿದೆಲ್ಲಕೆ
ನಿಲಗೊಡದೆ ಕಳುಹಿದನು ಇಕ್ಕೇರಿ ಪುಣ್ಯಸ್ಥಲಕೆ ೨

ದಿನದಿನಕೆ ಅರುಕುರುಹ ತೋರುತ
ಚಿನುಮಯನು ಚಿದ್ರೂಪಕಾರನು
ವಿನುನಿಷ್ಠೆಯ ಬಲವ ಮುಂದೆ ಕೊಡುವ ದೇವ
ತನುಸಿರಿ ಭೋಗಕೆಲ್ಲಕೆ
ಘನವ ಮಾಡಿಯೆ ತೋರಿ ರಕ್ಷಿಪ
ಕನಕಗಿರಿ ನೆಲೆವಾಸ ಕರಸ್ಥಳದಿಷ್ಟಲಿಂಗ ೩

೧೯೧

ಶ್ರೀ ಗುರುವೆ ಶಿವಲಿಂಗ ಸುಜನಸಾರಹೃದಯ
ಯೋಗಿಜನಹೃನ್ನಿವಾಸ ಈಶ
ಯೋಗದೃಷ್ಟಿಲಿ ನೋಡಿ ರೋಗ ಪರಿಹರಿವಂತ
ಭಾಗೀರತಿ ರಮಕಾಂತ ಶಾಂತ ॥ ಪಲ್ಲ

ನುಡಿವ ನಾಲಿಗೆ ಕೊನೆಯುವಿಡಿದು ಸಾರಾಮೃತವ
ಮಿಡಿವ ಹರಪ್ರಭುವೆ ಸಂಗಲಿಂಗ
ಇಡಿಕಿರಿದು ಕಾಮಕ್ರೋಧವನೆಲ್ಲ ತಿಳಿವಂತ
ಸಡಗರದ ಮೂರ್ತಿ ನೀನೆ ಜ್ಞಾನಿ
ಮಡದಿಯೊಳಜಗೆ ಮೊನೆದೋರಿ ಮಂಡೆಯೊಳಿಟ್ಟೆ
ಕಡಲನತಿಮಥನ ಸಾರ ಧೀರ
ಉಡುಪತಿಯು ಮಿಡಿದೇಳೆ ಬಿಡದಲತಿವಿಷಕಾರೆ
ಸಡಗರದ ಶ್ರಾವನಿಷ್ಟಯೆಷ್ಟ ೧

ಗುಹಜನನದೆರೆಡೊಂದ ಪೊಳಲ ಶಿಖಿಯಲಿ
ದಹಿಸಿ ಮಹಗಣರನೆಲ್ಲನುಳುಹಿ ತಿಳುಹಿ
ತಹಮಾಡಿ ತವಕದಲಿ ಸಾಮಜಹಚ್ಚಡ ಮುಸುಕಿ
ಮಹಕಾಳಿಯೊಳು ಸರಸವ ಬೆರೆವ

ಬಹಳ ಕೋಪಗಳಿಂದ ಉರಿಯು ನೇತ್ರಗಳಲ್ಲಿ
ಕಾಹ ಮನಂ ದಹಿಸಿಯಿಟ್ಟದಿಟ್ಟ
ಗಾಹವಳಿಯ ಸುರರ ಬಲಿಗಿಕ್ಕಿ ಸಾರಥಿಯನರಿದು
ಮಹಾ ವೀರಭದ್ರ ಲೆಂಡ ಚೆಂಡ ೨

ತಮಪೆಂದು ಜರಿದರೆಯು ಕ್ರಮದಿ ನೀತಿಯ ಪೇಳಿ
ಉಮೆಯರ್ಧದೇಹ ನಿತ್ಯಸತ್ಯ
ಹಿಮಗಿರಿಗಳಲಿ ನಮೊಯೆಂದು ಸೊಲ್ಲಿಸಿ
[ಕ್ರಮ]ವಿಡಿದು ಸತಿಯರೆಲ್ಲ ಗೆಲ್ಲ
ಯಮ ಅಂಧಕಸುರನದಮುಕಿಯದೆ ನಾಂಟಿತನ
ದಮಿತಾಂಗ ಶಶಿಯ ಜೊಡ ಕ್ಷೇಡ
ಅಮಮ ಶಾಂತೇಶ ಕರಸ್ಥಳದಿಷ್ಟಲಿಂಗೇಶ
ಪ್ರಮಥಾದಿಗಣರನುಳುಹು ಸಲಹು ೩

೧೯೨

ಆರಿಗಾರಿಗೆ ಇವನ ನೆಲದರಿವು ಕಾಣಿಸದು
ಮಾರಹರ ಶಿವ ಬಲ್ಲ ಬಸವನಾತ್ಮವನು ॥ ಪಲ್ಲ

ಅಸಮಾಕ್ಷ ಶಂಭುಶಂಕರ ತನ್ನರಿವಿನಿಂದ
ದೆಸೆಯುಳ್ಳವನು ಬಸವನಲ್ಲದಿನ್ನಿಲ್ಲ
ವಸುಧೆಯೊಳಧಿಕ ಹರಪುರದಿ ಮಧ್ಯದಮಾರ್ಗ
ವಶವಾಗಿ ನಿಂತು ಪೂಜಿಪುದೆಂದನು ೧

ದಿಕ್ಕನೆಂಟೆಲ್ಲಕೆ ಸತ್ಯ ಸಮರಸ ನಿತ್ಯ
ಒಕ್ಕಣಿಸಿ ವೇದಶ್ರುತಿ ಸಾರುತಿರಲು
ಮೂಲೋಕ ಶಂಭು ಆತ್ಮದತತ್ವ ನೀನೆಂದು
ಸೊಕ್ಕಿದರ ಪಲ್ಗಳನು ಕಿತ್ತು ಬಿಸುಡುವನೆ ೨

ಧರ್ಮವೆ ಮುಖರಂಬ ವಾಗ್ಯವೆ ಸಲೆ ಸತ್ಯ
ನಿರ್ಮಳವೆ ತಡಿವಳೆಯು ಶಾಂತಿ ಬಾಲ
ಕರ್ಮಕಂಟಕನಳಿವ ಕಾಲಪೆಂಡೆಯನಿಟ್ಟ
ಧರ್ಮಸ್ವರೂಪ ಭಸಿತ ಧರಿಸಿ ನಿಂದ ೩

೧೭೪

ತೊಡೆಯೊಳಗೆ ಶಿವಗಿರಿಜೆ ಕೊರಳಲ್ಲಿ ಗಂಗೆಯನು
ನಡಿಗೂಡಿನಲ್ಲಿ ತುಂಬುರನಾರದ
ಇಡುಕಿರ್ದ ರೋಮ ರೋಮಕೆ ಕೋಟಿಲಿಂಗವನು
ಮಡಪಾದಲಡಗಿಸಿದೆ ಬ್ರಹ್ಮಾಂಡವ ೪

ಶಿವಸಭೆಗೆ ಗಣಕಾದಿ ಬಸವನಿಂದಿನ್ನಿಲ್ಲ
ಭುವನ ಬ್ರಹ್ಮಾಂಡ ರಕ್ಷಿಸುವಂತದ
ಶಿವಭಾವ ನೋಡಿ ನುಡಿ ನಡೆ ಹಸ್ತ ಪರುಷವನು
ವಿವರದಿಂ ಸಂತುಷ್ಟವಾಗಿ ರಕ್ಷಿಪನ ೫

ಮನಕೆ ಮಂಗಲವಾಗಿ ಕಣ್ಗೆ ಕೌತುಕವೆನಿಪ
ದಿನಕೋಟಿ ಶಾಂತಮಯಂ ಮಂಗಳಾಂಗ
ತನು ಧನ ಮನವ ಜಂಗಮಲಿಂಗ ಸಂಗವನು
ಅನುದಿನವು ಬಿಡದೆ ನಡೆ ಬಸವಲಿಂಗನ ೬

ಇಂತು ಗಣನೆಂಬತ್ತುನಾಲ್ಕೋಟಿ ಜೀವ ಕೆ
ಶಾಂತಿ ಸ್ಮರಣೆಯಿಟ್ಟು ತೃಪ್ತಿಸುಖಿಸಿ
ಚಿಂತಿತಾರ್ಥವನೀವ ಬಯಲ ಬಸವೇಶ್ವರನ
ಕಾಂತಿ ಕರಸ್ಥಳದಿಷ್ಟಲಿಂಗ ತಾ ಬಲ್ಲ ೭

೧೯೩

ಆದಿಗುರು ಫಕೀರ ಸ್ವಾಮಿ ಮಹಿಮವ ಕೇಳಿ
ಮೂದೇವಗಾಧಾರನಾದ ಮಹಿಮನನ ॥ ಪಲ್ಲ

ಶಾಂತಿಚಂದ್ರಮ ನಯನ ವಾಕ್ಯ ಸೋನೆಯು ಕ್ಷೀರ
ಕಾಂತಿಮುಖ ಶ್ವೇತಕರ್ಣೋಂಕಾರದ
ದಂತಪಂತಿಕ ನಾಸಿಕಂ ಪನ್ನಿ ನೀರಲದ
ಶಾಂತರಸ ದೇಹಪೂರ್ಣಾಕಾರವ ೧

ಬಂದ ಭರದಲಿ ಗೃಹವ ಪೊಕ್ಕು ಬಾಲಕರಿಂಗೆ
ನಿಂದು ತೋರಿಯೆ ಮೂರು ನಯನಗಳನು
ನಿಂದು ನಿಲ್ಲದೆ ಬಂದು ತಾಯಿ ತಂದೆರಿಗುಸುರೆ ಇಂತಿದೇ
ನೆಂದು ನೋಡಲು ಮಾಯವಾಹದ ೨

ಆಸರದೆ ತಿರಿದೆಲ್ಲ ಕುಲ ಆವದೆನ್ನದಲಿ
ಈಶಜೀವರಿಗೆ ತುತ್ತಿಡುವ ತೆರದಿ
ಸಾಸದಲಿ ಶ್ರೀ ವೀರಭದ್ರನವತಾರದಿಂ
ಭಾಷೆ ಬಯಿದೆಲ್ಲರಿಗೆ ಸುಖವೀವನು ೩

ನೋಡಿದರೆ ಕುರುಹಿಲ್ಲ ಮಾತಾಡಿದರೆ ಸುಲಭಿಲ್ಲ
ಬೇಡಿಮುದ ನಿಜಭಾವ ಕೊಡುವವನ
ನಾಡಾಡಿ ಮಹಿಮರೊಳಗಲ್ಲ ಮಹಾಘನ ನಾಡಿ
ಪಾಡುಪಂಥವ ಗೆಲಿಲಿಕಾಧಾರನು ೪

ಇರುತಿರಲು ಫಣಿಪುರದ ದೊರೆಯು ಹನುಮಂತನನ
ಒರೆದು ನೋಡುವ ನಿಮ್ಮ ನಿಜವರಿಯುನು
ತೆರಳಿದರು ಶಿತಪುರಕೆ ಶಿವಸ್ಥಾನವಿದೆಯೆಂದು
ಸ್ಥಿರ ಕರದವಿಷ್ಟಲಿಂಗದಿ ಬೆರೆದನು ೫

೧೯೪

ಕಾಣೆನಿವನ ಮೂರುಲೋಕದಿಯೆನ್ನ
ಪ್ರಾಣದೊಡೆಯ ಪರಹಿತಾಯನಾರೆ ರತಿಜಾಣನ ॥ ಪಲ್ಲ

ಭೋಗಕಾದಿಯು ಪರಮನುರಾಗಿ ಈತ
ನಾಗರೇಳರಾಜರಾದಿಪೂರಿತ ಸುಭೋಗನ
ಸೋಗೆಗಂಗಳೆಯೆನ್ನವಿನಿಯನು ತಾ
ನಾಗಮನಿಧಾನಭೇದದಾದಿ ನೆಲೆಯುನರುಹನ ೧

ವೀರರೊಳಾದಿವಿಕ್ರಮನ ಪೋಲ್ವ ತ್ಯಾಗ
ಸಾರಾಯ ಸಾಮ್ರಾಜ್ಯಕರ್ಣ ಭೋಗಕೆ ದೇವೇಂದ್ರನ
ಕ್ಷೀರಸಾಗರ ಜನನ ಮುಗ್ಧೆಯಳೆ ನನ್ನ
ವಾರಿಗೆ ನಾರಿರೊಳಗೆ ಹರಿ ಮೀರಿ ಪೋದನೆ ೨

ಹಿಂಡುದೇವರಿಗೆಯಾ ದೇವನ ನೋಡಿ
ಕಂಡು ಪರಮ ಮುರಿಗಿಸ್ವಾಮಿಪಾದಪೂಜೆಲಿರುವನ
ಮಂಡಲದೊಳಗಾದಿ ಗುತ್ತಲಪ್ರಭು
ದ್ದಂಡ ಲಿಂಗರಾಜಪವರಹನು ಭೂಪರಾಯನ ೩

೧೯೫

[ಏಣ]ಲೋಚನೆ ನಾ ಕಾಣೆನು ಪ್ರಾಣಕಾಂತನ ॥ ಪಲ್ಲ

ಕುಂಭಿನಿಯೊಳಧಿಕವಾದ ಗುತ್ತಲ
ಶಂಭುಭಕ್ತನಾದಿಲಿಂಗದೇಸಾಯಿ ಬಾದ್ದೂರನ
ನಂಬಿಗೆ ಕುಮಾರಪಟ್ಟಕಾದಿ ಹನುಮಭೂಪನ
ರಂಭೆ ರತಿದೇ....ಲ್ಪ ಸತಿಯು ಜನಕೊಲಿದನ
ನಂಬಿಗೆ ತನ್ನವರಿಗೆಲ್ಲ ತಂದೆಯಾಗಿ ಸಲವನ
ಅಂಬುಜಮುಖಿಯೆ ಕೇಳು ಜಂಗಮಕಾಧಾರಲಿಂಗನ ೧

ದೇಶ ದೇಶದ ದೇಸಾಯಿಗಾದಿವ್ಯಾಸವುಳ್ಳನೆ
ಸಾಸದಿ ಸಮರಂಗ ಧೀರ ಭಾಸುರ ತೇಜಾದಿಯ
ಬಾಸೆನಾಡಿ ಭಕ್ತರಿಂಗೆ ನಡೆವ ವಿನೋದಾದಿಯ
ಲೇಸನು ವಿದ್ಯಾಧಿಕರಸಾರಾಯ ವಿನೋದಿಯ
ಪೂಶರನ ಚೆಲ್ವನಾದ ವೀರಾವತಾರಾದಿಯ
ಮೀಸಲವೆಣ್ಣೆ ನೀ ಕೇಳು ಅಘಪೂರಾದಿಯ ೨

ಹಿಂದಾದೆಲ್ಲವು ಪೂರ್ವಾರ್ಜಿತದಿಂದು ಪೋದುದ
ಕಂದುಗೊರಳ ಶಿವನ ದಯದಿಂದ ಮಾನ್ಯಪಡದನು
ತಂದೆ ತಾಯಿ ಬಂಧು ಬಳಗ ರಾಜಾದಿ ಕೀರ್ತಾದನು
ಮುಂದೆ....ದಾನ ಸಂಪ್ರೀತನು
ಹಿಂದೆ ಕುಜನವಾಡುವಂಗೆ ನಿಂದೆದೆಗೂಟಾದನು
ಇಂದುಮುಖಿಯೆ ನೀ ಕೇಳು ಮಂಡಲಭೂಪಾಲನು ೩

ಭೋಗಕಿಂದ್ರಲೋಕ ಮಿಗೆ ತಕ್ಕ ತ್ಯಾಗಿ ಕರ್ಣನೆ
.... .......ಸಗುರುನಾಮರೂಪಕ್ರಿಯನೆ
ನೀಗಿದ ನಯನಂಗಳನುನಿತ್ತ ಕ....ದೆರದನೆ
.... -- ............
....ಭೋಗಕಾದಿವೆಣ್ಣೆ ಕೇಳು ಸ್ತ್ರೀಭೋಗ ಸಂಪೂರ್ಣನೆ ೪

........ನೆಲ್ಲ ಬಂಧುವರನಗಲಿದ
ಪುಣ್ಯವ್ರತೆಯು ಮಣಿಯುವಗೆ ಒಪ್ಪಿಸಿ ತಾ ಪೋದುದ
ಹುಣ್ಣಿಮೆಚಂದ್ರನ ಶಾಂತಮುರಿಗಿವಿಷ್ಟನ ಬೆರೆದುದ
ಹೆಣ್ಣೆ ಕೇಳು ಕೈಲಾಸದಿ ತಣ್ಣಗೆಯಿರುವದ ೫

೧೯೬

ಸೋಬಾನದ ಪದ :

ಶ್ರೀ ಗುರು ಶಿವಯೋಗಿಶಂಗೆ ಶ್ರೀ ಗುರು ಭುವನೊಡೆಯನಿಗೆ
ಶ್ರೀ ಗುರು ಕಪ್ಪುಗೊರಳನಿಗೆ ಪ್ರಮಥನಿಗೆ
ಶ್ರೀ ಗುರುವೆಂದು ಶುಭವೆನ್ನಿ ॥ ಸೋ ೧

ಜನನ ಮರಣ ವರ್ಜಿತನಿಗೆ ಜನಜೀವ ಜೀವನಿಗೆ
ಜನಕಾವನಾದ ಅಧಿಕನಿಗೆ ವರನಿಗೆ
ಜನಸುತನಾದ ಶಿವನಿಗೆ ॥ ಸೋ ೨

ನೆಲೆಯಿಲ್ಲದವನಿಗೆ ನೆಲೆವೊಲಿದಾತನಿಗೆ
ನೆಲೆಯನೆಲ್ಲರಿಗೆ ಕರುಣಿಪಗೆ ಕಲಾಪನಿಗೆ
ನೆಲೆವಂತ ಪರಮಿತ ಹರಗೆ ಶುಭವೆನ್ನಿ ೩

ಸತ್ಯನಿತ್ಯಾತ್ಮನಿಗೆ ತಥ್ಯ ಫಣಿಪಪ್ಪನಿಗೆ
ಅತ್ಯಂತ ಪ್ರಮಥನಮಿತನಿಗೆ ಈಶ್ವರಗೆ
ಚಿತ್ತ ಒಲಿವಂಗೆ ನಮೊಯೆನ್ನಿ ೪

ಎಣ್ಣೆ ಆರಿಶಿಣ ಪೂಸಿ ಹೆಣ್ಣನೀಗಳ್ಬರೆಸಿ
ಸಣ್ಣಮೋದಕಗಳ ಹರಗೊಂದಿಸಿರ್ವರಿಗೆ
ಪುಣ್ಣ ಹಸೆಗೆ ಕುಳ್ಳಿರಿಸಿ ೫

ಪಣೆ ತುಂಬ ಭೂತಿಯನು ಎಣೆಕಿಲ್ಲ ಬಂಗಾರನು
ತ್ರಿಣೆಯನೇತ್ರನಿಗೆ ಅನುವನು ಬಾಸಿಂಗವ
ಆಣೆಯಿಲ್ಲದಂದು ಧರಿಸಿಹನು ೬

ಬಸವ ನೀಲಾಂಬಿಕೆಯು ಶಶಿಧರ ಹರನಿಗೆಯು
ಹಸನಾಗಯೊಡಬ...ಲ ನಿಧಿಯೂ ಸಲುವಾಗಿ
ಕುಶಲದಕ್ಷತೆಯ ಮೊದಲಿಡೆ ೭

ಅತ್ತೆಮಾವಗಳೆಲ್ಲ ಸತ್ಯ ನಿರ್ಮಲರೆಲ್ಲ
ನಿತ್ಯ ಶಿವಪೂಜೆ ಘನರೆಲ್ಲ ಅಭವನಿಗೆ
ನೃತ್ಯ ಓಂಕಾರ ಸೋಬನೆನ್ನಿ ೮
ಹರಗೆ ಕಂಕಣಗಟ್ಟಿ ಹರಿ ಮಂತ್ರಾಕ್ಷೆಯ ಮುಟ್ಟಿ
ಗಿರಿರಾಜಗಣರೆಲ್ಲ ಗಿರಿಗು....

೧೯೭

ಅಗಲಿ ಪೋಗುವದುಚಿತವೆ ಕೇಳು
ಸುಗುಣೆ ಸೇವಕಿ ಗುಣಮಣಿಯೆ
ನಗೆ ಸೊಗಸರಿಯದೆ ಅಘಹರ ಮುನಿಸಿದ
ಮೃಗಾಕ್ಷಿನಗಲಿದ ನಿಗಮಗೋಚ[ರ]ನೆ ॥ ಪಲ್ಲ

ಪದಿನಾರುವರುಷಪ್ರಾಯದಳ ತಾನು
ಅರಿಯನೆ ಸರಸ ಸತ್ಕಲೆಯ
ತುದಿ ಮೊದಲರಿಯದೆ ಉರಿಲಿಂಗವಾಗಿಯೆ
ಸುದತಿ ತಾನಗಲಿದ ಮದನಭೂಷಿತನೆ ೧

ತನ್ನ ಸೆರಗ ಸೋಂಕಿನಿಂದ ಕೇಳು
ಅನ್ಯೋನ್ಯವಿಲ್ಲದೆ ನಡೆದೆ
ಸೆನ್ನುತ ಸಂತುಷ್ಟ ಸರ್ವದಯಾಪಾರಿ
ನಿನ್ನಂತ ಉಪಕಾರಿ ಸರಸವಿನೋದಿ ೨

ಎಂದೆಂದು ಮುನಿಸುವನಲ್ಲ ತಾನು
ಒಂದು ಮಾತಿಗೆ ಸಿಟ್ಟು ಸಲ್ಲ
ಬಂಧುಬಳಗದೊಳು ಕುಂದುಮಾಡಿದನು ತಾ
ಕಂದುಗೊರಳದೇವ ಕಳೆ ಶಾಂತಿ ಚಂದ ೩

ಹಿಡಿದ ಪಂಥವ ನಡಸುವನು ಕೇಳು
ನುಡಿವಳಭೇದವನರಿವ
ಮುಡಿವಿಡಿದೆನ್ನನು ಮುಕುರಿ ಚುಂಬಿಸುವನು
ಸಿಡಿಕಿಡಿಯಾಗುತ ಕಡೆಗೆ ಪೋದವನೆ ೪

ಹಗಲಿರುಳೆಯು ಮಿಂಚನಿಳಿಯ ಶಂಭು
ಒಗುಮಿಗೆ ಕಲೆಯ ತೋರುವನೆ
ಜಗಸೂತ್ರಧಾರಿಯು ಅಗಜೆಭಾವಕೆ ಮೆಚ್ಚಿನ
ಕರದವಿಷ್ಟಲಿಂಗ ಕೂಡಿದನೆ ೫

೧೯೮

ಹರನುರಿಗಣ್ಣಿಂದ ಪುಟ್ಟಿ
ಮರುಳದಕ್ಷನ ಶಿಕ್ಷೆಮಾಡಿ
ಧರಣಿಗಧಿಕ ತಾಳಗುಂದಪಟ್ಣದಿ
ಕರುಣದಿ ಸ್ಥಾನವಿಡಿದು ನಿಂತ ದೇವ ॥ ಪಲ್ಲ

ಹಿಡಿದ ಹಲಗೆ ಖಡ್ಗರವದ ಕೊಡೆ
ಮಿಡಿವ ಬಿಲ್ಲನು ಬಾಣ ಬರದ
ನುಡಿಯು ಶಿವನ ದೊಡ್ಡಿತೆಂದು ಭಕ್ತರನೆಲ್ಲ
ಏಡಿದು ರಕ್ಷಿಸುವಂಥ ದೃಢವುಳ್ಳ ವೀರ ೧

ಮಂದಾಕಿನಿಯು ಪುತ್ರನಿಗೆ ನಿನ್ನ
ಹೊಂದಿದವರನೆಲ್ಲ ನೆನೆ
ಇಂದುಧರಗೆ ಅತಿಪ್ರಿಯು ಮೋಹದ ಪುತ್ರ
ಬಂಧು ಬಳ[ಗ] ಭಾಗ್ಯ ಐಶ್ವರಿ ನೀನೆ ೨

ಅವತಾರದ ಲೀಲದಿ ನೀನೆ ಸತ್ಯ
ರಕ್ಷಣ್ಯ ಜಗಕರ್ತ ನೀನೆ
ತವಕದಿ ನಾರಸಿಂಹನ ಮೆಟ್ಟಿ ಸೀಳಿಯೆ
ಭವ ಮೆಟ್ಟಿವೊಗೆದ ಕಠೋರಕ ನೀನೆ ೩

ಪರ ಕುತರಕಿಗಳನೆಲ್ಲ ಮೆಟ್ಟಿ ಕೊರೆದು
ಕೊರಳ ರುಂಡಮಾಲ
ದುರುಳ ಹಿರಣ್ಯನನೊಡಲ ಬಗೆದು
ಚರ್ಮವ ಪೊದ್ದಂತ ಘನ ಮಾಯಕಾರ ೪

ಭದ್ರಕಾಳಿಗೆ ಅತಿಮೋಹಾವಳಿ
ತದ್ರೂಪ ಹರಶಂಭು ನೀನೆ
ಮುದ್ರಮುಖದ ಮೂರ್ತಿ ದುಗ್ಧಸಾರಾಯನೆ
ಚಿದ್ರೂಪ ಚಿನುಮಯ ಕರದಿಷ್ಟಲಿಂಗ ೫

೧೯೫

ಅರಿಯೆ ನೀ ನಮ್ಮನರಿಯೆ ನೀ
ಧರೆಗೆ ಅಧಿಕ ಮೆಡ್ಲೇರಿ ಶಿವಲಿಂಗಾಟ ॥ ಪಲ್ಲ

ಲೌಕಿಕದವರೆಂದು ಕಾಂತ ನುಡಿಯಲೇಕೆ
ಏಕೋಶಿವನ ಪಾದಗತಿಹಿತರ
ನಾಕುಮುಖವ ನೋಡಿ ಪಕಪಕ ನಕ್ಕರೆ
ರೋಕಾಗಲೇಕೆ ತಾಳ್ಗುಂದದ ಗೌಡರು ೧

ಹಿಂದೆಯು ಮನುಮುನಿ ಕಟ್ಟಿದ ಬುತ್ತಿಯು
ನಿಂದು ನಾವೆಲ್ಲೋರು ಬಿಚ್ಚಿ ಉಣುತ
ಆಂದ್ಯೆಶ್ವರಿಯಿಂದ ಪಗಡಾಟಕೆನಗೆ
ಬಂದರೆ ಚೆನ್ನಪ್ಪ ಕಡುಕೋಪ ಮಾಡಾರೆ ೨

ನಾರಾಯಣ ಬ್ರಹ್ಮ ದೇವೇಂದ್ರ ಬಸವನು
ಮಾರಹರನ ಮುಂದೆ ಆಡುತಿರೆ
ಕಾರುಮಿಂಚಿನ ಲೆತ್ತ ಬಸವಗೆ ಹೆಚ್ಚಾಗೆ
ಕಾರಣನಗೆ ಡುರುಕೆಂದು ನಕ್ಕ ಜಡ ಕೇಳು ೩

ಕೇಸುವಲ್ಲನೆಮಕಂಠನಾದನು
ಭಾಸಿತ ಬ್ರಹ್ಮನ ಶಿರಹೋಯಿತು
ರೋಷದಿ ದೇವೇಂದ್ರ ನಗೆ ಸಲ್ಲದೆಂದರೆ
ಹೇಸಿಕೆಯೋನಿ ಮೈಯೆಲ್ಲ ತಾನಾದನು ೪

ಹಿತವನರಿಯದೆ ಮತಿತಪ್ಪಿ ನುಡಿದರೆ
ಖತಿಯು ನಮ್ಮಯಿಷ್ಟಲಿಂಗಕಿಲ್ಲ
ನುತಕಾಯ ಜಿತಮಾಯ ಪ್ರಭುಗುರುಲಿಂಗ
ಗತಿಯೆಂದು ಪೂಜಿಸಿ ಮನೆ ಸುಮ್ಮನೊಳಗಿರು ೫

೨೦೦

ಚದುರರೊಡನಾಡುವುದು ಕ್ಷೀರ ಸವಿದಂತಹುದು
ಮದಮುಖರೊಳೊಡನಾಟ ಬಿದಿರ ಮೆದ್ದಂತೆ ॥ ಪಲ್ಲ

ಸಂಗಸಂಗದ ಭೇದವರಿದು ಮಾತಾಡುವರ
ಹಿಂಗದಲೆ ಅನುದಿನವು ಲಿಂಗಸುಖವು
ಕೊಂಗಿತನ ಒಳಗಹುದು ಹೊರಗಲ್ಲವೆಂಬುವರ
ಸಂಗಮೇಶ್ವರನೊಪ್ಪ ಅಂಗಹೀನರಿರ ೧

ಎಲ್ಲ ಆಟಗಳೊಳಗೆ ಮಾರನಾಟ ಸಲ್ಲೆಂದು
ಬಲ್ಲವರು ನೋಡಿ ಓಸರಿಸಿಪ್ಪರು
ಹೊಲ್ಲವಳಿತೆಂದು ಕನಲಿಯೆ ಮುಕುರಿ ನುಡಿವವರ
ಮಲ್ಲನೊಪ್ಪನು ಹುಲ್ಲ ಖುಲ್ಲ ಮನುಜರಿರ ೨

೧೮೧

ವೀರವಿಕ್ರಮರಿಂಗೆ ಒಂದೆ ನಿಜವಲ್ಲದೆ
ಕ್ರೂರಭ್ರಮೆವಿಡಿದು ವ್ರತಗೆಡಬಲ್ಲರೆ
ಸಾರೆ ಸಂತುಷ್ಟದಾದಿಯನರಿಯ ಮರಳ್ಗಳು
ಪಾರುಮಾಡುವರು ಶಿವನಿಷ್ಠೆಯುಳ್ಳವರು ೩

ಹೇಳಿದರೆ ಕೇಳದವ ಖೂಳಮನುಜನುಸೆಂದು
ಬಾಳುವರ ಸ್ಥಾನದಲಿ ಅಡ್ಡನಿಂತು
ಮೂಳ ಹೊಲೆಗರ್ವದಲ್ಲಿ ತಾನೆ ಶ್ರೇಷ್ಠಗನೆಂದು
ತೂಳ ತೂರ್ಯದಿ ನುಡಿವವಂಗೆ ಶಿವನೊಪ್ಪ ೪

ಮಾತೆ ಪಿತರುದರ ಜನಿಸಿಯೆ ಬಂದನಿದನರಿಯೆ
ನೂತನಾಟವ ಕಂಡೆ ಕಲಿಯೊಳಗೆಯು
ತಾತ ಕರಸ್ಥಳದಿಷ್ಟಲಿಂಗ ನಿಚ್ಚತಾ ನೋಡಿ
ಜಾತಿಹೀನರ ಶಿಕ್ಷೆ ಮಾಡುವನು ರಮಣಿ ೫

೨೦೧

ವಾಮಲೋಚನೆ ಲೀಲೆಯ ಕೇಳು ನೇಮ ನೀತಿಯ ॥ ಪಲ್ಲ

ಕ್ಷೋಣಿಯೊಳಗೆ ಅಧಿಕವಾದ ಆದಿಕೆಳದಿ
ಸ್ಥಾಣುಭಕ್ತ ಸತ್ಯನಿತ್ಯ ಆದಿ ಬಸವನಾಯಕರ
ಪ್ರಾಣಾರ್ಧಾಂಗಿ ಚೆನ್ನಮ್ಮಾಜಿ ಸತಿಯು ಪತಿಯು ಈರ್ವರ
ತ್ರಾಣನಾದಿಪ್ರಿಯ ಪುತ್ರ ಪಟ್ಟಸೋಮಶೇಖರರ
ಮಾಣದನ್ನದಾಸೋಹಕೆ ಪಾರಂಪರ ನಡೆಸುವರ
ಜಾಣೆ ಕೇಳು ಕಲ್ಯಾಣದನಾದಿ ಭಕ್ತಿವಿಡಿದರ ೧

ಸೋಮಶೇಖರ ತನ್ನಯ ಸತಿ ನೀಲಲೋಚನೆ
ಸೋಮಧರನ ಶಂಭುಪಾದ ಬಿಡದೆ ಕ್ರೀಯ ಗೆಲವನೆ
ಪ್ರೇಮದಿ ತಂದೆ ಮಾವಾಜಿಯಿದೆ ಘನವೆಂದನೆ
ಸ್ತೋಮವಾಗಿ ಅರಿತುಕೊಂಡು ಬಂಧು ಬಳಗಕ್ಕರುವನೆ
ಕ್ಷೇಮ ನಾಲ್ಕು ದಿಕ್ಕಿಗೆಲ್ಲ ಕೀರ್ತಿಪ್ರಭೆಯವಾದವೆ
ಸೋಮವದನೆ ಒಲಿದು ಕೇಳು ಭಕ್ತಿವಿಕ್ತಿಮಾರ್ಗನೆ ೨

೧೮೨

ಅಕ್ಕರಿಂದಲಿ ವೇದಾಗಮ ಚಿತ್ತವಿಟ್ಟುವೆ
ದಿಕ್ಕನೆಂಟರೊಳಗೆ ಬಂದ ಪ್ರಮಥಕವಿಯನೆಲ್ಲವ
ಸೊಕ್ಕುಜವ್ವನೆ ಮೋಹವ ಕೂಕರಿಸು ಸಂಯಮವ
ಪಕ್ಕದೊಳಗಯಿರಿಸಿಕೊಂಡು ನಡೆವನತಿಮಾರ್ಗವ
ಲೆಕ್ಕ ಅರವತ್ತಾರು ಕೋಟಿ ಆರ್ಯಕೆಯ ಕೊಂಬವ
ಸೊಕ್ಕುಜವ್ವನೆ ನೀ ಕೇಳು ಅಕ್ಕರಿನ ಬೀಜವ ೩

ತ್ಯಾಗದಲ್ಲಿಯ ಘನವನಾಗಿ ಭೋಗದಿಂದಲಿ
ಯೋಗದ ಮನುಮುನಿಜನದ್ಯೋಗದ ಪಾರಾಶರ
ರಾಗರಚನೆ ಭೇದವನಗಗಾರು....ನಿಯೊವೆ
ಸಾಗರೇಳರೊಳಗೆ ಮಿಗಿಲಾದ ಮಹಾಮಹಿಮರ
ತ್ಯಾಗದುಚಿತವರಿತ ಕಂಠಸ್ಥಾನ ಮಾಡಿಯಿರಿಸುವರ
ಸೋಗೆಗಂಗಳೆ ನೀ ಕೇಳು ಭೋಗಾದಿ ಭೋಗಿಗರ ೪

ಹಿಂದೆ ಮಾರ್ಗವಚರಾಚರರಿಗಿಂದರೆಲ್ಲಕೆ
ಅಂದದಿ ಪ್ರಧಾನಿಗಳ ಗುರಿಕಾರರಿಗೆಲ್ಲಕೆ
ಅಂದದಿಂದ ದೊರಕುವಂಥ ಚಂದನೆ ನೀ ಲೋಕಕೆ
ಹೊಂದಿ ಹೊರದೂಳಿಗಕೆ ತಂದೆ ನೀನೆ ಸಲವರೆ
ಚಂದ ಗುರುಲಿಂಗ ಜಂಗಮವೊಂದೀಗ ನೀ ನೀಡೊಕೆ
ಇಂದುಮುಖಿಯೆ ನೀ ಕೇಳು ತಂದೆತಾಯಿಲೋಕಕೆ ೫

ಶಂಭುಶಂಕರ ನಾನಾ ಜೀವ ತುಂಬಿ ಕುಕ್ಷೆಯು
ಮುಂಬರ ಬರದಾಗದಿ ಕುಂಭಿನಿಯ ಶರಣರ
ಇಂಬರಿ ಷಡುದರುಷಣವ ಮಂದರಾಗಿಯಿರುವರ
ಹಂಬಲ ಬಿಡದೆ ನಿತ್ಯಜಂಗಮಪೂಜಕರ
ಕುಂಭಿನಿ ಆಯಿವತ್ತಾರಕೆ ಇಂಬಾಗಿ ಪೆಸರಾದರ
ಅಂಬುಜಮುಖಿಯೆ ಕೇಳ ಶೃಂಗಿ ಸೋಮಶೇಖರರ ೬

ಮೂಜಗದೊಳು ಕೀರ್ತಿಗರಾಗಿ ಸಾಜದಿಂದಲಿ
ಸೋಜಿಗದ ಶಿವಪೂಜೆಗೆ ಆದಿಯು ಆಧಾರನು
ಸಾಜವಾಗಿ ಸತ್ಯವಾದ ಆಗಮಪೂರಿತನು
ರಾಜಾದಿರಾಜರಿಗೆಲ್ಲ ಪ್ರೇಮದಿ ಕೀರ್ತಾದನು
ಬೀಜತತ್ವ ನಿರ್ವಾಣಯ್ಯ ಏಕವಾಗಿ ತೆರದನು
ತೇಜಕರದಿಷ್ಟಲಿಂಗಪೂಜೆ ಸೋಮಶೇಖರ.... ೭

೨೦೨

ಮಾರಹರನನೊಮ್ಮೆಗೆ ಬಡಿದುಕೊಂಬೆಗತಿ ಹಲ್ಲ ತಿಂಬುತಲಿ ॥ ಪಲ್ಲ
ಗಿರಿ ಗುಹೆ ಮೆಳೆ ಮರ ಕರೆದಡೆ ಮನಸೂರ
ಮರೆದಡಿಗಿಯೆ ಕೊಲ್ವ ದುರುಳವ್ಯಾಘ್ರನನೆ ೧

ಕರಚರಣಗಳ್ಗೈಯ್ವಾಯಿಂದಾಳಿಂಗಳಸಿಯೆ
ಕೊರಳ ನೀ ಬಿಗಿದುಕೊಂಡು
ದರದರನೆಳಕೊಂಡು ಮರೆಮೆಳೆಗಿರಿಗೊಯ್ದು
ಮರುಕವಿಲ್ಲದೆ ಮನವರಿತಿಂಬ ವ್ಯಾಘ್ರ ೨

ದೇಶ ದೇಶದ ಜೀವರ ಹೊಂದಿಡದುವ
ಘಾಸೆಮಾಡುತ ತಿಂದು ನೀ
ವಾಸವಾಗಿಯೆ ನಿಂದುಡುಗುಣಿ ಜಂಬೂರ ಸೀಮೆ
ಈಶಭಕ್ತರ ನೀ ಮೋಸದಿ ಭಕ್ಷಿಪೆ ವ್ಯಾಘ್ರ ೩

ಅಯ್ಯ ಅಪ್ಪಗಳೆನ್ನದೆ ಮಚ್ಚರಿಸಿಯೆ
ಪ್ರಿಯಮಸ್ತಕಪಾದವ
ಕೈಯ ಬಾಯಿಲಿ ಕಚ್ಚಿ ಖಂಡ ನೆತ್ತರ ಹೀರಿ
ಬೀಯ ಭಯದಿ ಬಿಟ್ಟು ತೊಲಗುವ ವ್ಯಾಘ್ರ ೪

ಮಂದಮತಿಲಿ ಸೊಕ್ಕಿಯೆ ಅಲದು ತಿಂಬ
ಕುಂದುವಿಲ್ಲದ ವ್ಯಾಘ್ರನೆ
ಕಂದುಗೊರಳಗೆ ನೀ ಬಂದು ಮುಖವ ಪತ್ತೆ
ನಿಂದು ಸೀಳಿಯೆ ಚರ್ಮ ಪೊದ್ದಿಷ್ಟಲಿಂಗ ೫

೨೦೩

ಆದಿಯನು ಪೇಳುವೆನು ನಾದಮಹಿಮೆಯ ಕೇಳಿ
ಹಾದಿವಿಡಿ ಬರುತ ಘಣಿ ಜಪಿಸಿತೇನೆಂಬೆ ॥ ಪಲ್ಲ

ಮೇರುಮಹಾಪರ್ವತದ ಒಡೆಯ ಶಿವನೊಳಗಿರ್ದ
ಆರುಕೋಟಿಯ ಸರ್ಪ ಹರದರಸಿಯೆ
ಮಾರಿ ಆಜ್ಞೆಯನು ಆದರೊಳಹಿ ಇಳೆಗಿಳಿದು
ವಾರಾಗಿ ತಿರುಗಿ ಮೈಮರೆದುದೇನೆಂಬೆ ೧

ಲೀಲೆಯಿಂದಲಿ ಗುಹೆಯ ವೀರಭದ್ರಗೆ ಪೇಳಿ
ಆಲಿಸುತ ಎಡಬಲದ ಉಲುಹುಗಳನು
ಮೂಲ ಹೊರಯಿಕೆ ಪೋಗಿ ಬರುವ ದಾರಿಲಿ ಬಿದ್ದು
ಮೇಲೆಚ್ಚರಿಕೆ ಮರೆದು ತೊಳಲಾಡುತಿರಲು ೨

ಮದನಾರಿ ನಿರೂಪದಿಂ ತಿರುಗಿ ಹಿಂದಕೆ ನೋಡೆ
ಹದುಗಿ ಹೊಡಕರಿಸಿ ಮೇಲಕೆ ಅಡರಲು
ಗದಗದನೆ ನಡುಗಿ ಮೈ ಹುರಿಯೇರಿ ದಂಡವನು
ಜದುರಿಂದ ಪಿಡಿ ಬಿಗಿದು ಹೊಡೆನಡುವಿಂಗೆ ೩

ಹೊಡೆಯೆತ್ತಿ ನಾಕುಕಡೆ ನಿಂತು ನಿಲು
ಗಡೆಯುನ್ನು ತಲೆಯೊಡ ಬಡಿಯಲು
ಪೊಡವಿಗೆಯು ಹತ್ತಿ ಮಣ್ಣನೆ ಕಚ್ಚಿ ಜಿಂಪೊರಡೆ
ಕಡುಕೋಪದಲಿ ನಿಂತುದು ದುಂಡಿಯಲಿ ಹೊಡೆಯೆ ೪

ಆಸು ಹೋಗಿ ನೆಲಕೆ ಸರ್ಪನು ಬಿದ್ದನದ ಕಂಡು
ಹಸುಮಗನ ಬಸವ ಚೆನ್ನೀರನಂ ಕರೆದು
ನೊಸದು ನೋಡಿರೆಂಬುದನು...ಂದನು ಬೆರಗಾಗುತಲಿ
ಶಶಿಶಾಂತಿ ಕರದಿಷ್ಟಲಿಂಗ ತಾ ಬಲ್ಲ ೫

೨೦೪

ನಿಮ್ಮ ಸ್ತುತಿಯು ಭಜಿಪೆ ಶಾಂತವೀರೇಶ
ಉಮ್ಮಾಯ ಆವತಾರಿಯೆ
ಕಮ್ಮಗೋಲನ ಪಿತ ವಿಲೋಚ ಪಾದಾಬ್ಜನೆ
ಎಮ್ಮ ರಕ್ಷಿಸು ದೇವನೆ ॥ ಪಲ್ಲ

ವೀರಾದಿ ವೀರಾವತಾರ ಕಾಂತಾರ ಲೋಲ
ಸಾರದೀಪ್ತಪ್ರಕಾಶ
ಕಾರುಮಿಂಚಿನ ಕಾಯ ಸಾರಸುಜನಪ್ರಿಯ
ಪಾರಂಪಾರ ರಕ್ಷಿಸು ದೇವ ೧

ಲಿಂಗಪೂಜೆಗೆ ಸಾರಾಯ ಸುಮನಸ ಪ್ರಿಯ
ಸಂಗ ಹಿಂಗಾದ ಜೀವಾಯ
ಮಂಗಳಮಹಿಮನೆ ಸಂಗಮೇಶ್ವರ ನೀನೆ
ಕಂಗಳಿಗತಿಪ್ರಿಯನೆ ೨

ಶರಣ ಷಟುಸ್ಥಲಮೂರ್ತಿಯು ಭಕ್ತರಪ್ರಿಯು
............
ಧರೆಯು ಬ್ರಹ್ಮಾಂಡಕೆ ಹರವರಿಯಲಿ ನಿಂತು
ಕರುಣೆ ಕರದಿಷ್ಟಲಿಂಗನೆ ಶಾಂತವೀರೇಶ ೩

೨೦೫

ಆದಿಬಸವನ ಭಕ್ತಿ ಪೃಥ್ವಿಗೆ ಮಿಗಿಲಾದ ಪ್ರಬಲಮಾಡಿ
ಮೇದಿನಿಗಧಿಕ ವೇಣುಪುರದರಸು
ಸೋಮಶೇಖರ ಸತಿಪಿತ ನಿರ್ವಾಣೇಂದ್ರನೆ ನೀನು ॥ ಪಲ್ಲ

ಲೋಕದ ಜಡಜೀವರು ನಿನ್ನಿರವನು
ನೂಕರಿಯರು ಸಮವ
ಏಕೋದೇವನೆ ನಿನ್ನ ಹೃದಯದೊಳುವೆ ನಿತ್ಯ
ಸಾಕಾರೆ ಸಂತುಷ್ಟಪೂರಿತ ನಿವಹನೆ ೧

ಗುರುಲಿಂಗಜಂಗಮು ಮೊದಲನು ತಿಳಿದುವೆ
ಶರಣ ಮತಗಳ ನೋಡಿ
ತರವರಿ ಆವರವರಿಚ್ಚೆಸ್ಥಾನಗಳಾಗಿ
ಇರೆ ಸುಟ್ಟುಣಿಸುವಂತೆ ಮೋನೀಂದ್ರ ಸುತ ನೀನೆ ೨

ದೇಶ ದಿಗ್ದೇಶಕೆಲ್ಲವು ಹಬ್ಬಿರುವಂತ
ವಾಸುಳ್ಳ ರುದ್ರಭಕ್ತಗೆ
ಭಾಷೆಯನಾಡಿ ಇಮ್ಮಡಿ ಘನನಡೆಯನು
ಸಾಸಿಗ ನೀನೆಂಬ ವಾಸುಳ್ಳ ಶರಣರು ೩

ನೀತಿ ವೇದಾಗಮಕ್ಕೆ ಕರ್ಣದೊಳು ತಾ
ಪ್ರೀತಿ ಬೇರೂರಿದಂತೆ
ಧಾತ್ರಿ ದಿಕ್ಕೆಂಟಿಂದ ಬಂದಭವಿ ಶಿವನಾತ
ತಾತೀರೆ ಭೋಗಪ್ರದ ನಿರ್ವಾಣೇಂದ್ರನೆ ನೀನು ೪

ದಿನದಿನ ದಿನಪನಂದ ಕಳೆ ಮೊಳೆ ಬೆಳೆ
ಘನ ಮಾಡಿ ಸುಖವಾಹಂತ
ವಿನಯ ವಿಮಲಾಕಾರ ನಾನಾ ಜೀವ ಸಹಾಯ
ತಾನಿಷ್ಟಲಿಂಗಜ್ಞಾನಿಯೆ ನಿರ್ವಾಣೇಂದ್ರ ನೀನೆ ೫

೨೦೬

ಹೀಗೆ ಪೋಗುವದೊಳ್ಳಿತೆ ತನೂಭವೆ ನೀ
ಹೇಗೆ ಸೈರಿಸುವೆವಿನ್ನು
ತಾಗು ಬಾಗರಿಯದೆ ಗುರುಪಾದಮನು ಬಂದು
ಕೂಗಾಡಿ ಕರದೊಯ್ವುದೊಳ್ಳಿತೆ ತನಗೆ ೧

ಆದು ಹೋದಾಂತವುಯೆ ತೈಣಸಿಯ ಗಾಥೆಕತೆಯ
.... ಮನವ ತಾಳಿ ಕೋಗಿಲೆ ನವಿಲ್ಗಿಣಿಯಂತೆ
ನಾದ ಮಗಳನು ತಾವೆಳದೊಯ್ಯಲೇಕೆ ೨

ವಟವೃಕ್ಷವೆಂದು ತಮ್ಮ ನಂಬಿರುವರ
ತುಟಸಲೇತಕೆಯೆಮ್ಮನು
ಕುಟಿಲಕುಹಕರ ಮಾತನು ಕೇಳಿ ನಿಜವನು
ಸಟೆಯೆಂದು ಮನವ ನೋಡಲಿಲ್ಲ್ಯಾಕೆ ೩

ಲೋಕದವರು ಅಲ್ಲವು ನಮ್ಮೊಳು ನೀವು
ಸೋಕಿ ಕನಲುವದೇನು
ಏಕೋಶಿವನ ಪಾದ ಬಿಡದೆ ನಂಬಿರುವರ
ಭಾಕಾಗಿ ನಮೊಯೆಂದು ನಡತೆ ನಡೆಯಿರಿ ೪

ಪೂರ್ವಾರ್ಜಿತದಿಂದಲಿ ಹಾಲುವೆ ತುಪ್ಪ
ಕೂರ್ವಾಗಿ ಬೆರದಂತಾಗಿ
ಈರ್ವದೊಳಗೆಯು ಮೇಲ್ಸಕ್ಕರೆಯುೂಡಿದ
ಪಾರ್ವತಿರಮಣಿಷ್ಟಲಿಂಗನೊಲಿಮೆಯು ೫

೨೦೭

ತೋರೆ ತೋರೆ ನೀರಜಮುಖಿ ತೋರೆ ತೋರೆ
ತೋರತಿಕಾಣ್ಬೆಯ ಸೂರತಿಕಾಯಜದಾರತಿ ನಂದವ
ಮೀರಿದ ಸುತ ದಿನಮಣಿ ಶಾಂತತೀತವಾದವಿಪೂರಿತ ಸುಗುಣೆ ॥ ಪಲ್ಲ

ಶುಕನುಡಿ ಮಾತಿನ ಪಿಕಸರಗೊರಳಿನ
ಮುಖರವ ಮುಖರಿಪನಕವರಿವಿರಸದಿಟಕಟಿ
ಕಿಕಿಟನಟಗಟ ಚುಟಿಕಿಂದಲಿ
ಯುಕುತಿಯುಕುತಿಯ ಮನವಿಟ್ಟೊಲಿ ಜಾಣೆ ೧

ಜೊತತಳಿರ ಪೊಳಗಾತ ಜಘನಗಿರಿ
ನೀ ತೆಳುವಸುರಿನ ಜಾತೆಳೆವಾಳೆಯು
ತಾ ತಳಿರಡಿ ಮೃದುವೀತೆರಸವಮಜನವಮದ
ಪೋಲ್ಶೊಡಗೂಡುವ ಜಾಣೆ ೨

ಕುಂಭಕುಚದ ಪೆರೆ ತುಂಬಿದ ನೊಸಲಿನ
ಬಿಂಬಧರದ ತುಟಿ ಕಂಬುಕದಪಿನತಿ
ಶಂಬರಿ ಸೂಟಿತೆ ರುಚಿನಿಗಂಭೀರೆ
ಮುಂಬರಿ ತವಕದಿ ಕೂಡಂಬುಜವದನೆ ೩

ಚಂಪಕಮೂಗಿನ ಕೆಂಪಿನದೇಹದ
ಸೊಂಪಿನಸೊಗಸಿನ ಗುಂಪಿನತಿಮಿರನ
ದಂಪಿನವಾರಿನ ಪೊಂಕುತ ಹೊಳವಿನ
ಪೆಂಪದಂಗವ ತೋಳ್ತೆಕ್ಕಗಲದ ಜಾಣೆ ೪

ಮಿಂಚಿನ ನೋಟದಿ ಅಂಚೆಗಮನೆ ನಡೆ
ಸಂಚಿಲಿ ಬಂದುಪೆ ಮಂಚವನೆತ್ತು ನೀ
ವಂಚನೆಯಿಲ್ಲದೆವಿಷ್ಟಲಿಂಗದೊಳೊಡ
ಗೊಂಚಲರತಿ ಸರಸಗಲದೆ ಜಾಣೆ ೫

೨೮೮

ಹೆಣ್ಣಿನ ಬರವನು ಆಣ್ಣಗಳರಿಯರು ನೋಡಿರಯ್ಯೊ ಮೂರು
ಕಣ್ಣುಳ್ಳ ಶಿವನನು ಕಣ್ಣುಗೆಡಿಸಿದರು ನೋಡಿರಯ್ಯೊ ॥ ಪಲ್ಲ

ಅರಮನೆ ಗುರುಮನೆ ಸಜ್ಜನಪುರುಷಗೆ ನೋಡಿರಯ್ಯೊ ತಥ್ಯ
ಪರಕು ಪಾರಿ ಜಾರಿ ಹೊಂದಿಕೊಂಡಿರ್ದರೆ ನೋಡಿರಯ್ಯೊ
ಹುರುಳುಗೆಡಿಸಿ ಅಪಮಾನವ ತರುವನು ನೋಡಿರಯ್ಯೊ ಮೂಗು
ಕೊರೆದು ನಾಲಿಗೆ ಕಿವಿಲಿರಿದುವಿಷ್ಟನು ವೀರ ನೋಡಿರಯ್ಯೊ ೧

ತನ್ನ ಸತ್ವದಿ ಶೂರ್ಪನಖಿಯು ಸರಿಯುಯಿಲ್ಲ ನೋಡಿರಯ್ಯೊ ಮತ್ತ
ದುನ್ನತ ಉಯ್ಯಾಲೆ ಜಗ್ಗುತಲಾಡುತ ನೋಡಿರಯ್ಯೊ
ಕನ್ನೆ ಕೋಮಲೆ ಸೀತೆಯಿಂ ಕಳಕೊಂಡುವೆ ನೋಡಿರಯ್ಯೊ ದೇಶ
ದನ್ಯ ಲಕ್ಷ್ಮಣ ರಾಮ ಕಂಡು ಮೂಗರಿದರು ನೋಡಿರಯ್ಯೊ ೨

---

* ಇಲ್ಲಿಂದ ಮುಂದೆ ೮ ವೃತ್ತ ಹಾಗೂ ವಾರ್ಧಕ ಷಟ್ಪದಿಗಳಿವೆ.

ಆಗಾವು ಶಿವಭಕ್ತಿ ಭೋಗತಿಬಹುದಿನ್ನು ನೋಡಿರಯ್ಯೋ ಸತ್ಯ
ಯೋಗಮುನಿ ಜೋಗಿತಂತ್ರವು ತಿಳಿದವು ನೋಡಿರಯ್ಯೋ
ಸೋಗೆಗಂಗಳ ಯೋಗಿಹೃದಯಗುಣ ಸಾಧ್ಯನೆ ನೋಡಿರಯ್ಯೋ ನಿತ್ಯ
ಸಾಗರ ಕರದಿಷ್ಟಲಿಂಗ ತಾನದ ಬಲ್ಲ ನೋಡಿರಯ್ಯೋ ೩

೨೦೯

ಮರೆಯದೆ ನೀವು ಮರೆಯದೆ ಮರೆಯದೆ ನೀವು ನಿಮ್ಮ
ಕುರುಹ ಹರುಹಿನಿಂದ ಹಿರಿದು ಪೂಜೆಯ ಮಾಡಿ ರಾಚಟ್ಟಿವೀರನ ॥ ಪಲ್ಲ

ಹಿಂದಾವ ಪುಣ್ಯವ ಮಾಡಿದ ಫಲದಿಂದ
ನಿಂದು ಕೈವಿಡಿದು ತಾ ಘನವನು
ಮುಂದೆಯೆಂದಿಗಗಲದೆ ತಾನಿರವನು
ಚಂದ ಬಂಧು ಬಳಗವ ರಕ್ಷಿಸುವವನು
ಹಿಂದೆ ಮುಂದೆ ಮಾಡಿದ ಭವ ಕಳವನು ಸುಖವೀವನು ಕಲ್ಪವೃಕ್ಷನು
ಒಂದು ನೆವದಿ ಮರ್ತ್ಯಕ್ಕೆ ತಾನಿಳಿದನು
ಇಂದುಕೋಟಿಪ್ರಭೆಯ ಹರಕುವರನು ಭಲಾ ಭುವನ ರಾಚವಟ್ಟಿವೀರನನು ೧

ಹಾಲಸಮುದ್ರನು ಕಾಳಿಯರಮಣನು
ಮೂಲೋಕದೊಳಗೀತಗೆಣೆಯಿಲ್ಲ
ಭಲಶಂಖನಿವನಿಂದ ಘನವಿಲ್ಲ
ವಿಲ ನಟನೆ ಕಾಲಕೆ ಅಣೆಯಿಲ್ಲ
ವಾಲ ಮೂಲಮೂರ್ತಿಯಯಿವನಿದಿರಿಲ್ಲ
ಗಾಲುಮೇಲಾದ ಸುರರು ಕಂಡದಕಿಲ್ಲ ದಕ್ಷಶಿಕ್ಷನು ಸಾರಕ್ಷನು
ಶೂಲದನುಜರೆದೆಯ ಗೊಂತು ಮುರಿದೆಲ್ಲ
ಶೂಲಿಗಿಮ್ಮಡಿಸಿದ ಪರಾಕ್ರಮವೆಲ್ಲ ಈತ ಧರೆ ತ್ರಿಭುವನವ ರಕ್ಷಿಸುವನಲ್ಲ
ದೇಶ ಐವತ್ತಾರು ಚರಿಸುತ ಬರ ನೋಡಿ ರಾಚವಟ್ಟಿಯಲಿ ತಾ ನೆಲೆಯಾಗಿ
ದೋಷನಾಶವ ಕಳವೆ ಭಕ್ತರಿಗಾಗಿ
ಭಾಷೆನಾಡಿ ತಪ್ಪದರಿಗೆ ಸಿರಿಯಾಗಿ
ಲೇಸ ಕಾಸಿ ಚಿನ್ನಕೆ ಪಟುವಿಟ್ಟಾಗಿ ಹರವರಿಯಾಗಿ ತಾ ಒಲಿದಾಗಿ
ವಾಸ ಮೆಡ್ಲೇರಿಮಠದ ಚೆನ್ನಸವಾಗಿ
ಈಶನಡುನಿಡಿನಯನ ಪೂಜಿಸಲಾಗಿ
ಕೇಳಿ ಕರವರಹರವಿಷ್ಟಲಿಂಗಭೋಗಿ ೨

೨೧೦

ಹೋಗದು ಚಳಿ ಹೋಗದು ಬೇಗದಿಂದಲಿ ಅನಲಂ ಕಾಸಿದಲ್ಲದೆ ॥ ಪಲ್ಲ

ಕಲಿಯುಗದಾದಿಗೆ ಮಳೆ ಮಾಗಿ ಬೇಸಿಗೆ
ನೆಲೆಯಾಗಿ ಹಿತ ಮೋಹವಾಗುತಲಿ
ಬಲುವಿತಯಾಗಿ ಚತುಸಂವ ಬೀಳಲು
ಪಲಭೋಗ ಪೆಚ್ಚುದು ಇದು ಚಳಿ ಬಾಳು ೧

ಹಚ್ಚಡ ಮೂರನು ಕಂಬಳಿಯೆರಡನು
ಮುಚ್ಚಿಮುಸುಕಿಕೊಂಡಾದರೇನು
ಬೆಚ್ಚಲಿನ್ನಾಗದು ಮಚ್ಚಿನ ಸತಿಯಳ
ಪಚ್ಚಿಮಾಡಿಯೆ ಬಿಗಿದಪ್ಪಿಕೊಂಡಲ್ಲದೆ ೨

ಕರಲ ಕಟ್ಟೆರೆಯು ಕೆಂಜೋಳ ಬೀಗಿದ ಬೆಳೆ
ಹೊರವಾದ ಹತ್ತೆಂಟು ತೆನೆಯು ತಂದು
ತರೆಯುದ ಕೆಂಡಕೆ ಹದವಿಡಿ ಕಾಸಿಯೆ
ನೆರೆಯೆಂಟ ಮೆದ್ದು ನೀರಂ ಕುಡಿದಲ್ಲದೆ ೩

ಅಕ್ಕಿನುಚ್ಚಿನ ರೊಟ್ಟಿ ಎರಡು ಸೇರಗಸೆಯು
ನಿಕ್ಕಿ ಹಿಂಡಿಯು ಘೃತವಗೂಡಿ
ಸಕ್ಕರಿಂದಲಿ ಮುರಿವತ್ತುದರೊಳುರ್ಝುಡಿ
ಅಕ್ಕರಿಂದಲಿ ಎಡಬಿಡದೆ ಮೆದ್ದಲ್ಲದೆ ೪

ಮೀರಿದ ಅಸುರರ ಶಿಕ್ಷೆ ತಾ ಮಾಡುವೆ
ಮಾರಹರನ ಕುವರಿರ ತಾನು
ತೂರಾಡಿ ದನಿಯು ಕರದಿಷ್ಟಲಿಂಗನು
ಮೀರಿ ದಕ್ಷಗೆ ಚಳಿ ತಗುಲಿಲ್ಲವೆ ೫

೨೧೧

ಕೊಡುವನೆ ವರಗಳ ಕೊಡುವ ತಾನೆ ಇವ
ಪೊಡವಿಗಧಿಕವಾದ ಬಯಲ ಬಸವ ತಾನು ॥ ಪಲ್ಲ

ಆದಿ ಶಿಲಾದಮುನಿ ಪೆಸರೀತನೆ ಶಂಭ
ನಾದಿ ವಾಹನವಾಗಿ ಸಲಹಿದನೆ
ಕಾದಿ ಹರಿಬ್ರಹ್ಮನ ಮುರಿಸಿದ ಸಿಂಕ್ಸನ
ಸಾಧಿಸಿ ಸೀಳಿದನಿವನು ತಾನೆ ೧

ಶ್ರುತಿತತಿ ನುತಿಗೆ ಅಭೇದ್ಯ ತಾನೆ ಇವ
ವಿತತ ಲಿಂಗ ಜಂಗಮಾದಿ ತಾನೆ
ಪ್ರತಿಯಿಲ್ಲವೆನಿಪ ಕಲ್ಯಾಣ ಬಿಜ್ಜಳನನು
ಕತದಿಂದ ಕೊಲಿಸಿದನಿವನು ತಾನೆ ೨

ಮೂರುಲೋಕಕ್ಕೆ ಆಧಾರ ತಾನೆ ಇವ
ಮೀರಿದವರ ಶಿಕ್ಷೆಕರ್ತನೆ ತಾ
ಈರೇಳುಭುವನಕೆ ಒಡಲ ಪರುಷನೀತ
ಧಾರುಣಿಭಕ್ತರ ಪೊರೆವ ತಾನೆ ೩

ಸ್ಥಿರಕಾಂತಿ ಕಳೆಯುಳ್ಳ ದೇವ ತಾನೆ ಇವ ಧರೆ
ಪೊರಲಿಕೆ ರೂಪ ವರಾಜ ತಾನೆ
ಪರಮಭಕ್ತರ ಪುಣ್ಯಪುಂಜ ತಾನೆನಿಸುವ
ಶಿರ ಕೊಟ್ಟು ಸಲಹುವ ದೇವ ತಾನೆ ೪

ದೇಶದೇಶವನೆಲ್ಲ ಚರಿಸಿ ತಾನೆ ಇವ
ಸಾಸುಳ್ಳ ಸಕಣೆರಿ ಸ್ನಾನ ತಾನೆ
ವಾಸವಾಗಿಯೆ ನಿಂದು ಪೂಜಿಪ ದೇವನು
ಈಶ ಕರದವಿಷ್ಟಲಿಂಗ ತಾನೆ ೫

೨೧೨

ಬಸವ ಕ್ಷಿತಿಗೆ ಜನಕನನೆ ನಿತ್ಯ
ಅಸಮಾಕ್ಷ ಶಂಭುಶಂಕರನೆ
ದಶದಿಕ್ಕನೆಲ್ಲವ ಚರಿಸುತ ಬರ ನೋಡಿ
ವಶವಾಗಿ ಶರಭಪೇಟೆಲಿ ನಿಂತ ದೇವ || ಪಲ್ಲ

ವೃಡನ ಸದ್ಗುಣಶಾಂತಿ ನೀನೆ ಚೆಲ್ವ
ಗಡಲಸಾಗರ ಗುಣನಿಧಿಯೆ

ನಡೆ ನುಡಿ ಶಿವಸಭೆ ಅಧಿಕ ಆದಿಯು ಈತ
ದೃಢಸಾಸ ಸತ್ಯನು ಪರಮ ಪಾವನನೆ ೧

ತನ್ನ ಸೆರಗ ಸೋಂಕಿನಿಂದ ನೋಡಿ
ಮನ್ನಣೆ ಮಮತೆಯಿಂದಪ್ಪಿ
ಚೆನ್ನಿಗ ಚೆಲುವನ ಛಲದಂಕಧೀರನೆ
ಕನ್ನೆ ನೀಲಾಂಬಿಕೆ ಕಾಂತನೀತನನೆ ೨

ನೆಲಮುಗಿಲುಪೆ ಏಕಮಯದಿ ತುಂಬಿ
ಜಲಪ್ರಳಯ ತುಳುಕಾಡುತಿರಲು
ಬಲು ತೊರೆಸೊರೆಯೊಳು ಮುಳುಗಿ ತೇಲಾಡುವ
ಬಲುವುಳ್ಳ ಶರಣರನುಳಿಹಿ ರಕ್ಷಿಪನೆ ೩

ಯುಗವು ಇಪ್ಪತ್ತೊಂದಕಿಂದ ಅತ್ತ
ಅಘಹರ ಅಧಿಕದಿ ನೀನೆ
ನಿಗಮಾಗಮಂಗಳಿಪಯನ್ವಿತಕಾರನೆ
ಸುಗುಣವೆಣ್ಣುಗಳಿಗೆ ಸರಸಪ್ರಿಯನನೆ ೪

ಇಂದುಧರಗೆ ಬಾಷೆಗೊಟ್ಟು ಮರ್ತ್ಯ
ನಿಂದು ನಾ ಸಲಹುವೆನೆಂದು
ಮಂದರಧರಗಿರಿನಾದಿಶರಭಸ್ಥಾನ
ನಿಂದ ಕರದವಿಷ್ಟಲಿಂಗದೇವನನೆ ೫

೨೧೩

ಏನ ಪೇಳಲಿ ಸಖಿಯೆ ಭಾಳಾಕ್ಷಿ ಕೋಪವನು
ತಾನಸುರ ಶಿಕ್ಷಿಸುವ ಬಲುಪೆನ್ನೊಳ್ ನುಡಿವ ॥ ಪಲ್ಲ

ಸೂರ್ಯೆದು ವರುಷಯೆನ್ನನು ಅಗಲಿ ಕಡೆನಿಂದು
ಆರ ವಾಕ್ಯವ ಕೇಳಿ ಇಲ್ಲಿಗೈದಿದನೊ
ಗಾರುಮಾಡಲಿಬಾರದೆಂದು ಪಾದಕ್ಕೆರಸಿ
ತೋರಿ ಮನವರಿಕೆ ಪೇಳಿದೆ ಕೇಳಾ ರಮಣಿ ೧

ಹುಟ್ಟಿ ತೊಂಬತ್ತಾರು ವರುಷಕೋಟಿಯು ಬೆರೆದು
ಪಟ್ಟಿ ಸಂಪ್ಪತ್ತಿಗೊರೆಗಮೃತವನು
ಪಟ್ಟಿ ನೀ ಸಲಿಸಿ ಲೋಲಾಬ್ಧಿಸುಖವಂಬಟ್ಟು
ಸಿಟ್ಟುಯಿಗಿನೆನಬಹುದೆ ಮಮಕರ್ತೃ ರಮಣಿ ೨

ಹೀಗೆಂದು ತನ್ನೊಳಗೆ ತನ್ನಿಜವ ಭೇದಿಸುತ
ಭೋಗಿ ಶ್ರೀ ಬಸವಲಿಂಗಸ್ವಾಮಿಯು
ಯೋಗವಮನದಿಂದನುರಾಗದಿಂ ಕರದಿಷ್ಟಲಿಂಗವ
ಕೂಡಿದನು ಸುಖವು ರಮಣಿ ೩

೨೧೪

ತಾನು ಇಳೆಗೆ ಶಂಭು ವಿನೋದದಾದಿಯು
ಧ್ಯಾನದಾದಿಪ್ರಕಾಶಲಿಂಗನಾದಿ ದೇವ ॥ ಪಲ್ಲ

ಸಲೆ ನೆಚ್ಚಿ ತನ್ನ ನಂಬಿ ಭಜಿಸುವರ
ಬಲುಭಾಷೆನಿತ್ತು ಪಿತಪುತ್ರಮೋಹವ
ನಲವಿಂದ ಪಿಡಿದುಕೊಂಡು ಆಲಿಂಗಿಸುವ
ಜಲದಂಕ ಇನತೇಜ ಶಾಂತಸುದಾವ ೧

ಮೃಡನಾವತಾರ ದೇವ ದೇವ
ಪೊಡವಿವೀರೇಳು ಜಗವನು ಪೊರೆವ
ನಡೆವ ಶಿವಾಚಾರದ ನಡೆ ಘನವ
ದೃಢದಿಂದ ಭಜಿಸುವರಿಗೊಲಿದು ತೋರುವ ೨

ಧರೆಯೊಳಧಿಕ ಶರಭ ಹೋಮವೇದ
ಗುರುಬಸವೇಶ ಲಿಂಗದೇವನಿರವ
ಆರಿದು ನೋಡುವರಿಗೆ ಕರುಣವೀವ
ಕರದಿಷ್ಟಲಿಂಗಜ್ಞಾನಗಲದಿರುವ ೩

೨೧೫

ಅಗಲಿ ಪೋಗುವದೇಕೊ ಅಕಳಂಕಮಹಿಮನೆ ॥ ಪಲ್ಲ

ಹುಟ್ಟಿದ್ಧೆನೊಸಲಿಂದ ಪಟ್ಟವೆಲ್ಲವು ಬೆದರೆ
ಕಟ್ಟಿಳಿಲ್ಲದೆ ಕಾಲಾಟದ ತತ್ವಕೆ
ನಿಟ್ಟೆ ಬೆವರ ಭದ್ರೆಯೊ ವೀರಯ್ಯ

ಬಲುಉಳ್ಳ ರತ್ನಕ್ಕೆ ನೆಲೆಯು ಮೋಹರ ಚಿನ್ನ
ಚೆಲುವಿಕೆಯಲ್ಲವೆ ಒಲುಮೆ ಸತಿಯಳನು
ತೊಲಗಿ ಪೋಗುವದ್ಯಾಕೊ ವೀರಯ್ಯ ೨

ವಲ್ಲಭೆ ಮೃದವಚನನೆಲ್ಲ ಕರ್ಣದೊಳಿಟ್ಟು
ಗಲ್ಲವ ಪಿಡಿದು ತಕ್ಕಿಸಿ ಕರದಿಷ್ಟನುಂ
ನಿಲ್ಲದೆ ಕೂಡಿ ಬೆರೆದು ಲಿಂಗಯ್ಯ ೩

೨೧೬

ಆರಗೊಡವೇತಕೆ ಅಪರಂಪಾರಮನಿತ್ತು
ಹಾರದೊಳಿಗವ ಮಾಡಿಸದೆ ಬಿಡ ವೀರ ॥ ಪಲ್ಲ

ಹುಟ್ಟು ಮರಣವ ಬಲ್ಲದಿರವ ತಾ ಮರೆಮಾಡಿ
ಪುಟ್ಟಿ ಸಣ್ಣಿಸಿಯೆ ಸೂತ್ರವಿಡಿದು ಆಡಿಸುವ
ಕಟ್ಟಳೆಯ ಮೂರುಲೋಕವನಾಳ್ವ ತವನಂದಿ ವೀರ
ನಟ್ಟಿದರೆ ಮೇಗೆ ಸಂತಿಹನಿಟ್ಟೊಳಿಗವ ೧

ಜೀವ ಸಂಜೀವನನು ನೀನಲ್ಲದಿನ್ನಿಲ್ಲ
ಕಾವಲಟ್ಟುಳಿಗಾಸೆ ಬೀಳ್ವ ನರ ಜೀವ
ದಾವಧಾವತಿ ತೋರಿ ಕೊಟ್ಟು ರಕ್ಷಣೆ ಶಿಕ್ಷೆ
ಆವನಿಯೆಂಬತ್ತು ನಾಲ್ಕೋಟಿ ಪೊರೆವ ೨

ಕನಕಗಿರಿಗಧಿಕ ಕಾಳಾಂಬರುದ್ರ ನೀನೆಂದು
ಘನವಾದ ಶಿವಬಸವಗಣಕೆ ಪಿತನಿಂದ
ವನ ಮಾತೆ ಪುತ್ರ ನೀನೊಂದು ಕಾರಣ ಮರಳಿ
ಜನಿಸಿ ಭಕ್ತರ ಕರದವಿಷ್ಟನೆಲೆವಾಸ ೩

೨೧೭

ಇನ್ನಾಕೆಯೀಮನಕೆಯಿಷ್ಟು ಚಿಂತೆಗಳು
ಮುನ್ನ ಮಾಡಿದ ಸುಕೃತ ತಪ್ಪದೆಲೆ ರಮಣಿ ॥ ಪಲ್ಲ

ಬಡವ ಬಲ್ಲಿದ ದೊರೆ ಮಂತ್ರಿ ಕರಣಿಕನಂ
ದೃಢ ಗುರುವು ಮೊದಲು ನಾನಾ ಜೀವವು
ನಡವಳಿಯು ನಡತೆ ಶಿವನಿಟ್ಟುದಾದಿಯ ಮಾರ್ಗ
ಕಡೆಯಾಗೀಗೆಂತು ಜೀವಿಸಲುಂಟೆ ರಮಣಿ ೧

ಹಿಂದೆ ಮನುಮುನಿದೇವ ದಾನ್ವರಿಂಗಿತವಿನ್ನು
ಸಂದ ಶರಣರ ಬಾಳ್ವೆ ಶಾಸ್ತ್ರದಲ್ಲಿ
ತಂದೆ ಶಂಕರಲಿಂಗನಿಂದಾದ ಸುಖವಿತ್ತುದುದರಿ
ಎಂದಿರೆ ಪೂರ್ವಿಕವ ರಮಣಿ ೨

ಮನುಜದೇಹಿಗಳಿಗಿನ್ನೆಂತು ತಾ ಬಿಡುವುದೆ
ಮನುಜರರಿಯರು ಮಾಯಪಾಶವನ್ನು
ಕನಸ ಕಂಡಂತೆ ಈ ಭೋಗಕ್ಕೆ ಮರುಳಾಹ
ಘನಮಹಿಮವಿಷ್ಟಲಿಂಗನು ಒಪ್ಪ ರಮಣಿ ೩

೨೧೮

ದೃಢವುಳ್ಳವನೆ ನೀನು ಕೆಳದಿವೀರ
ಪೊಡವಿವೀರೇಳಕೆಲ್ಲ ಖಡುಗ ಆದಿಯು
ಖಡುಗ ಮುನ್ನೂರರವತ್ತಾಯುಧವನು ಪಿಡಿದು
ಗುಡುಗುಡಿಸುವ ಮೃಡನ ಕುಮಾರ ॥ ಪಲ್ಲ

ವಾಮಭಾಗದಿ ಸೋಮೇಶ ಮುಂದೆ ಮಂಡಿಸಿ
ಪ್ರೇಮಿ ಬಸವನಾನಂದ ಉಮೆವೀರನವತಾರ
ಆದಿನಾಂಟ್ಯದ ಕರ್ಣ ಸುಮನ ಕಂಪಕ
ಪೂರಿತಗಣಿತ ನಮೋ ಕೆಳದಿ ಶ್ರೀ ವೀರನೆ ೧

ನಾರಸಿಂಹನ ಮರ್ದಿಸಿ ಕಟ್ಟೊರಕೆ
ಹಾರಲಿಟ್ಟಂತ ದೇವ
ಮಾರಿ ಮಸಣೆ ದುರ್ಗಿ ಚಾಮುಂಡಿ ಹ್ರೂಂಕಾರಿ
ಕ್ರೂರ ಮರುಳರ ಕೂಡಿ ಮಲತರನೋಡಿಸಿ ಶಿಕ್ಷಿಪ ದೇವನೆ ೨

ಶಿಲೆ ನಾನಾ ಬಗೆದರ್ಶಿಯನೀಕ್ಷಿಸುವಂತ
ನೆಲೆ ಆದಿದೇವ ನೀನೆ
ಚೆಲುವ ಚೆನ್ನಿಗ ಚಲದಂಕ ನೀನಲ್ಲದೆ
ಕಲಿಗಳೊಳಗೆಣೆಯಿಲ್ಲದೇವನೆವಿಷ್ಟಲಿಂಗದ ಕ್ರೀಯನೆ ೩

೨೧೯

ನೋಡಿದೆ ನಾನು ನೋಡಿದೆನೊ ನಿನ್ನ ಕುರುವ ಇರುಹನೆಲ್ಲ
ರೂಢಿಗಧಿಕ ಅಘೋರವೀರನೆ ನಿನ್ನನೆ ॥ ಪಲ್ಲ

ನಿನ್ನ ನಂಬಿದರೊಳು ಕನ್ನೆವೆಣ್ಣಿನ ಮೋಹ
ಉನ್ನಂತ ಸಿರಿಯು ಸಂಪನ್ನಾಗಿ ಕಣ್ಣ
ಪುಣ್ಯ ಹಬ್ಬಕೆ ತಾ ಮಿಗಿಲಾಗಿ ತನಿ
ವಣ್ಣ ಚೂತದ ಕಳಿತಿದಿರಾಗಿ ಕೂಡೆ
ಉಣ್ಣಿಸಿ ನೋಡುವ ದನಿಯಾಗಿ
ಆಗಲೀಯಗಿ ತೂರ್ಯ ತವಕದೆ ಬಂದುಯೆಂದಿಗಗಲ ಕೂಡೊ ವೈ
ರಾಗಿ ತಂದೆ ಆಂದ ಮೋಹಕೆ ಅತಿ ಪ್ರೀ
ಯಾಗಿ ತೇಜ ಒಂದು ಕೋಟಿಯು ದೇವ ಬೆರೆದನಾಗಿ ೧

ಸರಸಿಜ ಬಯಕೆಗೆ ಇನನೆದ್ದು ಬೆರದಂತೆ
ದೊರೆಪುತ್ರ ನಿರ್ಮಿತವಾದಂತೆ
ಕರಿಗಿನಿಗೋಲ ತಂದು ಮುಂದಿಟ್ಟಂತೆ ಪ್ರಿಯ ಚೀನಿಸ
ಕ್ಕರೆ ಹಾಲ ಸವಿದಂತೆ
ಪುತ್ರನಗಲಿ ತಾಯ ತಾನು ಬೆರದಂತೆ
ಮೋಹಪ್ರೇಮಾಯ ಅಘೋರಾಯ
ಮಾನ ಮಮತೆಯಿಂದೊಲಿಯೊ ಶಶಿಕಾಂತೆ
ಅಂಬರ ಶಶಿಯಿರವಿಗೆ ಬಂದು ಬೆರೆದಂತೆ
ನಿಮ್ಮೊಳಿರಕವಾದರಿತಕ್ಕೆ ಬಿಡದಂತೆ ೨

ಅವನಿಯೊಳಧಿಕವಿಕ್ಕೇರಿಯ ನಗರದಿ
ಅವತಾರ ಬಸವನಿದಿರಲಾದೆ
ಭವ ದುರಿತವ ಕಳೆವಂತ ವಿನೋದಿ
ನವ ವಿವಿಧ ಸಂಗೀತಸರಬೇಧಿ
ಹವಣರಿದುಪಾಯವ ಸವಿ ಸವಿ ಸೇದಿ
ದಯಾ ಕರುಣೆಸೊ ಧರ್ಮಶಾಸನೆ
ಭವಹರ ನತಘೋರವೀರನ ದಿ
ಟವ ಸ್ಥಿರಮೋಹ ನೀನಿಲ್ಲಿ ನೆಲಸಿದಿ
ದೇವ ಹರುಷದಿ ಕರದಿಷ್ಟಲಿಂಗನಿಧಿ ೩

೨೨೦

ಓಂ ನಮೋ ಹರನೆನ್ನಿ ಲಿಂಗಪೂಜಕ
ಓಂ ನಮೋ ಹರನೆನ್ನಿರಿ ॥ ಪಲ್ಲ

ಮತಿಯುಳ್ಳ ಕವಿಗಳೊಳತಿಮಥನಿಸದಿರಿ
ನುತಕಾಯ ಶಿವನ ಭಕ್ತರೊಳು ಸರಿಯದಿರಿ
ಮತಿಹೀನ ಮೂರ್ಖಗೆ ಒಲವ ತೋರದಿರಿ
ಜತಿಯಾಗಿ ಈರ್ವರೊಂದಾಗಿ ಕನಲದಿರಿ
ಹಿತವುಳ್ಳ ಸತಿಯರೊಳ್ ಮದನ ಮಾತಾಡದಿರಿ
ಕ್ಷಿತಿಗೆ ಅಧಿಕ ತವನಂದಿವೀರನ ನೀವು ಗತಿಯೆಂದು ಪೂಜಿಸಿ ಸುಖಶಾಂತಿ ಬೇಡಿರಿ ೧

ಕುಲವರಿಯದೆ ಕೂಡಿ ಹಲವನಾಡದಿರಿ
ಚೆಲುವ ಸತಿಯ ನೋಡಿ ಮಲತು ನೋಡದಿರಿ
ಬಲುವುಳ್ಳವರ ಕೂಡಿ ಚಲವ ಮಾಡದಿರಿ
ಸಲಿಗೆಯ ಸರಸವ ಗುರುವಿಗಾಡದಿರಿ
ಪಲುಗು ಪಾಪಿ ಪರಮಾತ ಲೆಕ್ಕಿಸದಿರಿ
ಮಲ ಮುಮುಕರ ಮಂದಾಕಿನರಸನ
ಗೆಲವಿಂದ ಪೂಜಿಸಿ ಸ್ತುತಿಯ ಮರೆಯದಿರಿ ೨

ಮಂತ್ರಿಯ ಕೂಡಿನ್ನು ಮಥನ ಮಾತಾಡದಿರಿ
ತಂತ್ರವಾಹಕರೊಳು ಅತಿಯೆಚ್ಚರದೊಳಿರಿ
ಮಂತ್ರಗಾರುಡಿಗರೊಳೇಕವಾಗದಿರಿ
ಯಂತ್ರವ ಹಿರಿಯರು ಬರದು ಕಟ್ಟದಿರಿ
ಮಂತ್ರಸ್ಮರಣೆಯುಳ್ಳ ಯತಿಯ ನಿಂದಿಸದಿರಿ ದೀ
ಪಾಂತ್ರಕಾದಿಯ ದೇವ ಕರದವಿಷ್ಟಲಿಂಗವೆ
ಗತಿಯೆಂದು ಪೂಜಿಸಿ ಮೋಕ್ಷವ ಬೇಡಿರಿ ೩

೨೨೧

ಆರು ಬಲ್ಲರೊ ಮಹಿಮವ ಬಸವಲಿಂಗ ಕ್ಷೀರವಾರಿಧಿ ನಿನ್ನನು
ಪಾರಾಪಾರಾದಿ ನೀನು ಆದಿದೇವ ನೀನೆಂದು ಮಾರಹ[ರ] ಸುದೇಹನೆ ॥ ಪಲ್ಲ

ನಿನ್ನಿಂದ ಜಗದುತ್ಪತಿ ನಿತ್ಯ ನೀನಾಗಿ
ನನ್ನಿಯಿಂದಲಿ ಸಲಹಿ
ಪನ್ನಂಗಧರನ ಧರ್ಮ ಶಾಂತಿ ನೀನೆಂದು
ಚಿನ್ಮಯ ಚಿದ್ರೂಪ ಚಿತ್ಪ್ರಕಾಶನೆ ನೀನು ೧

ಜಗದಂಧಕಾರಕ ನೀನೆ ಕಾಯ್ವಾತ ನಿತ್ಯ
ನಿಗಮಾಗಮಾಗಮ ನೀನೆ
ಬಗೆ ಬಗೆ ಜೀವ ಎಂಬತ್ತು ನಾಲ್ಕೋಟಿಯು
ಒಗುಮಿಗೆಯುಲಿಯಿತ್ತು ಸಲವಂತ ದೇವನೆ ೨

ಇಪ್ಪತ್ತುಯುಗದಿಂದತ್ತ ಶಿಲಾದಮುನಿ
ಒಪ್ಪಿ ದೇವನೆ ನೀನಾಗಿ
ಕಪ್ಪುಗೊರಳದೇವ ಶಿವನ ವಾಹನವಾಗಿ
ಮುಪ್ಪುರಕಾದಿಪಿತ ಬಸವಲಿಂಗನೆ ನೀನು ೩

ನಾನು ತಾನೆಂಬ ಗರ್ವರ ಮುರಿದು
ನೀನನಾದಿನೆಲೆಯು ನಿಲಿಸಿ
ಭಾನುಪ್ರಕಾಶವ ತೋರಿ ಧರೆಯನೆಲ್ಲ
ನೀನೆ ಸೂತ್ರಿಕವಿಡಿದಾಡಿಸುವನೆ ನೀನು ೪

ವಸುಧೆಗಾದಿಯು ಅಧಿಕ ದಕ್ಷಿಣಕಾಶಿ
ವಶವಾಗಿ ಕುರುವತ್ತಿಯು
ದೆಸೆಯೆಂಟ ದೇವ ಭಕ್ತರ ಶಿರ ಬೆನ್ನಿಲಿ
ಬಿಸರದಿ ರಕ್ಷಿಪವಿಷ್ಟಲಿಂಗನೆ ನೀನು ೫

೨೨೨

ನಂಬಿದೆನಯ್ಯ ಮಾಧವನೇ.
ತ್ರ್ಯಂಬುಜಾರ್ಚಿತ ಪಾದವ ॥ ಪಲ್ಲ

ಮಂಜುಳಾಕಾರದ ಮೋನವೆ ಪುಣ್ಯದ
ಪುಂಜ ಬಿಂಜದಿ ನುಡಿಯೆನ್ನೊಳು
ಕುಂಜರಭಂಜನ ಕುಟಿಲದೈವದ ಗಂಡ
ನಂಜುಗೊರಳನಾಥ ಮಂಡಲದೇವ ೧

ಸಾರಿದೆನಯ್ಯ ನಿನ್ನನು ನಿರಾಮಯ
....ಯಾತಕೆಯೆನ್ನೊಳು
ಚಾರುಚರಿತ ನಿನ್ನ ಚಲವ ಮರೆದು ಪೋದೆ
ಕಾರುಣ್ಯಜಲನಿಧಿ ಕಲೆವಂತದೇವ ೨

ಪಂಥ ನಿಮಗೆನ್ನೊಳು ಪವನರೂಪೆ
ಚಿಂತೆಗೆ ಒಳಗಾದೆನೊ
ಸಂತತವಿತ್ತೆನ್ನ ಸಲಹೊ ಸದ್ಗುರುರನ್ನ
ಅಂತಕಮರ್ದನ ಇಷ್ಟಲಿಂಗೇಶ ೩

೨೨೩

ಪೊಂಜೆಳೆಮೈಯೊಳೆ ಪೊಳೆವ ಪೆಣ್ಗಳ ರನ್ನೆ
ಕಂಜಲೋಚನೆ ಕೇಳೆ ಕಾಂತನ ಬಗೆಯು ॥ ಪಲ್ಲ

ನೋಟ ಬೇರಾದುದು ನುಡಿಯೆರಡಾದುದು
ಊಟದಿ ವಂಚನೆ ಬೆರೆದುದಾತಗೆ
ಚಾಟುತನದ ಮಾತ ನುಡಿವದೇನೊ ತನ್ನೊಳು
ಕೌಟಿಲ್ಯವಾಗಿದೆ ಉಳಿಪೊಡೆ ತರುಣಿ ೧

ತನ್ನಂಕಮಾಲೆಯ ಪಾಡುವೆನನುದಿನ
ತನ್ನಿಂದ ಬೇರೊಂದು ಗತಿಯುಂಟೆಯಾನಾಸಿ
ಸನ್ನೆಯನರಿದಿಂತು ಸವಿಗಲೆದೋರದೆ
ಇನ್ನು ಮುನಿವರೇ ಏ ಮುದ್ದು ಚದುರೆ ೨

ಸುಂದರ ಕರಕಂಜಪುರವರಾಧೀಶ್ವರ
ಇಂದುಶೇಖರ ಇಷ್ಟಲಿಂಗನ ಕರೆದು
ತಂದು ಚಿತ್ತಾಪುರದರಮನೆಯೊಳು ಬೇಗ
ಚಂದದಿ ನೆರೆವಂತೆ ಮಾಡೆಂದು ರಮಣಿ ೩

೨೨೪

ಮುದ್ರೆಮಾತನೆ ತಿಳಿದು ಮುಕ್ತಿರಾಜ್ಯವ ಕಂಡು
ಭದ್ರಮಂಟಪದೊಳಗಿರಬಲ್ಲಡವ ಯೋಗಿ ॥ ಪಲ್ಲ

ಧರಣಿಯಂಬರವಗ್ನಿತತ್ವದೆ ವರವ ಬಲಿದು
ತರುಶಾಖೆರುತಗೂಡಿದನ ಸ್ಥಿರದೆ
ಪರನಾದ ತೇಜದೊಬ್ಬುಳಿಯು ಪ್ರಜ್ವಲಿಸುತಿರೆ
ಪರಮ ಷಣ್ಮುಖಮುದ್ರೆಯೆಂದು ಪೇಳುವರು ೧

ನಾಸಿಕಾಗ್ರದ ಮೇಲೆ ನಯನಗಳ ನೆರೆಮುಗಿದು
ಸೂಸುತಿಹ ವಾಯುವನು ಸುಮ್ಮನಿರಿಸಿ
ಭಾಸುರ ಪ್ರಣವನಾದದೊಳು ಮನ ಲೈಸುತಿರೆ
ಲೇಸೆನಿಪ ಶಾಂಭವಿಯು ಇದೆಂದು ಪೇಳುವರು ೨

ಮಂಡಲತ್ರಯವ ಮಂಟಪಗಳೆರಡರ ನಡುವೆ
ಕೆಂಡದಂತಿಪ್ಪ ಲಿಂಗದ ಪರಿಯನು
ಕಂಡು ಕಣ್ಮುಚ್ಚಿ ಮನವೊಲಿದು ಮಯಿಮರದಿರಲು
ಕಂಡವರು ಪೇಳುವರು ಖೇಚರಿಯು ಇದೆಂದು ೩

ಷಣ್ಮುಖಿಯು ಶಾಂಭವಿಯು ಖೇಚರಿಯನಾಚರಿಸಿ
ಸಣ್ಣ ಅಷ್ಟಾಂಗುಲದ ದೇಹದೊಳಗೆ
ಕಣ್ಮನಕೆ ಗೋಚರಿಪ ಷಣ್ಮಂತ್ರರೂಪಿಲಿ
ಬಣ್ಣದಕ್ಷರಗಳೆರಡರರಿವುದೇನರಿದು ೪

ಇಂತೇಕವಾಗೆಸೆವ ಪ್ರಣವಪೀಠದ ಮೇಲೆ
ಕಂತುಹರ ಪ್ರಾಣೇಶ ಸಂಗಮನ ನಿಲಿಸಿ
ಸ್ವಾಂತವರಿಯಲು ಸ್ವಾನುಭಾವ ತಲೆದೋರುತಿದೆ
ಚಿಂತೆಯಾತಕೆ ಮುಕ್ತಿಯೆಂಬುದಿದು ಸಿದ್ಧ* ೫

## ಕವಿಲಿಂಗವಿರಚಿತ ಸ್ವರವಚನ

೨೨೫

ಕಾವ್ಯ ಬೇರೊಂದೆಡೆ ಕಲಿಯಬೇಕೆ
ದಿವ್ಯ ಕಾಮಿನಿಯರಂಗಸಂಗದೊಳಗೈದೆನದಕೊ ॥ ಪಲ್ಲ

ಹರಿಣಾಕ್ಷಿಯರ ನೋಟ ಹರಿಶ್ಚಂದ್ರಕಾವ್ಯವು
ಸರಸಾಚಾರಧನ್ಯ ಸಂಗಮಪುರಾಣ
ಅರಸಂಚಿಗಮನೆ ವೆಗ್ಗಳದ ಲೀಲಾವತಿ
ಪರಮ ಅಯಿಶ್ವರ್ಯವು ಪ್ರಭುಲಿಂಗಲೀಲೆ

---

* ಅಂಕಿತ ಅಸ್ಪಷ್ಟ

ತಿದ್ದಿ ನೊಸಲ ಗಂಧ ಕಸ್ತೂರಿತಿಲಕ
ಮುದ್ದುಮುಖ ಲಾವಣ್ಯವು ಮೂಡಿಬರುತ
ಶುದ್ಧ ಲಾವಣ್ಯ ಸೊಬಗಿನಸೋನೆ ವನಿತೆಯರ
ಪೊದ್ದಿದ್ದರವಳಾಸ್ಯವು ರುಚಿಯುಪ್ಪ ರಾಮಚರಿತೆ

ಮಡದಿಯರ ಮೋಹವೇ ಮೋಹನ ತರಂಗಿಣಿಯು
ನಡುವಿನ ಭೂಮಿ ಅಮರಸಿಂಹ
ದೃಢತನದಿ ವಿರಹವೇ ಧನಂಜಯ ನಿಘಂಟು
ಜಡೆತತಿಗಳಾ ಮುಡಿ ಸುಜಯಿಮಿನಿಯು

ಕೋಮಲಾಂಗಿನಿಯರ ಕುಚವೆ ಕಕ್ಕೋಕಶಾಸ್ತ್ರವು
ಪ್ರೇಮಲಾವಣ್ಯ ಪ್ರಹಲ್ಲಾದ ಚರಿತೆ
ಸೋಮಸಂಧಾನವೆ ರುಕ್ಮಾಂಗದ ಚರಿತೆ
ಕಾಮಿನಿಯರ ತೋಳು ಎರಡು ತರ್ಕಭೂಷಿ

ಸಾರು ನಿರ್ಮಳಬುದ್ಧಿ ಚಾರುವತಿಪೂವೆಂಬ
ನಾರು ಜೀವಿಸುವೊಡೆ ಆ ರಾಮಾಯಣ
ಚಾರು ಶ್ರೀಕವಿಲಿಂಗ ಸತಿಯೊಳೊಡಗೂಡಿದನು
ಆರು ತಿಳಿದದರ ಮೇಲೆ ಭಾಗವತವು

## ಕಳಲೆ ನಂಜರಾಜವಿರಚಿತ ಸ್ವರವಚನ

೨೨೬

ಮರೆತುಬಿಡುವರೆ ಮನದಿ ಗರಳನಗರಾಧೀಶ ॥ ಪಲ್ಲ

ಎರಗಲಿಲ್ಲವೆ ನಿಮ್ಮ ಪರಮ ಭಜಕರ ಪದಕೆ
ದೊರೆತನದ ಮೋಡಿಯೊಳು ಗರುವದಿಂದ
ಜರೆದೆನೊ ಸತ್ಯಗುಣದಿರವ ಮಾನವರನು ಆ
ದರಿಸಲಿಲ್ಲವೆ ಮುದದಿ ಧರಣಿ ಅಮರರ ದೇವ ೧

ಪ್ರಾಣೇಶ ಮಾಜದೆನ್ನಾಣೆ ಪೇಳೆನ್ನೊಡನೆ
ವಾಣೀಶ ಮುಖ್ಯ ಗೀರ್ವಾಣ ವಿನುತ
ಕಾಣಬಾರದೊ ಮಿಕ್ಕ ಕ್ಷೋಣೀಶರಿಂತೆನ್ನ
ಊಣಯುವ ಪೇಳದಿಹ ಜಾಣತನವೇನೀಗ ೨

ಕವಿಲಿಂಗನೊರೆದ ಪದ ಸವಿಯಾದುದೇ ಕಿವಿಗೆ
ವಿವರಿಸಲು ನಾಚುವೆನು ಸ್ತವನಾಧೀಶ
ದಿವಿಜಾರಿ ಮದಹರನೆ ತವಕದಿಂ ಪೊರೆಯೆನ್ನ
ಭವರೋಗವೈದ್ಯ ನೀ ಅವಧರಿಸು ಬಿನ್ನಪವ ೩

ಭಸಿತವನೆ ಬಿಟ್ಟು ಲೇಪಿಸಿದನೆ ಚಂದನವ
ಎಸೆವ ರುದ್ರಾಕ್ಷಿಮಣಿ ಬಿಸರದಿಂದ
ಹಸನೆಂದು ಧರಿಸಿದೆನು ಎಸೆವೊ ರನ್ನದ ತೊಡವ
ಕುಸುಮಹಾರದಿ ಸಮರ್ಪಿಸದೆ ನಾ ಮರೆತೆನೊ ೪

ಗರಳನಗರಾಧೀಶ ಮರೆವೊ ಶ್ರೀಕಂಠೇಶ
ಚರಣಸೇವಕನಾಗಿ ಕಳಲೆಯೊಳ್ದ
ದೊರೆವೂರ ನಂಜೇಂದ್ರನೊರೆದ ಪದವನು ಕೇಳಿ
ಪಿರಿಯನೀಶ್ವರನೆಂದು ಧರೆ ಪೊಗಳುತಿದೆ ಬೇಗ ೫

## ಚೆನ್ನಕವಿ ವಿರಚಿತ ತೋಂಟದ ಸಿದ್ಧಲಿಂಗಯತಿ ಸುವ್ವಿ

೨೨೭

ಸುವ್ವ ಬಿ ಎಂದೆನ್ನಿ ಸುಗುಣೆಯರೆಲ್ಲರು
ಸುವ್ವ ಬಿ ಎಂದೆನ್ನಿ ಶುಭದಿಂದ
ಮೂವರುದೇವರೊಡೆಯ ತೋಂಟದಾರ್ಯನ
ಯುವ್ವನೆಯರು ಪಾಡಿ ನಲಿವುತ ॥ ಪಲ್ಲ

ತಳಿರಡಿ ಸೆಳೆನಡು ಎಳೆವಾಳೆದೊಡೆ ಸೊಂಪು
ದಳೆದ ಜಘನದ ಜಾಣೆಯರೆಲ್ಲ
ಕಳಸಕುಚದ ಕಾಂತಿ ಮೊಗದಳಿಗುರುಳಿನ
ನಳಿತೋಳ ನಲ್ಲೆವೆಣ್ಣುಗಳೆಲ್ಲ ೧

ದೋರದುರುಬು ತೊಂಡೆವಣ್ದುಟಿ ಮಿಗೆ ಸೊ
ಕ್ಕೇರಿದ ಜವ್ವನಾಂಗಿಯರೆಲ್ಲ
ಕಾರಮಿಂಚಿನ ಕಡೆಗಣ್ಣಿಗೆ ನೋಟದ
ನೀರಜದಳದ ನೇತ್ರೆಯರೆಲ್ಲ ೨

ಜಾತಿ ಪದ್ಮಿನಿಯು ಚಿತ್ತಿನಿಯು ಶಂಕಿನಿಯು ಮೇ
ಲೋತು ರಾಜಿಪ ಹಸ್ತಿನಿಯರೆಲ್ಲ
ಭೂತಳದೊಳಗೆ ನಾಲ್ವಿಧದ ವನಿತೆಯರು
ಓತು ವಸ್ತ್ರಾಭರಣನಾಂತು ೩

ಚೆನ್ನದೊರಳು ರನ್ನದೊನಕೆವಿಡಿದು ನೆರೆ
ಸನ್ನುತ ಗಂಧಸಾಳಿಯು ಪೊಯ್ದು
ಉನ್ನಂತ ಶುಭ್ರವೆಸಗುವ ಕೈ ಅಕ್ಕಿಯು
ಚೆನ್ನಪುರುಗಳು ಚಳಿಸುತ ೪

ಮುಡಿಯನೊಲೆವುತ ಪೂಂಗೊಡಮೋಲೆಯಲುಗುತ
ನಡು ಮಣಿವುತ ನಲಿನಲಿವುತ
ತೊಡೆ ದಡದಡಿಸುತ ತೊಡೆಗಳಲ್ಲಾಡುತ
ಅಡಿಯ ಹಿಂದಕೆ ಮುಂದಕಿಡುತಲಿ ೫

ನಿರಿಯ ಪಸರಿಸಿ ನಿಲ್ಲುತ ನಿಡುದೋಳ್ಗಳ
ನೊಡನೆ ಬೀಸುತಲೆಡಬಲಗೈಯ
ಪಿಡಿದೊನಕೆಯ ಭರಿಸುತ ಬಲುನಟಣೆಯ
ಕುಡಿವರಿಸುತ ಕೋಮಲೆಯರೆಲ್ಲ ೬

ನೀಡಿ ನೆಗಹಿ ತೋಳ ಕೂಡೆ ಕೈಯಿಂದಲಿ
ಜೋಡೆತ್ತಿ ಬಿಡದೊನಕೆಗಳನು
ಮೂಡುವ ಬೆವರನಿಡುತ ಸ್ವರಗೂಡುತ
ಪಾಡುತ ಗಾಡಿಕಾತಿಯರೆಲ್ಲ ೭

ಶ್ರೀರಾಗ ಶಿವನಾಭರಣ ದೇಸಿ ಕಾಂಭೋದಿ
ಸಾಳಂಗ ಲಳಿತೆ ಮಂಗಳವನು
ಭೈರವಿ ಕೇತಾರಗೌಳ ಗಾಂಧಾರಿ ಸಾ
ವೇರಿ ಸರಾಗದೊಳುಲಿವುತೆ ೮

ಸಂಗನ ಬಸವೇಶ ಚೆನ್ನಬಸವ ಪ್ರಭುಲಿಂಗ
ಸಂಗತ ನೀವಿರುತಲಿ
ಮಂಗಾಯಕ್ಕರಸಿ ಮಹಾದೇವಿ ಕೊಡಗೂಸು
ಚಂಗಳೆಯಮ್ಮವ್ವೆಗೊಲಿದನೆ ೯

ನೀರೆ ನೀಲಾಂಬಿಕೆ ಕಾರಿಕಾಲಮ್ಮೆಯು
ಸೂರಸಾನಮ್ಮನಿಗೊಲಿದನೆ
ಹೇರೂರಹೆಣ್ಣು ಜಂಬೂರಸತ್ಯಕ್ಕನು
ನಾರಿ ನಾಗಾಂಬೆಯರೊಡೆಯನೆ ೧೦

ನಿಡುಜಡೆ ನಿಟಿಲಾಕ್ಷ ಜಡಿದ ತ್ರಿಶೂಲ ಮೈ
ದೊಡವಾಂತು ಭಸಿತದೆನ್ನೊಡೆಯನೆ
ಅಡಿಯು ಪೊಂಗೆಜ್ಜೆಯು ನುಡಿ ಪ್ರಣವಾಕ್ಷರ
ಷಡುಸ್ಥಲಬ್ರಹ್ಮಗೆ ಶರಣೆಂಬೆ ೧೧

ಈಶ ಮಹೇಶ ಸುರೇಶ ವಾಣೀಶ ಲ
ಕ್ಷ್ಮೀಶ ವಿನುತ ಪಾದಯುಗಳನೆ
ದೋಷವಿನಾಶ ವಿನೇಶ ವಿಶೇಷ ಪ್ರ
ಕಾಶ ಸಿದ್ಧೇಶ ನೀ ಸಲಹೆನ್ನ ೧೨

ಧರಣಿಗಧಿಕವಾದ ಪುರ ಎಡೆಯೂರೊಳು
ಸ್ಥಿರನೆಲೆವಾಸ ಪಾಲಿಸೊಲಿಸ
ವರ ಕವಿ ಚೆನ್ನನ ಪೊರೆವ ತೋಂಟದಸಿದ್ಧ
ಗುರುವೆ ನಿಮ್ಮಡಿಗೆ ನಾ ಶರಣಾರ್ಥಿ ೧೩

## ಗುರುಸಿದ್ಧ ಅಂಕಿತದ ಸ್ವರವಚನ

### ೨೨೮

ರಾಗ : ಶಂಕರಾಭರಣ

ಬಸವಾದಿ ಪ್ರಮಥರ ಚರಣ ಸಾರಸಗಳಿ
ಗೊಸೆದೆನ್ನ ಮನವನಾರಡಿಗೈವೆನು
ಮಿಸುನಿಯೆ ತೊಡವಾಗಿ ಬಹುನಾಮವಾಂತಂತೆ
ಪಶುಪತಿ ವೀರಾವತಾರರೆಂದೆನಿಸುವ ॥ ಪಲ್ಲ

ಶಿವನ ಚಿದ್ಧರ್ಮವೆ ಶರಣರಾಳ್ತನಗೊಂಡ
ಶಿವತತ್ವದನುವ ಭೂಮಿಗೆ ಬಿತ್ತಿದ
ಶಿವನೆ ಮನುಷ್ಯದಿಂ ಮಾಯೆಯನಿಳಿಕೈದ
ಶಿವನ ರೌದ್ರಾವೇಷರಸವೊಂದೆ ಕರುವಾದ ೧

ಲಿಂಗದಿಂ ನೃಪಗೆ ಸಾಕ್ಷಿಯ ಕೊಟ್ಟು ನಿನ್ನಿಷ್ಟ
ಲಿಂಗದಿಂ ಪೆರ್ಗೋಪವಗುಳಿಸಿದ
ಲಿಂಗಕ್ಕೆ ಪ್ರತ್ಯಕ್ಷಮಣಿಸಿತ್ತ ಕರಪದ್ಮ
ಲಿಂಗದಿಂ ತನುವನಡಗಿಸುತ್ತೆ ಬಯಲಾದ ೨

ಮೃಡಬಲಿ ಪೂಗೊಂದ ಸತಿಯು ಕೈಗಡಿದಿಟ್ಟು
ಮೃಡನಿಗೆ ಜಡೆಯೆನಲ್ಜೋಡಲೆತ್ತಿದ
ಮೃಡನಿಗೋಸುಗ ತನುಜನನೆ ಬಾಣಸಗೈದ
ಮೃಡನನೇಳಿಸಿದಾತ್ಮಪಿತನ ಸಂಹಾರಿಸಿದ ೩

ಹರನನೆ ಪೊರಗೆಂದು ಬೇಡೆ ಮತ್ತೊಳಗೈದ
ಹರನೆ ಬಾರೆನಲೊಲ್ಲೆನೆನುತಟ್ಟಿದ
ಹರನಿಗು ವೀರಶೈವೋಪದೇಶವನಿತ್ತ
ಹರನ ಕೈಲಾಸಪುರವನೆಲ್ಲ ಕೋಳ್ಗೊಂಡ ೪

ಈ ರೀತಿಯೊಳು ಮೇಘದಿಂ ಬಂದು ಪೊಳೆಯಿಂದೆ
ವಾರಿ ವಾರ್ಧಿಯು ಮತ್ತೆ ಬೆರೆಯುವಂತೆ
ಶಾರೀರವಿಡಿದೈದಿನೇಳಿಸುತೆ ಶಿವಭಕ್ತಿ
ದ್ವಾರದಿಂ ಗುರುಸಿದ್ಧನೊಡನೈಕ್ಯರಾದಂಥ ೫

೨೨೯

ರಾಗ : ಕಲ್ಯಾಣಿ

ನಿನ್ನ ನಾನೇನಬೇಡಲಿ ದೇವ ಕೊಡಲೆನಗೆ
ನಿನ್ನೊಳೇನುಂಟದೆಲ್ಲವ ನಾನೆ ತಿಳಿದು ॥ ಪಲ್ಲ

ಅಶನವನು ಬೇಡುವೆನೆ ಕಾಲಕೂಟವು ಹೋ ದೇವ
ವಸನವನು ಬೇಡುವೆನೆ ಸಡೆದಾನೆದೊಗಲು
ಪೊಸಭೂಷಣವನು ಬೇಡುವೆನೆ ಭೀಕರಾಹಿಗಳು
ಮಿಸುಪ ಗಂಧವ ಬೇಡುವೆನೆ ಹೆಣದ ಬೂದಿ ೧

ತುರಗವನು ಬೇಡುವೆನೆ ಬಹುದಿನದ ಮುದಿಯೆತ್ತು
ಕರದ ಪಾತ್ರೆಯನು ಬೇಡುವೆನೆ ತಲೆಯೋಡು
ಅರಮನೆಯು ಬೇಡಿಕೊಂಬುವೆನೆ ಪಿತೃವನ ಭೂಮಿ
ಪರಿಚಾರಕರನು ಬೇಡುವೆನೆ ಭೂತಗಳು ೨

ನಿನ್ನ ಸುಗುಣದ ಸಿರಿಯದಿಂತು ಭಿಕ್ಷಾವೃತ್ತಿ
ನಿನ್ನ ನಿರ್ಗುಣಸುಖವ ನೋಡೆ ಕೇವಲವು
ಇನ್ನಿದೊಂದನು ಬೇಡೆ ನೆನಗೆ ನಿನ್ನಯ ಭಕ್ತಿ
ಯನ್ನೆ ಕರುಣಿಸಿ ಸಲಹು ಗುರುಸಿದ್ಧರೂಪ ೩

೨೩೦

ರಾಗ . ಸುರಟಿ

ಚಂದ್ರಕರ ಕಿರೀಟ ಪಾಹಿ ಗಣೇಂದ್ರ ನಿಗಮ ಘೋಟ
ಸಾಂದ್ರ ಗುಣವರ ಮಂದ್ರ ಯಶೋಂಕಮ ಮ
ಹೇಂದ್ರ ಮುಖ್ಯ ದಿವಿಜೇಂದ್ರ ಸದಾರ್ಪಿತ ॥ ಪಲ್ಲ

ಕಮಲನಯನ ಬಾಣ ದಾನವ ಸಮರಜಯ ಧುರೀಣ
ಅಮರವಿಟಪಿ ಮಧು ಸುಮಕಲಾಪಮದ
ಶಮನಮದನ ತನು ಕಮಲವನದ್ವಿಪ ೧

ಲಲಿತಕರಕಪಾಲ ಸೇವಕ ಕಲುಷದಳನ ಶೀಲ
ಜಲದಹೀಂದ್ರ ಕೃತವಲಯ ಪದದ್ವಯ
ವಿಲಯರಹಿತ ಭವಕಲಭ ಮೃಗೇಶ್ವರ ೨

ಶರಣಜನನಿವಾಸ ವಿಚಕಿಲ ಸರಸ ಮಧುರಹಾಸ
ಕರುಣತಪನಲಸದರುಣಜಟಾಭರ
ನಿರುಪಮಾನ ಗುರುಸಿದ್ಧ ಗುರೂಪ ೩

೨೩೧

ರಾಗ : ಪಂತುವರಾಳಿ

ಪಾಲಿಸಯ್ಯ ಪಾರ್ವತೀಶ್ವರ ನೀನೆನ್ನನೊಲಿದು
ಪಾಲಿಸಯ್ಯ ಪಾರ್ವತೀಶ್ವರ
ಪಾಲಿಸಯ್ಯ ಭಜಕಜನ ದಯಾಳು ನನ್ನ ಭವಗುಣಗಳ
ಜಾಲವನ್ನು ತವಿಸಿ ನಿನ್ನ ಬಾಲನೆಂದು ಕರುಣವಿಟ್ಟು ॥ ಪಲ್ಲ

ಮರೆದು ನಿನ್ನ ಧರೆಗೆ ಬಂದೆನೊ ಸಂಸಾರವೆಂಬ
ಉರಿವೊ ಕಿಚ್ಚಿನೊಳಗೆ ಒಂದೆನೊ ಅಜ್ಞಾನವೆಂಬ
ಹಿರಿಯ ಭೂತದಿಂದ ನೊಂದೆನೊ ಪಂಚೇಂದ್ರಿಯಗಳ
ಉರಿಯೊಳಗೆ ಸಿಲುಕಿ ಮುಂದನರಿಯದಧಮನಾಗಿ ನಿನ್ನ
ಚರಣಯುಗವ ಪೂಜಿಸುವದ ಮರದು ನಾನು ಕೆಟ್ಟೆನಕಟ ೧

ಕಾಮಿನಿಯರ ರೂಪ ನೋಡುತೆ ಮಾನಸದೊಳೆಳಸಿ
ಕಾಮಶರದ ಹತಿಗೆ ಬರುತೆ ವಾಯುಗಳನುಳಿದು
ಕಾಮಕೇಳಿಯೊಳಗೆ ಕೂಡುತೆ ಅತ್ಯಾಶೆಯಿಂದ
ಹೇಮಭೂಮಿಗಳನು ಬಯಸಿ ಪ್ರೇಮದಪ್ಪಿ ತೊಳಲಿ ಬಳಲಿ
ಸೋಮಧರನೆ ನಿನ್ನ ಮರೆದು ತಾಮಸದೊಳು ಮುಳುಗಿಹೋದೆ ೨

ಪರರ ಗುಣವನೆಣಿಸಿ ಜರವುತೆ ಕಣ್ಣಲ್ಲಿ ಕಂಡ ಸರ್ವ ವಿಷಯುಗಳಿಗೆ
ಹರಿವುತೆ ದುರ್ಮದದಿ ಸೊಕ್ಕಿ ಗುರುವ ಹಿರಿಯರನ್ನು
ಜರವುತೆ ಆಸಕ್ತಿಯಿಂದ ತರುಣಿ ಸುತರು ನಿತ್ಯವೆಂದು
ಕರಡಿಯಂತೆ ತಬ್ಬಿಕೊಂಡು ಬರಿದೆ ಕೆಡುವೆನಯ್ಯ ನಿಮಗೆ ೩
ಮರುಕವಿನಿತು ಬಾರದಲ್ಲ

ಕೆಡುವ ತನುವ ಇದನು ನೆಚ್ಚುತೆ ಲೌಕಿಕವನಿದನು
ತೊಡರಿ ಮೋಹದೊಳಗೆ ಮೆಚ್ಚುತೆ ನಿರ್ಭಾಗ್ಯ
ನಡಿಯೊಳೆಡಹಿ ನಿಧಿಯಂ ಕಾಣದಂತೆ
ಮೃಡನೆ ನಿತ್ಯಷಡ್ವರ್ಗವೆನ್ನ ಗಾರುಮಾಡಿ
ಹಿಡಿದು ಕೊಲುತಿವೆ ಕ್ಲೇಶಂಗಳೈದ
ವೈರಿಯಂತೆ ಹೊಸಗಿ ಮಸಗಿ ಹೋರುತಿಹವು ಭವದಿ ಸೋಯು
ಲಾರೆ ಶ್ರೀ ಗುರುಸಿದ್ಧರೂಪ ಸಾರ ಮೋಕ್ಷಸುಖವನಿತ್ತು ೪

೨೩೨

ರಾಗ : ಮುಖಾರಿ

ಎಂತು ಸೈರಿಸಲಹುದು ಈ ಭವದ ಬಾಧೆಯನು
ಕಂತುಹರ ಜನಿಪುದನೆ ಸಾಕುಮಾಡು ಭವ ॥ ಪಲ್ಲ

ವಾಯು ಕರಣೇಂದ್ರಿಯಂಗಳನಂ ವಿಷಯುದಾಸೆಗಳು
ದಾಯಾದ್ಯರಂತೆನ್ನ ತಿಕ್ಕಿ ಮುಕ್ಕುವವು
ಕಾಯುಗುಣವೆನಿಪ ಹಸಂತೃಷೆ ನೋವು ನಿದ್ರೆಗಳು
ನಾಯಿಗಳಂತಡಿಗಡಿಗೆ ಮುತ್ತಿ ಮುಸುಕುವುದು ೧

ಒಡಲ ಬಿಡದಾಪತ್ತು ಕೆಡಹಿ ಧರೆಯೊಳಂ ಕಾಡ
ಹೊಡಗಿಚ್ಚಿನಂತೆನ್ನ ಸುಟ್ಟು ಸುರುಳಿಪುದು
ಮಡದಿ ಮಕ್ಕಳ ಮೇಲಣತಿ ಮಮತೆಯುದು ಕಾಲ್ಗೆ
ತೊಡರ್ದ ಬಳ್ಳಿಯು ತೆರದಿ ಕಟ್ಟಿ ಕೆಡಹುವುದು ೨

ಜನರು ಕಪಿಯುನು ಕುಣಿಪುದಿದು ಸಹಜ ಧರೆಯೊಳಗೆ
ಮನವೆಂಬ ಕಪಿಯೆನ್ನ ಕುಣಿಸಿ ಕೊಸರುವದು
ತನುಯಿದಳಿದಳಿದುದಿಸಿ ರಾಜಾಜ್ಞೆಯಂತೆನ್ನ
ನನುದಿನದೊಳಿಹಪರಕೆ ಸುತ್ತಿ ಸುಳಿಸುವದು ೩

೨೨೭

ಅರಿವರ್ಗವೆಂಬುದೆಡವಿಡದೆನ್ನ ಮುರಿದೊತ್ತಿ
ಹರವರಿಸಿ ಹಗೆಯಂತೆ ಕೊಂದು ಕೂಗುವದು
ಮೆರೆವ ತಾಪತ್ರಯವದವಗಹಿಸಿ ಬೇಸಿಗೆಯೊಳು
ಉರಿವ ಬಿಸಿಲಂತೆನ್ನ ಕರಗಿ ಕೊರಗಿಪುದು ೪

ಏಳುವ್ಯಸನಂಗಳೆನ್ನಂ ಕೋಳುವಿಡಿದೊಡನೆ
ಕಾಳಸರ್ಪಗಳಂತೆ ಕಚ್ಚಿ ಕೀಳುವವು
ಹೇಳಲೇನಕಟ ಶಿವಭೋಗಮಯುವು ತಿನ್ನೆ
ನಾಲಗೆಯ ಕಣೆಗಳಂತೆ ಹಿಂಡಿ ಹಿಸುಕುವವು ೫

ಜರೆಮರಣವೆರಡೆನ್ನನೊಡನೊಡನೆ ಮೇಲ್ವಾಯಿದು
ಹಿರಿಯಂತಡರಿ ತಿಂದುತೇಗುವವು
ಮರಹೆಂಬುದೆನ್ನ ಸುಜ್ಞಾನದೃಷ್ಟಿಯು ಮುಗಿಸಿ
ಪರೆದು ಗಾಡಾಂಧದೊಳು ಮುಚ್ಚಿ ಮುಸುಗುವುದು ೬

ಉಳಿದ ಬಾಧೆಗಳನಂತಂಗಳುಂಟವನೆಲ್ಲ
ಪಳಿದು ಗುರುಸಿದ್ಧನೊಡನೈಕ್ಯಪದವಿಯನಿತ್ತು
ಅಳಬೇಡ ಮಗನೆ ನಾನಿಹೆನು ನಿನ್ನ ಭವವ
ಕಳೆವೆನೆಂದಭಯವನೆ ಕೊಡು ಮಹಾದೇವ ೭

೨೩೩

ರಾಗ : ಕುರಂಜ

ಪುರಹರ ನಿನಗಿನ್ನು ದಯಬಾರದೆ
ಪರಿಭವದೊಳು ಬಹು ಬಳಲ್ವೆನಲ್ಲ ॥ ಪಲ್ಲ

ಬರಬಾರದತಿ ಹೀನಯೋನಿಗಳೊಳು ಬಂದು
ಧರಿಸಬಾರದ ದೇಹಗಳನೆ ಕೊಟ್ಟು
ಸ್ಮರಿಸಲುಚಿತವಲ್ಲದಾಹಾರಗಳನುಂಡು
ತಿರುಗುತಿರ್ಪುದ ನೀನೆ ಕಂಡು ಕಂಡು ೧

ಅಳುವಬಾರದ ಗುರುದೈವದರ್ಥಕೆ ಸೋಲ್ತು
ಕೊಲಬಾರದಖಿಳ ಪ್ರಾಣಿಗಳ ಕೊಂದು
ಗಳಿಸಬಾರದ ಲೋಕದಪವಾದಗಳ ಹೊತ್ತು
ತೊಳಲುತಿರ್ಪುದ ನೀನೆ ಕಂಡು ಕಂಡು ೨

ಮಾಡಬಾರದ ಪಾಪಗಳ ಮೋಹಿಸಿ ಮಾಡಿ
ಕೂಡಬಾರದ ಕಾಮಿನಿಯರ ಕೂಡಿ
ಆಡಬಾರದ ಪರದೂಷಣೆಗಳನಾಡಿ
ಜೋಡಿಯಪ್ಪುದ ನೀನೆ ಕಂಡಂ ಕಂಡು ೩

ಎನಿತಿವನಘವೆಸಗಿದರುಯೆನ್ನನು ಬಿಟ್ಟೆ
ವನಿಗನ್ಯಗತಿಯಿಲ್ಲದುದರಿನ್ನಾನೆ
ಅನಿತನೋಡಿಸಿ ಮುಕ್ತಿಗೊಡಬೇಕೆಂಬುವ ನಿನ್ನ
ಮನದಾಶಯವ ನೀನೆ ಕಂಡು ಕಂಡು ೪

ಪರಿಪೂರ್ಣಗುರುಸಿದ್ಧನಾದನೀತನೀ
ಮೊರೆಯನಾಲಿಸಿ ನಿಷ್ಕರುಣದೊಳಿನ್ನು
ಮರೆದಿರೆ ಭಕ್ತವತ್ಸಲನೆಂಬ ಬಿರಿದೆನ್ನ
ಮರೆವುದೆಂಬುದ ನೀನೆ ಕಂಡು ಕಂಡು ೫

೨೩೪

ರಾಗ : ಆನಂದಭೈರವಿ

ಇನ್ನುಮೆನಿತೀ ಭವದಿ ಪರಿಣಾಮ ಪಡಲೆಂದು
ಎನ್ನನೀಕ್ಷಿಸೆಯಕಟ ಬಹು ನೊಂದು ಸಾಕೀಗ
ನಿನ್ನಂಘ್ರಿಗೆನ್ನ ಕಷ್ಟಗಳ ವಿಜ್ಞಾಪಿಸುವೆ ಕೇಳು ಶಿವ ಭೂ ಕೃಪಾಬ್ಧೆ ॥ ಪಲ್ಲ

ಮೂರು ಮಲಗಳ ಬಯಸಿ ಮೂರು ಭಾವದಿ ಲಯಿಸಿ
ಮೂರೀಷಣವ ನಚ್ಚಿ ಮೂರುದೆಶೆಯೊಳು ಮೆಚ್ಚಿ
ಮೂರು ಕರ್ಮದಿ ಕುದಿದು ಮೂರವಸ್ಥೆಯ ಹೊದೆದು ಮೂರು ಭಾಂಡಗಳನೊದೆದು
ಮೂರು ಕರಣದಿ ಪುಸಿದು ಮೂರು ಗುಣದೊಳು ನಸಿದು
ಮೂರು ತಾಪದಿ ಕುಂದಿ ಮೂರು ಕೃತ್ಯದಿ ಕಂದಿ
ಮೂರು ಲೋಕವ ತಿರುಗಿ ಮೂರು ತೋಷದಿ ಕೊರಗಿ ಗಾರಾದೆ ವಾಮದೇವ ೧

ನಾಲ್ಕು ಸಾಧನೆದೊರೆದು ನಾಲ್ಕು ಸೇವೆಯಂ ಜರೆದು
ನಾಲ್ಕಾಶ್ರಮವ ಸೇರಿ ನಾಲ್ಕರ್ಥಗಳ ಮೀರಿ
ನಾಲ್ಕು ಕರಣದಿ ಕೂಡಿ ನಾಲ್ಕು ವೃತ್ತಿಯ ಮೀರಿ ನಾಲ್ಕು ಪದವಿಯನೆ ಬೇಡಿ
ನಾಲ್ಕು ಕರ್ಮವ ಬಳಸಿ ನಾಲ್ಕು ಮೋಹಕೆಳಸಿ
ನಾಲ್ಕು ವರ್ಣದಿ ನಿಂದು ನಾಲ್ಕು ಯೋನಿಗೆ ಸಂದು
ನಾಲ್ಕು ವೇದವ ಬಿಟ್ಟು ನಾಲ್ಕು ಚಿತ್ಫಲಗೆಟ್ಟು ನಿಲ್ಕಿಲ್ಲದಳಲ್ವೆನಭವ ೨

ಐದು ಕೋಶಗಳ ಹೊಕ್ಕೈದುಯೋಗಗಳ ಮಿ
ಕ್ಕೈದುಲಕ್ಷಣಕವುದ್ಯೈದುವಿಷಯಗಳನವು
ದ್ಯೈದುಪಾತಕದಿ ನಡೆದ್ಯೈದುಬಾಳದೊಳು ಕೆಡೆದ್ಯೈದುಸೂತಕವ ಹಿಡಿದು
ಐದುಭೂತದಿ ತೊಳಲ್ದೈದುಕ್ಲೇಶದೊಳು ನೊಂ
ದೈದಗ್ನಿಗಳೊಳು ಬೆಂದ್ಯೈದುವ್ರತಗಳನೆ ಪರಿ
ದ್ಯೈದುವಾತದಿ ಹರಿದು ಸುಯಿದು ಸುರ್ರಿದೆನುವೇಶ ೩

ಆರುಭ್ರಮೆಗಳನೆ ತಳೆದಾರು ಹಸವಾದಿಯುಳಿ
ದಾರುವಿಕೃತಿಗಳನಡದಾರುವರ್ಗವನೆ ತೊಡ
ದಾರೈಸಿರಿಯನೆ ತೂದಾರುಕರ್ಮಗಳ ಪೊಳ್ದು ಆರಧ್ವದರಿವ ಕಳೆ
ದಾರುಶಾಸ್ತ್ರದೊಳೆ ಬೆಳೆದಾರುಸಂಗ್ರಹವ ಮೀ
ರ್ದಾರು ಶಕ್ತಿಯನೆ ಸಾರ್ದಾರು ಮತಗಳೊಳು ನಲಿ
ದಾರುದರ್ಶನಕೊಲಿದು ಪಾರಗಾಣೆನು ಶಂಕರ ೪

ಏಳುವ್ಯಸನವನು ಸೆಡೆದೇಳವಸ್ಥೆಯನೆ ತೊಡೆ
ದೇಳುಧಾತುಗಳನಾಂತೇಳಾವರಣದಿ ನಿಂ
ತೇಳುಸೋಪಾನ ಹೊರತೇಳು ಭೂಮಿಕೆಯ ಮರತೇಳುಜಲ್ಮದೊಳು ಬೆರೆತು
ಕೋಳುಪೋಪೆನ್ನ ಕಂಬನಿಯೊರಸಿ ನೀನೊಲಿದು
ಬೋಳೈಸಿ ಮುಕ್ತಿಗುಡದಿರಲಜಾಂಡಕ್ಷಯದಿ
ಪಾಳಪ್ಪಜಾಂಡದ ಪುನಃಸೃಷ್ಟಿ ಕಷ್ಟಕೀಡಪ್ಪೆ ಗುರುಸಿದ್ಧರೂಪ ೫

೨೩೫

ರಾಗ : ತೆಲುಗು ಕಾಂಬೋಧಿ

ಮಾನವಾ ಯಾತಕೀ ಪುಸಿಯ ಸಂಸಾರರಂಜನೆಗೆ
ಮನಸೋತು ಕೆಮ್ಮನೆ ಕೆಡುವೆಯಕಟ
ಮಾನವಾ ನೀತಪೇನಿದು ನಿನಗೆ ಅರ್ತಿಯಿಂದಾಚರಿಸಿ
ಸಾತಿಶಯ ಮುಕ್ತಿಪಡೆ ಕಂಡ್ಯ ಮಾನವ ॥ ಪಲ್ಲ

ಹುಟ್ಟುತಲಿ ನೀನೊಬ್ಬ ಹೋಗುತಲಿ ನೀನೊಬ್ಬ
ನಟ್ಟನಡುವೀ ನಾಲ್ಕುದಿವಸ ಮಾನವ
ಬಟ್ಟಬಯಲಿನ ವೃಥಾ ಮನೆವಾರ್ತೆಯನು ನೆಚ್ಚಿ
ಕೆಟ್ಟುಪೋಗಲಿಬ್ಯಾಡವೆಂತು ಮಾನವ ೧

ತೊಟ್ಟ ತನುವಿದ ನಿನ್ನನಗಲ್ಪುದೆನೆ ಕಡಮೆಯುದ
ನೆಷ್ಟಾರ್ಜಿಸಿವರೆ ಕಡೆಗೆ ಮಾನವ
ಬಿಟ್ಟೈದಬೇಕಿದನು ತಿಳಿವುತಾಳವು ಬೆರ
ಸುಟ್ಟು ನೀ ಶ್ರೇಯಸವ ಗಳಿಸು ಮಾನವ ೨

ತಂದೆತಾಯಿಗಳದಾರಗ್ರಜನು ಜರೆದ
ರೊಂದಿಗ್ಗೈದುವರೋರ್ವರುಂಟೆ ಮಾನವ
ಹಿಂದೆ ಭವಭವದೊಳಿಂತನಿತರನು ನೀಗಿ
ಬಂದಿರ್ಪೆ ಇದ ತಿಳಿದು ನೋಡು ಮಾನವ ೩

ಇಂದು ನಾಳೆಯೊ ಪೋಪ ತನುವನಾ
ಚಂದ್ರಾರ್ಕವೆಂದೆಣಿಸಿ ಮೈಮರೆಯಬೇಡ ಮಾನವ
ಮುಂದೆ ಭವವಿಲ್ಲೆನಿಪ ಸತ್ಸಂಗವನು ಬೇಗ
ಹೊಂದಿ ಮುಕ್ತಿಯ ಪಡೆದು ಸುಖಿಸು ಮಾನವ ೪

ನಳಿನದಳಜಲಬಿಂದು ಜೀವಿತಂ ಸಿರಿ ಕನಸು
ಸುಳಿಗಾಳಿ ಭೋಗವಾತ್ಮೀಯರ ಮಾನವ
ಗಳಬಳಿಪ ಸಂತೆಯಾಯುವು ಬಾಣಗತಿ ತನುವು
ಸೆಳೆಮಿಂಚು ಜಗವಿಂದ್ರಜಾಲಂ ಮಾನವ ೫

ಎಳಸುತಿಹ ಭವಭವಕೆ ಕಾಲನಸಿಗೊನೆಗೆ ತನು
ಗಳನನೇಕ ಸೂರೆಗೊಟ್ಟೆ ಮಾನವ
ತಿಳಿದಿನ್ನು ಗುರುಸಿದ್ಧನಡಿವಿಡಿದು ಕೈವಲ್ಯ
ದೊಲವೆತ್ತು ನಿತ್ಯಸುಖಿಯಾಗು ೬

೨೩೭

ರಾಗ : ದೇಶಾಕ್ಷಿ

ಐರಿಯುಭ್ರಮೆಯೊಳು ಬಿದ್ದು ಕೆಡಬೇಡವೆಲೆ ಮರುಳೆ
ಪರವಸ್ತುವನು ಮರೆದು ಲೌಕಿಕವ ನಂಬಿ ॥ ಪಲ್ಲ

ಶರಿರ ಸತಿ ಪುತ್ರರೆನ್ನವರೆಂದು ನೆಚ್ಚಿರುವೆ
ಮರಣಕಾಲದಿ ನಿನ್ನ ಹಿಂದೆ ಬಹರೆ
ಇರುವ ದ್ರವ್ಯವನೆಲ್ಲ ಕೊಟ್ಟು ಕಳುಹುವರೆ ಯಮ
ಪುರದ ಬಾಧೆಯ ಬಂದು ಬಿಡಿಸಿಕೊಂಬರೆ ೧

ನೀನುದಿಪದಕೆ ಪೊಗಲು ನೀನದಾರಿವರಾರು
ನೀನಿರುವ ಪರಿಯಂತವಗಲದಿಹರೆ
ನೀನು ಪುನರಪಿ ಜನಿಸಲಿವರು ನಿನಗಾಗುವರೆ
ಶ್ವಾನನ ಕನಸಿನಂಥ ಸಂಸಾರಸುಖವು ೨

ಕಾರಮಿಂಚಿನ ತೆರದಿ ತೋರಿ ನಿಮಿಷದಿ ತನುವು
ನೀರಗುಳ್ಳೆಯ ಮಾಯೆಯೆಂಬುವದು
ಪಾರಮಾರ್ಥಿಕ ಮರೆದು ಶರಿರಸುಖಕೆಳಸುವದು
ನೀರಿನೊಳು ಕೈಯಿಕ್ಕಿ ನೆಕ್ಕಿದಂತಹುದು ೩

ನೆರೆದ ಸಂತೆಯು ಪರಿಯು ಸಿರಿ ಪುಣ್ಯ ತೀರಿದರೆ
ಪರಿದು ಹೋಹುದು ಸುತ್ತ ಬಯಲು ಬಯಲೆ
ಸ್ಥಿರಮೋಕ್ಷವನು ಪಡೆಯದಿಹ ಭೋಗಕಾಶಿಪ್ಪುದು
ನೆರೆ ತುಷ್ಟದಾಸೆಗೆಂಜಲ ತಿಂದ ಪರಿಯು ೪

ಬಿಂದುಸುಖಕಾಗಿನಿತು ದುಃಖವಸಿಗೊನೆಯ ಮಧು
ಬಿಂದು ಲೇಹದೊಳೆನುತ ಗುರುಸಿದ್ಧನ
ಹೊಂದು ಲೌಕಿಕವನುಳಿದಧ್ಯಾತ್ಮದನುಪನರಿ
ದೊಂದೆಡರುವೆರಸದಾನಂದದೊಳಗಿರೆಲೆಲೆ ೫

೨೩೭

ನಂಬಬೇಡವೊ ಮನುಜ ನಂಬಬೇಡವೊ
ನಂಬಿ ಕೆಡುವರುಂಟೆ ಮಣ್ಣ
ಬೊಂಬೆಯಂತೆ ತನುವನಿದನು ॥ ಪಲ್ಲ

ಮಾಯದಿಂದ ಜನಿಸಿ ಬೆಳೆದು
ಕಾಯವೆನಿಸಿ ಸತ್ತು ಕಡೆಗೆ
ನಾಯಿನರಿಯು ತಿಂದು ಕೆಡುವ
ಹೇಯವಾದ ಒಡಲನಿದನು ೧

ನೂರು ಬಾಳ್ವೆನೆಂದು ತನ್ನ
ಸೇರಿ ನಲಿವರಾಸೆಯನ್ನ
ನೀರ ಕಲಸಿ ನಿಮಿಷದಲ್ಲಿ
ತೋರಿಪಳಿವ ದೇಹವಿದನು ೨

ಧರೆಯು ಭೋಗಕೆಳಸಿ ಪರವ
ಮರೆದು ತನ್ನ ಮೆಚ್ಚಿದವರ
ನೆರಡು ವಿಧದಿ ಕೆಡಿಸಿ ಯಮನ
ಪುರಕೆ ಕೆಡಹುವಂಗವಿದನು ೩

ಸತ್ತು ಹುಟ್ಟಿ ತಾನು ತನ್ನ
ನಿತ್ಯವೆಂದು ಹೊಂದಿದ್ದವರ
ಕತ್ತೆಯಂತೆ ಇಹಕೆ ಪರಕೆ
ಸುತ್ತಿ ಸುಳಿಪ ಗಾತ್ರವಿದನು ೪

ಪಡೆಯದುದುಡಿಯುದವಮಲಸುಖವ
ಪಡೆಯು ಶ್ರೀ ಗುರುಸಿದ್ಧನಿಂದ
ಕೊಡದ ತೆರದೊಳೊಡೆದು ಧರೆಯೊ
ಳಡಗಿ ಕೆಡುವ ಜಡತನುವಿದನು ೫

೨೩೮

ರಾಗ : ರೇಗುಪ್ತಿ । ಮೋಹನ

ಸಿರಿಯು ಸತಿ ಸುತ ಹಿತರು ನಿಜವೆಂದು ನೆರೆ ನಂಬಿ
ಬರಿದೆ ಮೈಮರೆದು ಕೆಡದಿರು ಮಂದಮನುಜ ॥ ಪಲ್ಲ

ಎಣ್ಣೆಯಿರುವನಕ ದೀವಿಗೆಯುರಿವವೊಲು ಪೂರ್ವ
ಪುಣ್ಯವಿಹ ಪರಿಯಂತ ಸಿರಿಯಿರ್ಪುದು
ಪುಣ್ಯ ತೀರಿದ ಮರುದಿನಕೆ ನಿನ್ನಯ ಸಿರಿಯು
ಎಣ್ಣೆ ಮುಗಿದಿಹ ದೀಪದೊಲು ತಣ್ಣಗಹುದು ೧

ಒಂದು ಮರದೊಳಗಖಿಳ ಪಕ್ಷಿಗಳು ಸಂಜೆಯೊಳ
ಗೊಂದಿ ಬೆಳಗಿನೊಳಗಲಿ ಹೋಗುವಂತೆ
ತಂದೆ ತಾಯಣ್ಣ ತಮ್ಮರು ಸತಿ ಸುತರು ಕಾಲ
ಬಂದ ನಿಮಿಷಕೆ ನಿನಗೆ ಹೇಳದೈದುವರು ೨

ವ್ರಣಕೆ ಮುಸುರುವ ನೊಣಗಳಂತೆ ನಿನ್ನನು ಜನರು
ಹಣವಿರುವ ಪರಿಯಂತ ಓಲೈಪರು
ಹಣವು ನಿನ್ನೊಳು ಮುಗಿದ ಘಳಿಗೆಯೊಳಗಾ ಜನರೆ
ಹೆಣವ ಕಂಡಂತೆ ದೂರಕೆ ಹೋಗುತಿಹರು ೩

ನಿನ್ನಂಗಕಿಂದ ನಿನಗಿನ್ನು ಹಿತವಾವುದೀ
ನಿನ್ನಂಗವೇ ನಿನ್ನನಗಲುದೆನಲು
ಅನ್ಯವ ಹರಸಿಯು ಸತಿ ಸುತ ಹಿತರು ನಿಜವದೆಂ
ತಿನ್ನಿದನು ತಿಳಿದು ಮೋಹಿಸದಿರೆಲೆ ಮರುಳೆ ೪

ಸುರಚಾಪ ಗಂಧರ್ವಪುರಗಳಿಂ ಪುಸಿಯಾದ
ಸಿರಿ ಮುಖ್ಯ ಪರಿಕರದಿ ಮೈಮರೆಯದೆ
ಗುರುಸಿದ್ಧನಂಘ್ರಿ ಪಂಕಜವ ಮನದೊಳು ಭಜಿಸಿ
ಪರಮುಕ್ತಿಯನು ಪಡೆದು ಸುಖಿಯಾಗು ಕಂಡ್ಯ ೫

೨೫೯

ರಾಗ : ಕಲ್ಯಾಣಿ

ಧರೆಯೊಳೀ ಹೆಣ್ಣ ರಾಕ್ಷಸಿಯಲ್ಲದಿನ್ನುಂಟೆ
ನರರು ಬೇರಿಹುದೆಂದು ಪೇಳುವದು ಪುಸಿಯು ॥ ಪಲ್ಲ

ನೋಡಿದವರ ಮನವ ಮಾತಾಡಿದರ ಧನವನೊಡ
ಗೂಡಿದರ ಪ್ರಾಣಗಳ ಸೆಳೆದುಕೊಳ್ಳುವದು
ಮಾಡಬಾರದನೆ ಮಾಡಿಸಿ ಕಡೆಗೆ ಯಮಭಟರ
ತಾಡನೆಗೆ ಹಿಡಿಕೊಟ್ಟು ಕೊಲ್ಲಿಪುದರಿಂದ ೧

ತಂದೆತಾಯಿಗಳನನುಜರಗ್ರಜರ ಸುತಹಿತರ
ಬಂಧುಬಳಗವನೆಲ್ಲವಗಲಿಸುತ್ತೊಡನೆ
ಹಿಂದೆ ಕರೆದರೆ ಬರ್ಪ ನಾಯಂತೆ ಮಾಡಿಕೊಂ
ಡೊಂದು ಕಾಲದಿ ತನ್ನ ನುಂಗುವದರಿಂದ ೨

ಮನವ ಕೆಡಿಸುವದಿರ್ದ ಧನವ ಕೆಡಿಸುವದವನ
ಘನವ ಕೆಡಿಸುವದು ಮನುಜರೊಳು
ಹಿರಿಯ ಕೋಡಗನಂತೆ ಕುಣಿಕುಣಿಸಿ
ಬಿನುಗರೊಳು ಬಿನುಗನನು ಮಾಡುವದದರಿಂದ ೩

ದುರಿತಕ್ಕೆ ತವರು ದುರ್ಮಾರ್ಗದಾಲಯ ನರರ
ಶರಿರಕ್ಕೆ ಮಾರಿ ಮುಕ್ತಿಗೆ ಮೃತ್ಯುಯೆನಿಸಿ
ಸರಸದೊಳೆ ವಿಷಯವಿಷವೆರದು ಲೋಕವ ಕೊಂದು
ನರಕಕೂಪದಿ ಹಾಯಿಕಿ ಮುಚ್ಚುವದರಿಂದ ೪

ಅಹಿ ವೃಶ್ಚಿಕಾಗ್ನಿ ಹುಲಿ ಕರಡಿ ಗ್ರಹ ಭೂತಗಳು
ಬಹುಕೆಟ್ಟವೆಂದು ಪೇಳ್ವರು ಮೂಢಜನರು
ಮಹಿಯೊಳಿವು ನರರನಿಲ್ಲಿಯೆ ಕಚ್ಚಿ ಬಿಡುತಿಹವಿ
ದಿಹಪರಗಳೆರಡರೊಳು ಕಚ್ಚುವವರಿಂದ ೫

ಜಪದ ಕಣ್ಮುಚ್ಚಿ ವ್ರತಶೀಲಗಳ ಬಾಯ್ಬಡಿದು
ತಪಕೆ ಮಸಿಯನು ಹಚ್ಚಿ ತತ್ವಗಳ ತುಳಿದು
ಗುಪಿತಯೋಗಕ್ಕೆ ಕ್ಯಂಕವಾಗಿ ಯತಿಜನರ
ನಪಹಾಸ್ಯಕೆಡೆಮಾಡಿ ಕೆಡಿಸುವವರಿಂದ ೬

ತನ್ನ ಸ್ಮೃತಿ ನೋಟ ಕೂಟಗಳಮರಗಣ ರುದ್ರ
ರುನ್ನತದ ಪದವಿಗಳ ಕೆಡಿಪವೆಂದರಿದು
ಇನ್ನಿದನು ಹಳೆಯ ಕೆರವೆಂದು ಕಾಂಬುವ ಧೈರ್ಯ
ವನ್ನು ಗುರುಸಿದ್ಧನಿಂ ಪಡೆಯದಧಮರಿಗೆ ೭

### ೨೪೦

ರಾಗ : ಕೇದಾರಗೌಳ

ಮನವೆಂಬ ಮರ್ಕಟ ತಡೆಯಲಾರೆನು ದೇವ
ಎನಿತಿದರ ಚಪಲ ಚೇಷ್ಟೆಗಳ ವರ್ಣಿಸಲಿ ॥ ಪಲ್ಲ

ಧರೆಯನೆಲ್ಲವನೊಂದೆ ಕೊಡೆಯಿಂದಲಾಳುವದು
ಗಿರಿಯ ಗುಹೆಯೊಳು ಕುಳಿತು ತಪವ ಮಾಡುವದು
ತರುಣಿಯರ ಕಂಕುಳೊಳು ಕೈಯಿಕ್ಕಿ ನಗಿಸುವದು
ಕರಿಯ ಮೇಲಂಬಾರಿಯಲ್ಲಿ ಮೆರೆಯುವದು ೧

ಅನುಭವದಿ ಜೀವೇಶರೈಕ್ಯವನು ತಿಳಿಯುವದು
ಧನವ ದಶಲಕ್ಷವನು ಗಳಿಸಿ ಹೂಳುವದು
ಮನೆಯ ಮಕ್ಕಳ ಬಿಟ್ಟು ವಿರತಿಯಿಂ ಪೊರಡುವದು
ಮನುಜೋದ್ಭವಾಂಡವೊಂದೊಂದನೆಣಿಸುವದು ೨

ಅರಿಗಳ ನುಡಿದು ಹೆಡೆಮುಡಿಗಟ್ಟಿ ಹೊಸಗುವದು
ಸುರಲೋಕಕೈದಿ ರಂಭೆಯೊಳು ರಮಿಸುವದು
ಬರಿದೆ ನೀನ್ಯಾಕಿನಿತು ಚೇಷ್ಟಿಸುವೆಯೆನೆ ಭುವಿಯೊ
ಳಿರುವ ಕೋತಿಗಳಾರ ಶಿಷ್ಯರೆಂಬುವದು ೩

ಹಿಡಿವೆನೆನೆ ಮೊದಲೆ ಮುಮ್ಮಾರ ಹಾರಾಟಿಹುದು
ಪೊಡೆವೆನೆನಲಾ ನುಡಿಯುದಾರದೆಂಬುವದು
ತುಡುಗು ದನವಿನ ಕೊರಳ ಗುದ್ದೆಯುಂದದೊಳೆನ್ನ
ನೆಡವಿಡದೆ ಮೂಜಗದೊಳೆಳದಾಡುತಿಹುದು ೪

ಧರೆಯು ನಿಕ್ಷೇಪವನು ಕದ್ದೆಲ್ಲಿ ನೋಡಿಪರು
ಧರೆಯುದಲ್ಲಲ್ಲೆ ಕಳನ ಕಾಡುವಂತೆ
ಗುರುಸಿದ್ಧಯೆನ್ನ ಮನವಾವಾವ ವಿಷಯುಗಳೊ
ಳೆರಗಲಲ್ಲಲ್ಲೆ ನೀಂ ಕಾಡಿಸದೆ ಬಿಡಿಸೈ ೫

೨೪೧

ರಾಗ : ರೇಗುಪ್ತಿ

ಯಾಕೆ ಧನವಿದ್ದು ಲೋಭವ ಮಾಳ್ಪೆ ಎಲೆ ಮನುಜ
ಸಾಕು ನಿನಗಿದರಿಂದಲೇನು ಫಲವಹುದು ॥ ಪಲ್ಲ

ಬರಿಲೋಭದಿಂದೆ ನಿನ್ನಂಗಕ್ಕೆ ಸುಖವಿಲ್ಲ
ನರರು ನಿನ್ನನು ನೀಚನೆನುತಿರ್ಪರು
ಪರಲೋಕದಲ್ಲಿ ಯುಮಭಟರ ಕೊಲೆಗೀಡಪ್ಪೆ
ಮರಳಿ ನೀ ನುಡಿಸೆ ದಾರಿದ್ರ್ಯವದು ಬಿಡದು ೧

ಧನಕೆ ಧರ್ಮಾಗ್ನಿ ನೃಪ ತಸ್ಕರರು ದಾಯಾದ್ಯ
ರೆನಿಪರೀ ನಾಲ್ವರುಗಳೊಳಗೆ ಧರ್ಮ
ವೆನಿಪಗ್ರಜನಿಗೆ ಮಾನವ ಮಾಡದಿರ
ಲನುಜರೆನಿಪಗ್ನಿ ನೃಪ ತಸ್ಕರರು ಕೋಪಿಸುವರು ೨

ಸಾರೆ ಸಾಧ್ವೀ ಸ್ತನಂ ದ್ವೀಪಿನಕಪಂಚಿತ್ತಿ ರಣ
ಶೂರ ಕರವಾಳಮತಿಲೋಭಿ ವಿತ್ತಂ
ಮಾರಣಾಂತಕ್ಕೆ ಪರಾಧೀನವಾಗುವದೆಂದು
ಸಾರುತಿಹ ನೀತಿಗಾದರು ನಾಚಿಕೊಳದೆ ೩

ವಸುಧೆ ಭೋಗ ತ್ಯಾಗವರಿತು ನಿಕ್ಷೇಪಿಪವ
ನ ಶುದ್ಧತನುಪೋಷನ ಮೃತ್ಯುದೇವಿ
ಶಿಶುವ ಮುಂಡಾಡಿ ಮೋಹಿಪ ಪತಿಯು ನೋಡಿ ನಗು
ವ ಸತಿಯುಂದದೊಳು ಕೈಕೈದು ನಗುತಿಹುದು ೪

ನೀನ್ನೈದುವಾಗ ಸಿರಿ ಮನೆಯೊಳಗೆ ನಿಲ್ಲುಂ ಶ್ಮ
ಶಾನದೊಲು ಮಿತ್ರ ಬಂಧುಗಳಗಲ್ವರು
ನೀನು ಮಾಡಿದ ಪಾಪಪುಣ್ಯಮೊಡಬರ್ಪುದಿದ
ನೀನರಿದು ಗುರುಸಿದ್ಧನೊಲುಮೆವಡೆಯುವಲೆ ೫

## ಶರಣಸ್ತುತಿಯ ಸ್ವರವಚನ

೨೪೨

ಮಾಡುವೆ ಶರಣ್ಮಾಡುವೆ ನಮ್ಮ
ಕೂಡಲಸಂಗನ ಶರಣರ ಪಾದಕ್ಕೆ ॥ ಪಲ್ಲ

ಮೇದರಕೇತಯ್ಯ ಮೆರೆಮಿಂಡದೇವಯ್ಯ
ಆಯ್ದಕ್ಕಿಮಾರಯ್ಯ ಅಜಗಣ್ಣಗೆ
ಮೈದುನ ರಾಮಯ್ಯ ಮಡಿವಾಳ ಮಲುಹಣ
ಸಾಧಿಸಿ ಮರುಳುಶಂಕರ ಸಿದ್ಧರಾಮಗೆ ೧

ಸಂಬ್ಯಣ್ಣ ನಾಗಯ್ಯ ಬೆಂಬಿಡದೆ ಚೇರಮ
ಕಂಬಳಿ ಮರುಳರು ಕಕ್ಕಯ್ಯಗೆ
ಉಂಬರೆ ಪ್ರಸಾದದಲಿ ಉದ್ಭವಿಸಿದಾತಗೆ
ಅಂಬಿಗರ ಚೌಡಯ್ಯ ಘನಘಟ್ಟಿವಾಳಗೆ ೨

ಸತ್ಯಕ್ಕ ಪಿಟ್ಟವ್ವೆ ಶ್ರೀ ನೀಲಲೋಚನೆ
ಮುಕ್ತಾಯಿ ಚಂಗಳೆ ಗೊಗ್ಗವ್ವೆಗೆ
ಸತ್ತ ಗಂಡನ ಪಡೆದು ಹೆತ್ತ ಮಗನ ಕೊಂದು
ಬತ್ತಲೆ ಕದಳಿಯ ಪೊಕ್ಕ ಮಹಾದೇವಿಗೆ ೩

ಮೊಲ್ಲೆಬೊಮ್ಮೈಗಳು ಮಧುವರಸ ಬಾಚರಸ
ಬಿಲ್ಲ ಬಿಂಕದ ಮಾರೈಗೆ ಗೊಲ್ಲಾಳ
ಬಲ್ಲಾಳ ಕನ್ನಪ್ಪ ಕಲಿಕಾಮ
ನುಲಿಯ ಚಂದಯ್ಯ ಮೋಳಿಗೆಯ ಮಾರಯ್ಯಗೆ ೪

ಕರವೀ ಏಳ್ನೂರಯೆಪ್ಪತ್ತು ಗಣಂಗಳು
ಅರವತ್ತುಮೂರು ಪುರಾತನರು
ಪರಿಪರಿ ಶ್ರೀಗಂಧ ಪುಷ್ಪ ಧೂಪ ದೀಪದಿಂದ
ಪರಿಪೂರ್ಣದಿಂದಲಿ ಪ್ರಭುವಿನ ಪಾದಕ್ಕೆ ॥ ಮಾಡುವೆ ೫

# ಬಸವ ಪವಾಡದ ಸ್ವರವಚನ

೨೪೩

ಪಾಹಿಮಾಂ ಶರಣು ಬಸವ ಪಾಹಿಮಾಂ ಶರಣು ಬಸವ
ಪಾಹಿಮಾಂ ಶರಣು ಬಸವ ಪಾಹಿಮಾಂ ॥ ಪಲ್ಲ

ಶರಣು ಬಸವ ವೃಷಾಧಿಪನೆ ಶರಣುಬಸವ ನಂದಿನಾಥ
ಶರಣು ಬಸವರಾಜಯಿಾಶ ಬಸವ ಪಾಹಿಮಾಂ ೧

ವಸುಧೆಯೊಳಗೆ ಬಸವನಾಮ ಹರುಷದಿಂದ ನೆನೆದವರಿಗೆ
ದೋಷವೆಲ್ಲ ಕಳಿದು ವಿಶೇಷವಾಹುದು ೨

ಆದಿಯಲ್ಲಿ ನಂದಿನಾಮ ಅನಾದಿಯಲ್ಲಿ ವೃಷಭನಾಮ
ಮೇದಿನಿ ಕಲ್ಯಾಣದಲ್ಲಿ ಬಸವನಾಮದಿ ೩

ಓದಿ ಲಿಪಿಯ ಧನವ ತೋರಿ ಬಿಜ್ಜಳಾಂಕರಾಯನಿಗೆ
ಪ್ರಧಾನಿಯಾಗಿ ಮಹಿಮೆ ತೋರಿ ಬಸವ ಮೆರೆದನು ೪

ನಿತ್ಯ ಲಕ್ಷತೊಂಬತ್ತಾರುಸಾವಿರಕ್ಕೆ ನೀಡಿ ಬಸವ
ಭೃತ್ಯನಾಗಿ ಜಂಗಮಕ್ಕೆ ಭಕ್ತಿ ಮಾಡಿದ ೫

ದಂಡನಾಯಕನು ಬಸವ ಪಂಡಿತೋತ್ತಮನು ಬಸವ
ಮಿಂಡಜಂಗಮ್ಮೈಗಳಿಗೆ ಬೇಡಿದಿಷ್ಟವ ೬

ಮಡದಿ ನೀಲಲೋಚನೆಯ ಉಟ್ಟ ಸೀರೆ ಕೊಟ್ಟು ಬಸವ
ಒಡೆಯರುಗಳ ಲಿಂಗದೆಡೆಗೆ ತಂದು ನೀಡುವ ೭

ಅಕ್ಕ ನಾಗಲಾಂಬಿಕೆಯ ಗರ್ಭದಲ್ಲಿ ಚಿಕ್ಕ ಚನ್ನಬಸವ
ಸೊಕ್ಕಿ ನಿಂದ್ಯ ನುಡಿದ ಜೈನರನ್ನು ಮುರಿದನು ೮

ಭಿತ್ತಿ ಮೇಲೆ ಬರದ ಹೆಣ್ಣು ಚಿತ್ರರೂಪು ಬೊಂಬೆಗಳಿಗೆ
ಮತ್ತೆ ಪ್ರಾಣಕಳೆಯ ತುಂಬಿ ಕರ್ತು ಬಸವನು ೯

ಚಿತ್ರರೂಪು ಜಂಗಮಕ್ಕೆ ಮತ್ತೆ ಪ್ರಾಣಕಳೆಯ ತುಂಬಿ
ಅರ್ತಿಯಿಂದ ಬಸವ ಮನೆಗೆ ಕರೆದು ತಂದನು ೧೦

ಬತ್ತರಾಶಿಜೋಳವನ್ನು ಮುತ್ತು ಮಾಡಿ ಜಂಗಮಕ್ಕೆ
ಭಕ್ತಿಯಿಂದ ಕೊಡುವ ಬಸವ ನಿತ್ಯನೇಮದಿ ೧೧

ಕಾಶಿಯಲ್ಲಿ ಭಕ್ತಿವೆರಸಿ ವಾಸವಾದ ಜಂಗಮಕ್ಕೆ
ಪೋಸ ಮಾಡಿ ಹಸಿವೆಯೊಳಗೆ ತಂದ ಬಸವನು ೧೨

ವಿಶ್ವರೂಪ ತಾಳಿ ಬಂದ ವೇಷಧಾರಿ ಜಂಗಮನು
ಲೇಸಿನಿಂದ ನೋಡಿ ಬಸವ ಶರಣುಮಾಡಿದ ೧೩

ಹತ್ತುಯೆಂಟು ಸಾವಿರದ ಜಂಗಮಕ್ಕೆ ಮದುವೆಮಾಡಿ
ಭಕ್ತಿಗೃಹದೊಳಿಟ್ಟು ಬಸವ ಗೊತ್ತುಮಾಡಿದ ೧೪

ವಸ್ತ್ರವಾಹನಂಗಳಿಂದ ಛತ್ರಿ ಚಾಮರಂಗಳಿಂದ
ನಿತ್ಯಜಂಗಮವನೆಲ್ಲ ಮೆರೆಸುತಿರ್ದನು ೧೫

ಇದ್ದ ಬಸವ ಇಲ್ಲವೆಂದು ನೀಲಲೋಚನೆಯು ಪೇಳೆ
ನಿದ್ರೆಯೊಳಗೆ ಬಸವ ತಾನು ಹರನ ನೆನೆದನು ೧೬

ಮರಳಿ ಬಂದು ಜಂಗಮ್ಮೈಯು ಬಸವಯೆಂದು ಕರೆಯಲಾಗ
ಹರನ ನೆನೆದು ಬಸವನೆದ್ದು ಶರಣು ಮಾಡಿದ ೧೭

ಜನನಮರಣರಹಿತ ಬಸವಹರನ ಪ್ರಾಣ ಜಂಗಮದ ಚರಣದಲ್ಲಿ
ಮನವ ಬೆರೆದ ಬಸವ ಪಾಹಿಮಾಂ ೧೮

ಶೀಲಭಕ್ತನಾಗಮ್ಮೈಯು ಹಸ್ತದಿಂದ
ಹಾಲ ಸುರಿಸೆ ಜೈನ ಬಿಜ್ಜಳಾಂಕನಿಗೆ ಮಹಿಮೆ ತೋರಿದ ೧೯

ಸಾವು ಇಲ್ಲದಾಗೆ ಬಸವ ಒಂದು ವರುಷ ಆಜ್ಞೆಮಾಡಿ ಸರ್ವ
ಜೀವ ದಯಾಸಾಂದ್ರದೇವ ಬಸವನು ೨೦

ಅಂಗಡಿಯೊಳಗೆಯಿರ್ದ ಗಾರಿಗೆಯು ಬಿಜ್ಜಳಾಂಕ ತಂದು
ಜಂಗಮ ಪ್ರಸಾದವೆಂದು ಕೊಡಲು ಬಸವಗೆ ೨೧

ಕಂಗಳಿಂದ ನೋಡಿ ಕೈಯ ಮುಟ್ಟಿ ಕನಕ ಮಾಡಿ
ಸಂಗನ ಬಸವಣ್ಣನ ವರ ಹಸ್ತ ಪರುಷದಿ ೨೨

ಹಾಲು ಮಾರೊ ಗೊಲ್ಲತಿಯು ಕಾಲು ಜಾರಿ ಬೀಳುವಾಗ
ಪಾಲಿಸೆನ್ನ ತಂದೆ ಬಸವಯೆಂದು ನೆನೆಯಲು ೨೩

ಲೀಲೆಯಿಂದ ಬಸವನೆದ್ದು ಓಲಗದೊಳು ಕೈಯನೆತ್ತಿ
ಬಾಲೆ ಹಸ್ತ ಶಿರದ ಕೊಡನ ಸಹಿತ ಹಿಡಿದನು ೨೪

೨೪

ಮಡದಿ ನೀಲಲೋಚನೆಯು ಉಟ್ಟ ಸೀರೆ ಕೊಟ್ಟು ಬಸವ
ಒಡೆಯರುಗಳ ಲಿಂಗದೆಡೆಯ ತಂದು ನೀಡುವ ೨೫

ನೀಲಲೋಚನಮ್ಮನವರು ಮೇಲುಸೀರೆನುಟ್ಟು ಬರಲು
ಶೂಲಧರನು ಬೇಡಲಿತ್ತ ಬಸವ ಪಾಹಿಮಾಂ ೨೬

ನಾಮರೂಪು ಕ್ರಿಯ ಬಸವ ಸಾಮಗಾನಲೋಲ ಬಸವ
ನಾಮಮಹಿಮೆ ಪೇಳಲಳವೆ ಆರಿಗಾದರು ೨೭

ಪ್ರೇಮದಿಂದ ಪೇಳಿದನು ಪಾಲುಕುರಿಕೆ ಸೋಮನಾಥ
ಸ್ವಾಮಿ ಬಸವಪೌರಾಣ ಗದ್ಯ ಪದ್ಯದಿ ೨೮

ಸತ್ತು ಚಿತ್ತಾನಂದ ಬಸವ ಮರ್ತ್ಯಲೋಕದೊಳಗೆ ನಿಂದು
ಭಕ್ತನಾಗಿ ಗುರುವು ಲಿಂಗಜಂಗಮವವನು ೨೯

ಗೊತ್ತುಮಾಡಿ ಭಕ್ತರಿಗೆ ಕರ್ತು ಕೂಡಲ ಸಂಗಮೇಶ
ನಾತ್ಮದಲ್ಲಿ ಲಯವಾದ ಕರ್ತು ಬಸವನು ೩೦

೨೪೪

ಪಾಹಿಮಾಂ ಶರಣು ಬಸವ ಪಾಹಿಮಾಂ ಶರಣು ಬಸವ
ಪಾಹಿಮಾಂ ಶರಣು ಬಸವ ಬಸವ ಪಾಹಿಮಾಂ ॥ ಪಲ್ಲ

ಬಸವ ಶಿವನೆ ಶಿವನೆ ಬಸವ ವೃಷಭನಾದ ಉಕ್ಷಿಯು ನೀನೆ
ವಸುಧೆಜನರ ಸಲಹಿದಂಥ ಬಸವ ಪಾಹಿಮಾಂ ೧

ಆದಿಯಿಂದಲಿತ್ತ್ರಯುಗದಿ ಆದಿಮೂಲಮೂರ್ತಿ ನೀನೆ
ಮೇದಿನಿ ಉದ್ಧರಿಸಿದಂಥ ಬಸವ ಪಾಹಿಮಾಂ ೨

ಸಾಂಬಶಿವನ ಮತವ ಹಿಡಿದು ಕುಂಭಿನಿಯೊಳ್ಬಂದು ಮಾದ
ಲಾಂಬಿಕೆಯೊಳು ಜನಿಸಿದಂಥ ಬಸವ ಪಾಹಿಮಾಂ ೩

ಸಾಲೆಯೊಳಗೆ ಬರೆವುತಿರಲು ಬಾಲನೊಬ್ಬ ಭಾವಿಯೊಳಗೆ
ಬೀಳಲವಗೆ ಪ್ರಾಣವಿತ್ತ ಬಸವ ಪಾಹಿಮಾಂ ೪

ಸತ್ತ ಆಕಳನ್ನೆ ಹಿಡಿದು ಎತ್ತಿ ಹಾಲ ಕರೆದು ತಂದು
ಪಿತ್ರಪ್ರಯೋಜನಕಿತ್ತ ಬಸವ ಪಾಹಿಮಾಂ ೫

ಕಲ್ಯಾಣಕ್ಕೆ ಬಂದು ಬಿದ್ದ ಕಲ್ಲಲಿಪಿಯನೋದಿ ತಥ್ಯ
ದಲ್ಲಿ ದ್ರವ್ಯ ತೋರಿದಂಥ ಬಸವ ಪಾಹಿಮಾಂ ೬

ಸೃಷ್ಟಿ ಓಲಗದಲ್ಲಿ ಶ್ರೇಷ್ಠ ಅಕ್ಕನಾಗಮ್ಮನ
ಹೊಟ್ಟೆ ಶಿಶುವ ನುಡಿಸಿದಂಥ ಬಸವ ಪಾಹಿಮಾಂ ೭

ಧರಣಿಪತಿಯ ಸಭೆಯೊಳಗೆ ಶರಣ ನಾಗಯ್ಯ ಬರಲು
ಬೆರಳಿನಲ್ಲಿ ಹಾಲ ಕರೆದ ಬಸವ ಪಾಹಿಮಾಂ ೮

ಮಂಗಳವಾಡದಲ್ಲಿ ಮೆರೆದ ತುಂಗ ನಾಗಮಲ್ಲಶೆಟ್ಟಿಮನೆಯ
ಜಂಗಮಯ್ಯ ಬೇಡಲಿತ್ತ ಬಸವ ಪಾಹಿಮಾಂ ೯

ಮಾಣಿಕವ ಸೋತ ಚರನ ಮಾನ ಕೊಂಬುತಿರಲು ತೊಗರಿ
ಮಾಣಿಕವ ಮಾಡಿಕೊಟ್ಟ ಬಸವ ಪಾಹಿಮಾಂ ೧೦

ಕೊರೆದು ಕಟ್ಟಿಗೆಬೊಂಬೆ ಮಾಡಿ ಚರನು ಸತ್ತನೆಂದು ಪೇಳೆ
ಭರದಿ ಅದಕೆ ಪ್ರಾಣವಿತ್ತ ಬಸವ ಪಾಹಿಮಾಂ ೧೦

ಊರವೊಳಗೆ ಗೊಲ್ಲವನಿತೆ ಮಾರುತಿರಲು ಹಾಲು ಮೊಸರ
ಜಾರಿ ಬಸವಯೆನಲು ಕಾಯ್ದ ಬಸವ ಪಾಹಿಮಾಂ ೧೨

ನಿಂಬೆಹಣ್ಣ ಕಟ್ಟಿಕೊಂಡು ರಂಭೆ ಸಭೆಗೆ ಬರಲು ನೃಪಗೆ
ಬಿಂಬಲಿಂಗ ತೋರಿದಂಥ ಬಸವ ಪಾಹಿಮಾಂ ೧೩

ನೀಲಲೋಚನಮ್ಮನವರು ಮೇಲು ಸೀರೆನುಟ್ಟು ಬರಲು
ಶೂಲಧರನು ಬೇಡಲಿತ್ತ ಬಸವ ಪಾಹಿಮಾಂ ೧೪

ಖುಲ್ಲ ಜೈನರೆಲ್ಲ ಕೂಡಿ ಹುಲ್ಲುಜಂಗಮವನೆ ಮಾಡಿ
ನಿಲ್ಲದದಕೆ ಪ್ರಾಣವಿತ್ತ ಬಸವ ಪಾಹಿಮಾಂ ೧೫

ಗಣಿತವಿಲ್ಲದಂಥ ಪ್ರಮಥಗಣಕೆ ಶ್ರೇಷ್ಠ ಬಸವರಾಜ
ಪ್ರಣಮರೂಪ ಮಹಿಮಪುರುಷ ಬಸವ ಪಾಹಿಮಾಂ ೧೬

ಧರಣಿ ಐನೆಲೆವಾಸ ಗುರುವು ಚನ್ನವೀರ ದೇವ
ಕರಪುರಿ ಇಷ್ಟಲಿಂಗ ಬಸವ ಪಾಹಿಮಾಂ ೨೧

## ಚನ್ನಬಸವಣ್ಣನ ಜೋಗುಳಪದ

೨೪೫

ಜೋ ಎಂದು ಶರಣಸತಿಯರೆಲ್ಲ ಕೂಡಿ
ಜೋ ಎಂದು ಪಾಡಿದರು ನಲಿನಲಿದಾಡಿ
ತಾಯಿ ನಾಗಮ್ಮನ ಮಗನ ಕೊಂಡಾಡಿ
ಜೋ ಎಂದು ಚನ್ನಬಸವನನು ಕೊಂಡಾಡಿ ಜೋ ಜೋ ೧

ಶರಣ ಕಕ್ಕಯ್ಯಗಳ ವರಪ್ರಸಾದವನು
ಎರಡಾರು ವರುಷದಿಂ ಕಾಯ್ದುಕೊಂಡಿಹನು
ದೊರೆ ತಾನು ಮನದೊಳಗೆ ಹರುಷ ತಾಳಿದನು
ಭರದಿಂದ ಕೈಕೊಂಡು ಬಂದ ಬಸವನು ಜೋ ಜೋ ೨

ಮಿಕ್ಕಪ್ರಸಾದವನು ಬಸವಣ್ಣ ತಂದು
ಅಕ್ಕನಾಗಮ್ಮನಿಗೆ ಕೊಟ್ಟನು ಬಂದು
ಗಕ್ಕನೆ ಕಾಣುತ ಶಿವಶಿವಯೆಂದು
ಮುಕ್ಕಣ್ಣ ಗತಿಯೆಂದು ಸಲಿಸಿದಳೆಂದು ಜೋ ಜೋ ೩

ಪ್ರಸಾದ ಸಲಿಸಲು ಅಕ್ಕನಾಗಲೆಗೆ
ಸೂಸದೆ ಒಡಲೊಳು ನಿಂತಿತು ಹಾಗೆ
ಆಸರಿಕೆ ಬ್ಯಾಸರಿಕೆ ಮನದೊಳಗಾಗೆ
ಮಾಸ ಮಾಸಕೆ ದೇಹ ಪಲ್ಲಟವಾಗೆ ಜೋ ಜೋ ೪

ಒಂದು ಮಾಸಕೆ ಬಾಯಿ ಹೇಸಿಕೆ ತೋರೆ
ಒಂದು ಮತ್ತೊಂದಕ್ಕೆ ಮೊಕ ಬಿಳುಪಾಗೆ
ಒಂದು ಮತ್ತೆರಡಕ್ಕೆ ಕಣ್ಣೊಳಗೆ ಹಸುರೇರೆ
ಒಂದು ಮೂರಕೆಯೆದೆಯು ನರ ಹಸುರೇರೆ ಜೋ ಜೋ ೫

ಬಿಡದೆ ಐದರೊಳು ಮಾಸ ಎಂಟಾಗೆ
ತೊಡೆ ತೋಳು ತುಂಬುತ್ತ ಕುಚ ಕರ್ರಗಾಗೆ
ಒಡನಿರ್ದ ನಾಭಿಯು ನಡೆಯುಂದವಾಗೆ
ಮಡದಿ ನಾಗಮ್ಮನ ನಡು ದೊಡ್ಡದಾಗೆ ಜೋ ಜೋ ೬

ಕಂಡನು ಕೊಂಡೆಯಮಂಚಣ್ಣ ಬಂದು
ಮಂಡಲಪತಿಯೊಳು ಉಸುರಬೇಕೆಂದು ಭೂ
ಮಂಡಲದಲ್ಲಿ ಪ್ರಖ್ಯಾತಾಗಲೆಂದು
ಪಂಡಿತರ ಸಭೆಯಲ್ಲಿ ಪೇಳ್ಯಾನು ನಿಂದು ಜೋ ಜೋ ೭

ಮಂಡಲಪತಿ ನೀನು ಕೇಳೆನ್ನ ಸೊಲ್ಲ
ದಂಡನಾಯಕನಲ್ಲಿ ಆಗುವದಿಲ್ಲ
ಪುಂಡಜಂಗಮರೆಲ್ಲ ತಂದರು ಕಲ್ಲ
ಭಂಡಾಟ ನೋಡಿದುವೆ ಶಿವ ತಾನೆ ಬಲ್ಲ ಜೋ ಜೋ ೮

ಬಸವೇಶ ದೊಡ್ಡಾತ ಮೂರುಲೋಕದಲಿ
ಬಸುರಾದ ನಾಗಮ್ಮ ಗಂಡನಿಲ್ಲದೆ
ಹಸುಳೆಬುದ್ಧಿಯು ಸಲ್ಲುವದೆ ಶರಣೆಗೆ
ವಸುಧೀಶ ಕೇಳಯ್ಯ ನೀನು ಬೇಗದಲಿ ಜೋ ಜೋ ೯

ಆ ನುಡಿಯ ಕೇಳುತ್ತ ಬಿಜ್ಜಳನಾಗ
ಮಾನವೇ ಬಸವೇಶ ಇದು ನಿಮಗೀಗ
ಮನಸಿಜಾರಿಯ ತಂತ್ರಯೆಂದನು ಆಗ
ಬಿನುಗುಬುದ್ಧಿಯ ಬಿಟ್ಟು ಕರೆಸಯ್ಯ ಬೇಗ ಜೋ ಜೋ ೧೦

ನವಮಾಸ ತುಂಬುತ್ತ ಬಿಜ್ಜಳರಾಯ
ತವಕದಿಂ ಕರಸಿದನು ಅಕ್ಕನಾಗಲೆಯ
ಹವಣಿಸಿ ನುಡಿದನು ಇದಕೇನುಪಾಯ
ಸವರಿಸಿ ಕಿವಿ ಮೂಗು ಹೊಲಿಸುವೆನು ಬಾಯ ಜೋ ಜೋ ೧೧

ಪುಂಡ ಜಂಗಮರುಂಟು ಮನೆಯೊಳಗೆಲ್ಲ
ಗಂಡನಿಲ್ಲದ ನಾರಿ ಬಸುರಾಗೋದಲ್ಲ
ಪಿಂಡವು ಶಿಶುವಾಗಿ ಮಾತಾಡಿತಲ್ಲ
ಮಂಡಲಪತಿರಾಯ ಕೇಳೆನ್ನ ಸೊಲ್ಲ ಜೋ ಜೋ ೧೨

ಮಾನ್ಯ ಬಿಜ್ಜಳರಾಯ ಬಿಡು ನಿನ್ನ ಸಿಟ್ಟ
ಕನ್ನೆಯ ಕರತಂದು ನಿಲ್ಲಿಸೊ ಬ್ರಹ್ಮ
ಬೆನ್ನಲ್ಲಿ ಹುಟ್ಟುವೆನು ನೋಡೆನ್ನ ದುಷ್ಟ
ಎನ್ನುತ್ತ ನುಡಿಯೆ ಗರ್ಭದಿ ಶ್ರವಣಶ್ರೇಷ್ಠ ಜೋ ಜೋ ೧೩

ಆಗ ಕೈಮುಗಿವುತ್ತ ನಾಗಲಾಂಬಿಕೆಗೆ
ಬೇಗನೆ ಕೊಳ್ಳವ್ವ ಉಡುಗೊರೆಯು ನಿಮಗೆ
ಪೋಗವ್ವ ತಡವ್ಯಾಕೆ ಮೊದಲಿದ್ದ ಬಳಿಗೆ
ಸಾಗಿಬಂದಳು ಬಾಲೆ ತನ್ನರಮನೆಗೆ ಜೋ ಜೋ ೧೪

ದಿನ ತುಂಬಿ ಹೊತ್ತು ಹೊತ್ತಿಗೆ ಬೇನೆ ಬರುತ
ಮನೆಯ ಹೆಣ್ಣುಗಳು ನಡುವಿಗೆ ಕೈಯನಿಡುತ
ಘನವಾದ ಕೇಶಗಳ ಬಾಯೊಳಗಿಡುತ
ವನಿತೆಯರು ಕೈಯ ಚಪ್ಪಳೆಯಿಕ್ಕಿ ನಗುತ ಜೋ ಜೋ ೧೫

ಆಲಸ್ಯವಿಲ್ಲೆಂದು ಮಡದಿಯರು ನುಡಿಯೆ
ಬಾಲ ಸುಶೀಲನ ಬೆನ್ನಲ್ಲಿ ಹೊಡೆಯೆ
ಬಾಲೆಯರು ಪನ್ನೀರ ಕಣ್ಣಿಗೆ ತೊಡೆಯೆ
ಸೂಲಗಿತ್ತಿ ನೀನು ಹೊರಕ್ಕೆ ನಡೆಯೆ ಜೋ ಜೋ ೧೬

ಅಕ್ಕಯ್ಯ ಹಿಡಿಪೊರವ ಕುಡುಗೋಲ ತನ್ನಿ
ಹೊಕ್ಕಳ ಹುರಿಯನ್ನು ಉಡಿಯೋರೆ ಬನ್ನಿ
ಗಕ್ಕನೆ ಕವರು ಬೇವಿನಸೊಪ್ಪು ತನ್ನಿ
ಚಿಕ್ಕಕಂದಯ್ಯನ ಮೈಯ ತೊಳೆಯೋಣ ಬನ್ನಿ ಜೋ ಜೋ ೧೭

ನಾರಿಗೆ ಸಂಪಿಗೆಯೆಣ್ಣೆಯನು ಪೂಸಿ
ನೀರೆರದು ಪಟ್ಟೆಯ ಮಂಚವ ಹಾಸಿ
ವಾರಿಗೆ ಗೆಣತಿಯರು ಬೆಂಕಿಯ ಕಾಯ್ಸಿ
ಧೀರಕಂದಯ್ಯನ ಮಗ್ಗುಲ ಒಳಗಿರಿಸಿ ಜೋ ಜೋ ೧೮

ಹಿಪ್ಪಲಿಕೆ ಬಜೆ ಲವಂಗ ಮೋದಿ
ಒಪ್ಪುವ ಬಜೆಯು ಓವಿನಕಾಳು ಕೂಡಿ
ತಪ್ಪದೆ ಜಾಕಾಯಿ ತಂದು ಹದಮಾಡಿ
ತುಪ್ಪದೊಳಗೆ ಕಾರ ಕುದಿಯಂದು ನೀಡಿ ಜೋ ಜೋ ೧೯

ಚಿಕ್ಕಚನ್ನಣ್ಣನು ಹುಟ್ಟಿದನೆಂದು
ಲೆಕ್ಕವಿಲ್ಲದ ಕಹಳೆ ಸಾರಿದವೆಂದು
ಅಕ್ಕರದಲ್ಲಿ ಶಿವಶರಣೇರು ಬಂದು
ಹೊಕ್ಕರು ಬಸವನ ಮಂದಿರಕಂದು ಜೋ ಜೋ ೨೦

ಸತ್ಯಕ್ಕ ಚಂಗಳೆ ಕದಿರ ರೇಚವ್ವೆ
ಉತ್ತಮ ಶಿವದೇವಿ ವೀರಸಂಗವ್ವೆ
ಸತ್ತ ಗಂಡನ ಜೀವ ಪಡೆದ ಚನ್ನವ್ವೆ
ಮುತ್ತೈದೆ ಶರಣೆಯರು ಬಂದರು ಬಾಗಿಣಕೆ ಜೋ ಜೋ ೨೧

ಕೋಳೂರುಕೊಡಗೂಸು ದೋಸೆ ಪಿಟ್ಟಕ್ಕ
ಸೂಳೆ ಬೊಮ್ಮಲದೇವಿ ಬಾಲೆ ನಂಬ್ಯಕ್ಕ
ಚೋಳಕ್ಕ ಮಲುಹಣಿ ಮಾಯಿದೇವಕ್ಕ
ಮೇಲಾದ ಶರಣೆಯರು ಬಂದರು ಬಾಗಿಣಕೆ ಜೋ ಜೋ ೨೨

ಹಿಂಗದೆ ಕೂಡಲಸಂಗಮ ಬಂದು
ಜಂಗಮಲಿಂಗ ರುದ್ರಾಕ್ಷಿಯ ತಂದು
ಮಂಗಳಾತ್ಮಕ ಲಿಂಗ ಧರಿಸಬೇಕೆಂದು
ಶರಣೆಯರೆಲ್ಲರು ನುಡಿದರು ಇಂದು ಜೋ ಜೋ ೨೩

ಕಣ್ಣುಕಪ್ಪನೆ ಹಚ್ಚಿ ಒಲು ಅಂದವಾಗಿ
ಬಣ್ಣದ ತೊಟ್ಟಿಲ ಕಟ್ಟಿ ಚೆನ್ನಾಗಿ
ಚಿಣ್ಣನ ಮಲಗಿಸಿ ಜೋ ಎಂದು ತೂಗಿ
ಚೆನ್ನಬಸವನೆಂದು ಹೆಸರಿಟ್ಟು ಕೂಗಿ ಜೋ ಜೋ ೨೪

ಹೆಸರಿಟ್ಟು ಶರಣೆಯರು ತೆರಳಿದರಾಗ
ಬಸವ ನೀಲವ್ವನೀ ಅಳಿಯನಿಗಾಗ
ಹಸುಳನ ಸಲಹುತ್ತ ನಾಗವ್ವ ಬೇಗ
ಶಶಿಧರನೆ ಗತಿಯೆಂದು ಇರುತಿರ್ದರಾಗ ಜೋ ಜೋ ೨೫

ಗುರುಚನ್ನಬಸವನ ಜೋಗುಳ ಪದವ
ಹರುಷದಿಂ ಕಿವಿಗೊಟ್ಟು ಕೇಳಿದರಿಂಗೊಲಿವ
ಕರುಣದಿ ನಡೆಸುವ ಬೇಡಿದ ವರವ
ತುರುವೆಗುಡ್ಡದ ಶಿವಲಿಂಗ ಕೊಡುವ ಜೋ ಜೋ ೨೬

## ಅಕೌಗಳ ಹಾಡು

೨೪೬

ಅಕೌ ಕಂಡೆ ಕನಸಿನೊಳಾನು
ಷಟ್ಖಂಡ ಪೃಥ್ವಿ ಭೂಮಂಡಲಪತಿಗಳೆಲ್ಲರನು
ಅಕೌ ತಂಡ ತಂಡದಲಿ ಒಡ್ಡೋಲಗಗಳೊಪ್ಪಿ
ತಖಿಳಾಂಡ ಭುಗಿಲೆನೆ ಶಬ್ದಘೋಷ ॥ ಪಲ್ಲ

ಅಕೌ ಆಧಾರಚಕ್ರವತಿಪಟ್ಟಣದ ಮಧ್ಯದಲಿ ಚೌದಳಪದ್ಮ ಚೌಕೋಣೆ
ಅಕೌ ಮೇದಿನಿಪತಿಗಳ್ಲಿಗಾಚಾರಲಿಂಗವಾರಾಧನೆಯಿಂದರ್ಚಿಸುವೆ
ಅಕೌ ನಾದ ಪೆಣ್ಣುದುಂಬಿ ನಕಾರ ಬೀಜಾಕ್ಷರ ಋಗ್ವೇದ ಕ್ರಿಯಶಕ್ತಿಸಹಿತ
ಅಕೌನಾದಿ ಸದ್ಯೋಜಾತಮುಖ ಗಂಧದ್ರವ್ಯಗಳ ವೇದಿಸುತ ಗ್ರಹಣುವ ಧನದಲಿ ೧

ಅಕೌ ಅಲ್ಲಿಂದ ಮೇಲೆ ಸ್ವಾಧಿಷ್ಠಾನಚಕ್ರಪುರದಲ್ಲಿ ಷಡ್ದಳಕಮಲವದಕೆ
ಅಕೌ ವಲ್ಲಭನ ಗುರುಲಿಂಗರಾಜಜ್ಞಾನಶಕ್ತಿ ಸಲ್ಲೀಲೆಯಿಂದ ಹರಿಭಜಿಪ
ಅಕೌ ನಿಲ್ಲದುಗ್ಗಡಿಪೆಜುರ್ವೇದದ ಅಲ್ಲಿ ಬೀಜಾಕ್ಷರ ಮಕಾರ
ಅಕೌ ಹ ವಾಮದೇವ ಧನರಸಜಿಹ್ವೆ ಮತ್ತಲ್ಲಿಯಾ ಮುಖದೊಳರ್ಪಿಸುವದ ೨

ಅಕೌ ಮತ್ತದರ ಮೇಲೆ ಮಣಿಪೂರಕದ ಪಟ್ಟಣದ ಹತ್ತೆಸಳು ಕಮಲ ತ್ರೈಕೋಣೆ
ಅಕೌ ಕರ್ತೃ ಶಿವಲಿಂಗರಾಜೇಂದ್ರ ಜ್ಞಾನಶಕ್ತಿ ನಿತ್ಯಪೂಜೆಯ ರುದ್ರ ಮಾಳ್ಪ
ಅಕೌ ಒತ್ತಿ ಹೊಗಳುವ ಸಾಮವೇದ ಘಂಟಾನಾದ ಬಿತ್ತಿನಕ್ಷರ ಶಿಖಾರಥಕೆ
ಅಕೌ ತತ್ವವೇದೆನಿಪ ಘೋರೊಕ್ತ್ರರೂಪದ್ರವ್ಯನೇತ್ರ ಮುಖದೊಳಗರ್ಪಿಸುವವ ೩

ಅಕೌ ಆದರ ಮೇಲಣಹ ತಾ ಪೂರಕೆ ಷೋಡಶದಳದ ಪದುಮವೃಂಟದಕಾರುಕೋಣೆ
ಅಕೌ ಮದರಹಿತಜಂಗಮಲಿಂಗಕಾದಿಯೆ ಶಕ್ತಿ ಮುದವಾಂತು ಈಶನರ್ಚಿಪನು
ಅಕೌ ಒದರುತ ಅಥರ್ವಣವೇದ ಭೇರಿಯನಾದ ಅದರ ಬೀಜಾಕ್ಷರ ವಕಾರ
ಅಕೌ ಸದಮಲ ತತ್ಪುರುಷವದನ ಪರುಷನ ದ್ರವ್ಯಯುದ್ಧರಿಪಡೀ ತೊಕ್ಕೆಂಬ
ಮುಖಕೆ ೪

ಅಕೌ ಆಮೇಲೆ ಶುದ್ಧಿ ಪಟ್ಟಣಕೆ ಷೋಡಶದಳದ ತಾವರಸವದರ ಮಧ್ಯದಲಿ
ಅಕೌ ಪ್ರೇಮಿ ಪ್ರಸಾದಿಲಿಂಗಕೆ ಪರಶಕ್ತಿಗೆ ನೇಮದಿ ಸದಾಶಿವನರ್ಚಿಪನು
ಅಕೌ ಧಾಮಹಮಂತ್ರ ಗಾಯತ್ರಿಯು ಮೇಘಧ್ವನಿ ಸುದಾಮ ಬೀಜಾಕ್ಷರ ಯಕಾರ
ಅಕೌ ನಾಮವೀಶಾನ್ಯವದನ ಶಬ್ದ ದ್ರವ್ಯ ಸೂತ್ರ ಮುಖದೊಳರ್ಪಿಸುವದ ೫

ಅಕೌ ಅಲ್ಲಿಂದ ಮೇಲಗ್ನಿ ಆ ಗ್ರಾಮಮಧ್ಯದೊಳು ಉನ್ಮನ ದ್ವಿದಳದ ಕಮಲ
ಅಕೌ ಚಿನ್ಮಯ ಮಹಲಿಂಗ ಚಿಚ್ಛಕ್ತಿ ನಿರ್ಮುಕ್ತ ಸನ್ನುತ ಪರಶಿವನರ್ಚಿಪನು
ಅಕೌ ಚಿನ್ನಾದ ಬಿಂದು ಕಳೆಗಾಶ್ರಮದ ತೃಪ್ತಿ ದ್ರವ್ಯಯಿನ್ನರ್ಪಿಸಲು ಹೃದಯಮುಖಕೆ
ಅಕೌ ಉನ್ಮನಿಯಿರಲ ಜಪೆಯದುಚ್ಚರಿಪದೋಂಕಾರ ಇನ್ನದರ ಬೀಜಾಕ್ಷರದಕೆ ೬

ಅಕೌ ಇನಿತು ಲೋಕದೊಳಿಹ ಪಟ್ಟಣದೊಳನಿತರೊಳೇಕ ನೆಲೆಗೊಂಡು
ಅಕೌ ಅನುಪಮ ನಿರಾಮಯ ನಿಷ್ಕಲ ಪರಬ್ರಹ್ಮ ಇನಕೋಟಿತೇಜ ರಾಜಿಸಿತು
ಅಕೌ ಮನಕೆ ಮಂಗಳವಾಗಿ ಸಹಸ್ರದಳ ಕಮಲದೊಳಗನುಗೊಳಿಸಿ ಪ್ರಣಮಸ್ವರೂಪ
ಅಕೌ ಘನಮಹಿಮ ಸಿದ್ಧ ಶ್ರೀಗುರುವಿರಲು ನಾಂ ಕಂಡು ಅಕೌ ಅನಿತರೊಳರಿದು
ಕಣ್ದೆರದೆ ೭

# ಮಂಗಳಾರತಿ ಪದ

೨೪೭

ಮಂಗಳಾರತಿಯೆತ್ತಿರಂಗನೆಯರೆಲ್ಲ
ಸಂಗನ ಬಸವಣ್ಣನಿಗೆ ಚೆಣ್ಣನಿಗೆ ॥ ಪಲ್ಲ

ಬರೆದ ಲಿಪಿಯನೋದಿ ಮೆರೆವ ದ್ರವ್ಯವನು ತಾ
ದೊರೆಯು ಬಿಜ್ಜಳನಿಗೆ ತೋರಿದಗೆ ಸಾರಿದಗೆ ೧

ಅಂಗನೆಯರಿಗೆ ತಾ ಲಿಂಗವ ಧರಿಸಿದ
ಜಂಗಮರೂಪು ಮಾಡಿದಗೆ ನೀಡಿದಗೆ ೨

ಭಂಗಪಡುವ ಮಧುವರಸನ ರೋಗವ
ಹಿಂಗದೆ ನೀಗಿದಂತನಿಗೆ ಶಾಂತನಿಗೆ ೩

ಲಕ್ಷದ ಮೇಲೆ ತೊಂಬತ್ತಾರುಸಾವಿರ ನಿತ್ಯಜಂಗಮ
ಕಿಕ್ಕಿದವಗೆ ಸಿಲ್ಕದವಗೆ ೪

ಕರಿಯಲೆ ಪಟ್ಟಗೋಸ್ಕರ ರೇಚಣ್ಣನ
ಧರೆಯೊಳು ಬಿಟ್ಟು ಪೋದವಗೆ ಹೋದವಗೆ ೫

ಮುಕ್ಕಣ್ಣ ಶಿವನ ಬೆನ್ನೊಳು ಪೊತ್ತು ಜನಿಸಿದ
ಅಕ್ಕನಾಗಲೆಯು ಅಣ್ಣನಿಗೆ ತಮ್ಮನಿಗೆ ೬

ಧರೆಯೊಳು ಗುಬ್ಬಿಯ ಪುರ ವಾಸವಾಗಿಹ
ಗುರು ಚನ್ನಬಸವಣ್ಣನಿಗೆ ಚೆಣ್ಣನಿಗೆ ೭

೨೪೮

ಕೊಲ್ಲಿಪಾಕಿಯ ಮಹಾಲಿಂಗದ ಕುಮಾರನಿಗೆ
ಕೊಲ್ಲಾಪುರದ ದೈತೆಯು ಗೆಲಿದಗೆ
ಅಲ್ಲಾಡುತಿರೆ ಕಂಚಿ ಅಲ್ಲಾಳನ ನಿಲಿಸಿದಗೆ
ಕಲ್ಲಿಸೆಟ್ಟಿಗೆ ಕಣ್ಣನಿತ್ತಾತಗೆ ಜಯಮಂಗಳಂ ನಿತ್ಯ ಶುಭಮಂಗಳಂ ೧

ಕುಂಭಸಂಭವಗೆ ಯೋಗಂಗಳನು ಅರುಹಿದಗೆ
...ಕಾತ್ಮಜ ಶಂಕರಾಚ್ಯರಗೆ
ಶಂಭುಶ್ರೀಗಾಯನಿತ್ತ ಗುರುವರಗೆ
ಕುಂಭಿನೀಪತಿ ವಿಕ್ರಮಾರ್ಕಗೊಲಿದವಗೆ ೨

ಗೋರಕ್ಷನಂ ಶಿಕ್ಷೆಗೈದು ರಕ್ಷಿಸುತಿಹಗೆ
ಚಾರು ನವಕೋಟಿಸಿದ್ಧರ ಪೊರೆದಗೆ
ಕ್ರೂರ ಬಿಜ್ಜಳನ ಭಂಗಿಸಿ ಶರಣು ಹೋಗೆ ಕಾಯ್ದ
ವೀರಶೈವಾಂಬುನಿಧಿ ತಾರೇಶಗೆ ೩

ಏಳುನೂರೆಪ್ಪತ್ತು ನಿಜಸತಿಯರಿಗೆ ಮೆಚ್ಚಿ
ಭಾಳಲೋಚನಪುರವ ಕಾಣಿಸಿದಗೆ
ಪಾಳ್ಯವಿಲ್ಲೆಂಕಪುರದ ವಿಭೀಷಣಗೆ ಶಶಿ
ಮೌಳಿಯಂ ತ್ರಿಕೋಟಿಲಿಂಗನ ಒಪ್ಪಿಸಿದಾತಗೆ ೪

ಧರೆಯೊಳಧಿಕವಾದ ಹೊಸಪುರದಿ ನೆಲೆವಾಸ
ದೃಢಭಕ್ತ ಜನರನೆಲ್ಲ ರಕ್ಷಿಪಂ
ಗುರುವರನು ರೇವಣ ಯತಿತೋಂಟಸಿದ್ಧಲಿಂಗೇಶ್ವರಗೆ
ಸರಸಿಜಾಕ್ಷಿಯರಾರತಿಯೆತ್ತಿರೆ ೫

—o—

# ಅನುಬಂಧಗಳು

## ಪಲ್ಲವಿಗಳ ಅಕಾರಾದಿ

(ಅಂಕಿಗಳು ಸ್ವರವಚನಗಳ ಸಂಖ್ಯೆಯನ್ನು ಸೂಚಿಸುತ್ತವೆ)

## ಅಂಕಿತಸೂಚಿ

(ಅಂಕಿಗಳು ಸ್ವರವಚನಗಳ ಸಂಖ್ಯೆಯನ್ನು ಸೂಚಿಸುತ್ತವೆ)



## ಸ್ಥಳನಾಮಸೂಚಿ

## ವ್ಯಕ್ತಿನಾಮಸೂಚಿ

## ರಾಗಸೂಚಿ

ಸುತ್ತೂರು ಶ್ರೀ ಜಗದ್ಗುರು ವೀರಸಿಂಹಾಸನ ಮಹಾಸಂಸ್ಥಾನಮಠ, ನಾಡಿನ ಒಂದು ಪ್ರಾಚೀನ ಧರ್ಮಪೀಠ. ಚೋಳಚಕ್ರೇಶ್ವರನ ಪ್ರಾರ್ಥನೆಯ ಸುಮಧುರ ರಸಾವಿಷ್ಕೃತ ಫಲ. ಸಂಸ್ಥಾಪನಾಚಾರ್ಯರು ಆದಿಜಗದ್ಗುರು ಶ್ರೀ ಶಿವರಾತ್ರೀಶ್ವರ ಭಗವತ್ಪಾದರು. ಆ ಮಹಾಶಿವಯೋಗಿಗಳು ನಿತ್ಯನಿಜಾನಂದದಲ್ಲಿ ಸದಾ ನೆಲೆಸಿರುವ ಶಿವಯೋಗಸಮಾಧಿ—ಅದುವೆ ಶ್ರೀಕರ್ತೃಗದ್ದುಗೆ. ಅದು ನಿಶ್ಚಿಂತ ನಿಜನಿವಾಸ, ಬೆಳಕಿನ ಪ್ರಶಾಂತ ಆವಾಸ. ಅಲ್ಲಿಂದ ಹೊರಹೊಮ್ಮುವ ಶಿವಬೆಳಗು ಸರ್ವವ್ಯಾಪಿಯಾಗಿ ಹರಹಿದೆ. ನಡೆದು ಬರುತ್ತಿದೆ ಮನುಕುಲದ ಕಲ್ಯಾಣ ಅಸದೃಶವಾಗಿ. ಉಜ್ವಲವಾದ ಆ ಗುರುಪರಂಪರೆಯಲ್ಲಿ ಬಂದ ಮಹಾನುಭಾವರೆಲ್ಲರೂ ಕಾರುಣ್ಯಸಿಂಧುಗಳು, ಲೋಕೈಕಬಂಧುಗಳು.

ನಾಡಿನ ಧಾರ್ಮಿಕ–ಸಾಮಾಜಿಕ, ಶೈಕ್ಷಣಿಕ—ಸಾಂಸ್ಕೃತಿಕ ಕ್ಷೇತ್ರಗಳ ಸಮಗ್ರ ಅಭಿವೃದ್ಧಿಗೆ ಶ್ರೀಮಠದ ಸೇವೆ ಅಮೋಘ ಹಾಗೂ ಅದ್ವಿತೀಯ. ಸಾಹಿತ್ಯ–ಸಂಗೀತ–ಕಲೆಗಳಿಗೆ ನೀಡುತ್ತಿರುವ ಕೊಡುಗೆ ಅಸಂಖ್ಯ ಹಾಗೂ ಗಣನೀಯ. 'ಪರಮಶಿವಾಧ್ಯಕ್ಷ ಚೂಡಾಮಣಿ' ಗ್ರಂಥವನ್ನು ರಚಿಸಿ ಶ್ರೀ ಮಲೆಯಮಾದೇಶ್ವರರಿಗೆ ಆಶ್ರಯ ನೀಡಿದ ಸಿದ್ಧನಂಜದೇಶಿಕೇಂದ್ರರು; 'ಅಮುಗಿದೇವಯ್ಯಗಳಸಾಂಗತ್ಯ'ವನ್ನು ಬರೆದ ಕವಿ ಶಿವಲಿಂಗದೇವನಿಗೆ ಪ್ರೇರಕ—ಪೋಷಕರಾದ ಕಟನೀನಂಜುಂಡದೇಶಿಕೇಂದ್ರರು; ತೋಂಟದ ಸಿದ್ಧಲಿಂಗಯತಿಗಳ ಶಿಷ್ಯಪ್ರಮುಖರಲ್ಲಿ ಒಬ್ಬರಾಗಿ ಸ್ವತಂತ್ರವಚನಕಾರರೆಂದು ಪ್ರಸಿದ್ಧರಾದ ಘನಲಿಂಗಿಶಿವಯೋಗಿಗಳು; 'ಮಂತ್ರಮಹರ್ಷಿ'ಗಳೆನಿಸಿ 'ಶಿವಮಂತ್ರಮಹಿಮೆ' ಗ್ರಂಥವನ್ನು ನೀಡಿದ ಜಗದ್ಗುರು ಶ್ರೀ ಶಿವರಾತ್ರೀಶ್ವರ ಮಹಾಸ್ವಾಮಿಗಳು; 'ಘನಲಿಂಗಿದೇವರ ವಚನಗಳು' ಮತ್ತು ಶ್ರೀ ಗೌರೀಶಂಕರ ಮಹಾಸ್ವಾಮಿಗಳವರ 'ಅಕ್ಕಮಹಾದೇವಿ' ಚಂಪೂಕಾವ್ಯ—ಇವುಗಳನ್ನು ಸಂಪಾದಿಸಿಕೊಟ್ಟ 'ಶ್ರೀಮನ್ಮಹಾರಾಜ ರಾಜಗುರುತಿಲಕ' ಜಗದ್ಗುರು ಡಾ. ಶ್ರೀ ಶಿವರಾತ್ರಿರಾಜೇಂದ್ರ ಮಹಾಸ್ವಾಮಿಗಳು; 'ಮುಪ್ಪಿನ ಷಡಕ್ಷರಿಗಳ ಕೈವಲ್ಯಪದ'ವನ್ನು ಸಂಪಾದಿಸಿಕೊಟ್ಟು ಗ್ರಂಥ ಪ್ರಕಾಶನಕ್ಕೆ ಪ್ರೋತ್ಸಾಹವೀಯುತ್ತಿರುವ ಪೂಜ್ಯ ಜಗದ್ಗುರು ಶ್ರೀ ಶಿವರಾತ್ರಿದೇಶಿಕೇಂದ್ರ ಮಹಾಸ್ವಾಮಿಗಳು—ಇವರೇ ಮೊದಲಾದ ಗುರುವರೇಣ್ಯರು ಕೈಕೊಂಡ ಧರ್ಮಸಂರಕ್ಷಣೆ—ಸಾಹಿತ್ಯಪರಿಪೋಷಣೆ ಗಮನಾರ್ಹ ಹಾಗೂ ಸ್ತುತ್ಯರ್ಹ. ಮನುಕುಲದ ಏಳಿಗೆಗಾಗಿ ಶ್ರೀಪೀಠದಿಂದ ಸಲ್ಲುತ್ತಿರುವ ಮಹತ್ಸೇವೆ ಅಭಿನಂದನೀಯ ಹಾಗೂ ಸದಾ ಸಂಸ್ಮರಣೀಯ!

---

ಜಗದ್ಗುರು ಶ್ರೀ ಶಿವರಾತ್ರೀಶ್ವರ ಗ್ರಂಥಮಾಲೆ : ಮೈಸೂರು